# ಸರ್ವಜ್ಞ ವಚನಗಳು

ಊರೆಲ್ಲ ನೆಂಟರು । ಕೇರಿಯೆಲ್ಲವ್ರ ಬಳಗ ।
ಧಾರಿಣಿಯಲ್ಲ ಕುಲದೈವನಾಗಿನ್ನು ।
ಯಾರನ್ನು ಬಿಡಲೊ ! ಸರ್ವಜ್ಞ ॥

ಚ. ಉತ್ತಂಗಿ

# ಸರ್ವಜ್ಞಮೂರ್ತಿ

ಸಾಹಿತ್ಯರಂಗದಲಿ ಕನ್ನಡದ ಜನತೆಯಲಿ
ಕ್ರಾಂತಿ ತಂದವನಾರು? ಸ್ವಾತಂತ್ರ್ಯದುಸಿರಾಡಿ,
ಹಂಗ ಹರಿದೊಗೆದು, ತಾ ಕಂಡುಂಡ ಸತ್ಯವನು
ಜನತೆಗೊರೆದವನಾರು? ಬಾಳತಿದ್ದಿದನಾರು?
ಜನರೆದೆಯ ನಾಡಿಯನು ಹಿಡಿದು ನೋಡಿದ ಧೀರ
ಮನಸಿನಲಿ ಮೂಡಿದುದ, ನಿರ್ಭಯದೆ ನುಡಿದ ವೀರ
ತಿರುಳಿಲ್ಲದಿಹ ವಾದ, ಮೇಲುಕೀಳಿನ ಭೇದ
"ದೇವನೊಲಿದಾತನೇ ಜಾತ"ನೆಂಬೀ ಮಾತ
ಸಾರಿ ಹೇಳಿದ ಕವಿಯೆ ! ಶರಣೆಂಬೆನಯ್ಯ !
ಸರ್ವತತ್ವವನರಸಿ, ಸರ್ವ ಧರ್ಮವನರಿದು,
ಸರ್ವೇಶನಿರವರಿತು, ಸರ್ವಜ್ಞ ನೀನಾದೆ
ನೀತಿಪತನವ ಕಂಡು, ಮೂಢ ಜನತೆಯ ನೋಡಿ
ಹೇಸಿ, ಸಂಸಾರವನು ಹರಿದೊಗೆದು ಒಂಟಿಯಲಿ
ತಿರುಗುತ್ತ, ಯಾರಿಗೂ ಬಾಗದಲೆ, ಬೆದರದಲೆ
ಜನರ ಮೌಢ್ಯವ ಹರಿಸೆ, ಎದೆಹಿಡಿದು ಬೋಧಿಸುತ
ಕೋಪಿಸುತ, ನಗಿಸುತ್ತ, ಸತ್ಯವನೆ ಸಾರುತ್ತ,
ಹೊರಗೆ ಭೀಷಣನಾಗಿ, ಒಳಗೊಳಗೆ ಮರುಗುತಲಿ
ತೆಗಳಿಕೆಗೆ ಕುಗ್ಗದಲೆ, ಹೊಗಳಿಕೆಗೆ ಹಿಗ್ಗದಲೆ,
ಬಾಳ ಹಸನಾಗಿಸುವ ನೈಜ ತತ್ವವ ಸಾರಿ,
ಜಗದ ನೀತಿಯ ತಿದ್ದಿ, ನೀನಮರ ಕವಿಯಾದೆ
ಸ್ವಾತಂತ್ರ್ಯಪಥದೊಳಗೆ ಸತ್ಯಮಾರ್ಗದಿ ಬಾಳಿ
ಸಕಲ ಸತ್ಯವ ಕಂಡು, ಸಾರಿ ಹೇಳಿದ ಕವಿಯೆ,
ಸರ್ವಧರ್ಮದ ಸಾರ "ಸತ್ಯಮೇಕಂ" ಎಂದ
ಸುಜ್ಞಾನಿ, ಶರಣೆಂಬೆ. ಬೆಳಕ ತೋರೈ !

ಎಂ. ಎಸ್. ಮೂರ್ತಿ, (ಜೀವನ)

*opular Edition*

# SARVAJNA VACHANAS



ತ್ರಿಪದಿರೂಪವಾಗಿ ರಚಿಸಿದ

# ಸರ್ವಜ್ಞ ವಚನಗಳು

( ತಿದ್ದಿದ ಹೊಸ ಆವೃತ್ತಿ )

---

**ಚೆನ್ನಪ್ಪ ಉತ್ತಂಗಿ**

**ಬಾಸೆಲ್ ಮಿಶನ್, ಧಾರವಾಡ**

---

೧೯೫೭

೯ನೆಯ ಮುದ್ರಣ



**ಬೆಲೆ · ೨-೧೨-೦**

# ಹಿರಿಯ ಜೀವ

ಯಾರ ಅಭಿಶಾಪವೋ, ಸರ್ವಜ್ಞ ಮೂರುತಿಗೆ !
ಅಮರನಲ್ಲವೆ ‹ ಪುಷ್ಪದತ್ತ › ಗಂಧರ್ವನವ ?

ಕರದಿ ಕಪ್ಪರ ಹಿಡಿದು, ಹಿರಿದಾದ ನಾಡಿನಲಿ
ತಿರಿದು ತಿನ್ನುತ ತನ್ನ ಕಿರಿದು ನಾಳ್ನುಡಿಗಳಲಿ
ಹಿರಿಯ ಹುರುಳನು ತುಂಬಿ ಜನಮನಕೆ ತಿನ್ನಿಸುತ,
ಕನ್ನಡದ ಮಲೆನಾಡ—ಕನ್ನಡ ಬಯಲ್ನಾಡ—
ಮೂಡ- ಪಡುವಲ-ಬಡಗ–ತೆಂಕಣವನಲೆದಾಡಿ,
ಕನ್ನಡಿಗರೆಲ್ಲರನು ಕಂಡಿರ್ದ , ಆ ಕವಿಯ
ಕನ್ನಡಿಗರೆಲ್ಲ ಕಣ್ಣಾರೆ ಕಂಡಿದ್ದರು.

ಆ ಕವಿಯ ನಗೆನುಡಿಯ ಕೇಳಿ ನಕ್ಕಿರ್ದರು,
ಆತನಾ ಕಿರಿನುಡಿಗೆ ನಡುಗುವಡೆದಿರ್ದರು,
ಅವನ ಬೆಡಗನು ಕೇಳಿ ಬೆರಗುವಟ್ಟಿರ್ದರು,
ಅವನ ಜೋಯಿಸ ಕೇಳಿ ಸೊಬಗನಾಂತಿರ್ದರು,
ಅವನ ವೈದ್ಯಕದಿಂದ ಬೇನೆಯಂ ನೀಗಿರ್ದ
ರವನ ರಸವೈದ್ಯದಲಿ ಕಲ್ಲು–ಕಬ್ಬಿಣವನೂ
ಕಾಂಚನವನಾಗಿ ಮಾಡುವ ಬಗೆಯಂಲಿರ್ದರು.
ಭವ್ಯದೇಹದ ಬ್ರಹ್ಮಚಾರಿ ಸರ್ವಜ್ಞನನು
ಬಲ್ಲದವರಿರಲಿಲ್ಲ ನಾಡಿನಲಿ. ಆದರೆ—
ಯಾರ ಶಾಪವೊ ಏನೊ ಆ ಅಮರಕವಿಗೆ !
ಒಮ್ಮೆಯೆ ಅವನ ಮೈಯಳಿದು ಹೋಯಿತ್ತು—ಕೆಚ್ಚು
ಗಟ್ಟಿರ್ದ ಅವನೊಡಲು ನುಚ್ಚುನೂರಾಯಿತ್ತು.

ಆ ಊರಲೊಂದು ಚೂರ್ ಈ ಊರಲೊಂದು ಚೂರ್,
ಹಳ್ಳಿಗೊಂದೊಂದು ಚೂರ್ ಹಟ್ಟಿಗೊಂದೊಂದು ಚೂರ್,
ಹೊಲೆಯರಲಿ ತುಣುಕೊಂದು ಹಾರುವರಲಿನ್ನೊಂದು,
ಕುರುಬ-ಕುಂಬಾರ-ಜೇಡ-ಕಮ್ಮಾರರಲ್ಲೊಂದು ;
ಒಕ್ಕಲಿಗರಲ್ಲಿಯಾಲೆಕ್ಕಿಗರ ಮನೆಯಲ್ಲಿ—
ಮಕ್ಕಳಾಟಕೆ ಸಿಕ್ಕಿ, ದಿಕ್ಕುದಿಕ್ಕಿಗೆ ಚೂರು
ಸಿಕ್ಕಂತೆ ಚೆದರಿ, ಸರ್ವಜ್ಞಮೂರ್ತಿಯ ಮೂರ್ತಿ
ಕಾಣದಂತಾಯಿತ್ತು ಕನ್ನಡದ ನಾಡಿನಲಿ !

ಯಾರ ಶಾಪವೊ ಕಾಣೆ ಆ ಅಮೃತ ಮೂರುತಿಗೆ !
ಮೂರ್ತಿ ಅಳಿದರೆಯು ಅತನ ಕೀರ್ತಿ ನಾಡಿನಲಿ
ಸುಳಿದಾಡುತಿತ್ತು , ಸರ್ವಜ್ಞನಾಸವಿಹೆಸರು
ಕನ್ನಡರ ಬಾಯಿ-ಕಿವಿಗಳಲಿ ಮನೆ ಮಾಡಿತ್ತು.
ಅಮರಕವಿ ಸರ್ವಜ್ಞ , ಶಾಪಕ್ಕೆ ಸಾಯುವನೆ ?
ಶಾಪಮೋಚನ ಸಮಯ ಸಂದುಬಂದಿತ್ತು ಕಾಲ
ತಾನೆ ಮಾಡುವನೇನು ತನ್ನ ಕೆಲಸವನೆಲ್ಲ ?
ಯಾವುದೋ ಹಿರಿಯ ಜೀವವನೊಂದ ಕರೆಯುವನು,
ಅದರ ಉಸಿರಲಿ ತನ್ನ ಉಸಿರನ್ನು ಊದುವನು,
ತನ್ನ ಕಜ್ಜವನೆಲ್ಲ ಮಾಡಿಸುವನದರಿಂದೆ,
ಆ ಜೀವವನೇ ‘ ಮಹಾಪುರುಷ ’ ಎನ್ನುತ ಲೋಕ
ಕೊಂಡಾಡಿ ಕೊನೆವಂತೆ ಮಾಡುತಿಹನಾತ

ಸರ್ವಜ್ಞನ ನುಚ್ಚುನೂರಾದ ಕಾಯವನು
ಮರಳಿ ಸಂದಿಸಿ ಮೂರ್ತಿಯನು ನಿರ್ಮಿಸಲೆಂದು
ಕಾಲನಾರಿಸಿದ ಕನ್ನಡದೊಂದು ಹಿರಿಜೀವ
ದಿಕ್ಕುದಿಕ್ಕಿಗೆ ಚೆದರಿ ಬಿದ್ದಿರ್ದ ಕವಿರಾಯ
ನಾವ್ಯೆಯ ನುಚ್ಚುನೂರುಗಳನೂರ್ಗೂಡಿಸುತ,
ತನ್ನ ಹಿರಿಮೆಯ ತಪವ—ಸಂಜೀವಶಕ್ತಿಯಲಿ
ಸರ್ವಜ್ಞಕವಿಗೆ ಉಸಿರನ್ನಿತ್ತಿತಾಜೀವ.
ಮೊಯ್ಯಳಿದ ಕವಿ ಮತ್ತೆ ಮೆಯ್ಯಾಂತು ನಿಲ್ಲುವಂ
ದದಿ ಮಾಡಿತಾಹಿರಿಯಜೀವ , ಈ ದಿನ ಮತ್ತೆ
ಸರ್ವಜ್ಞ ಮರಳಿ ಮಾತಾಡುತಿಹ ನೈಗೊಂಡು.

ಕನ್ನಡಕೆ ಸರ್ವಜ್ಞ ಕವಿಯನೊದಗಿಸಿಕೊಟ್ಟ
ಹಿರಿಜೀವ ಕನ್ನಡದ ಸೌಭಾಗ್ಯವದು ಸತ್ಯ !
ಕಾಲನೆ ಒಪ್ಪಿರಲು ಅದರ ಹಿರಿಮೆಯನಿನ್ನು
ಕನ್ನಡರು ಒಪ್ಪದೇನಿರುವರೇ ? ಆ ಜೀವ
ಕನ್ನಡದ ನಾಡಿನಲಿ ಬಹುಕಾಲ ಬಾಳಲಿ !
ಅಳಾದ ಕನ್ನಡವು ಅರಸಾಗಿ ಬಾಳ್ವುದನು
ಕಣ್ಣಾರೆ ಕಂಡು ಸುಖ-ಶಾಂತಿಯನು ತಾಳಲಿ !

—ಕವಿಭೂಷಣ ಬೆಟಗೇರಿ ಕೃಷ್ಣಶರ್ಮ
“ ಜಯಂತಿ ” ಪತ್ರಿಕೆಯ ಸಂಪಾದಕರು



ಸರ್ವಜ್ಞನ ಭಾವಚಿತ್ರ

# ಸರ್ವಜ್ಞನ ತ್ರಿಪದಿ

## (ಸರ್ವಜ್ಞಮೂರ್ತಿ ವಚನಗಳು)

### ೧. ಪೀಠಿಕಾ ಪ್ರಕರಣ

#### ಗಣೇಶನಿಗೆ ಪ್ರಾರ್ಥನೆ

ನಂದಿಯನು ಏರಿದನ । ಚಂದಿರನ ಸೂಡಿದನ ।
ಕಂದನ ಬೇಡಿ ನಲಿದಾನು ನೆನೆವುತ್ತ ।
ಮುಂದೆ ಪೇಳುವೆನು ಸರ್ವಜ್ಞ ॥ ೧ ॥

ಅಂದು ಜೇಡರ ದಾಸ । ಹಿಂದೆ ನಾ ವರರುಚಿಯು ।
ಇಂದು ಸರ್ವಜ್ಞ ನಾ ನಿಮ್ಮ ಕರುಣದ ।
ಕಂದ ಕಾಣಯ್ಯ ಸರ್ವಜ್ಞ ॥ ೨ ॥

#### ಸರ್ವಜ್ಞನ ಪೂರ್ವಜನ್ಮಸ್ಮರಣೆ

ಮುನ್ನ ಕೈಲಾಸದಲಿ । ಪನ್ನಗಧರನಾಳು ।
ಎನ್ನಯ ಪೆಸರು ಪುಷ್ಪದತ್ತನು ಎಂದು ।
ಮನ್ನಿಪರು ದಯದಿ ಸರ್ವಜ್ಞ ॥ ೩ ॥

ಅಂದಿನ ಪೂದತ್ತ । ಒಂದ ವರರುಚಿಯಾಗಿ ।
ಮುಂದೆ ಅವ ಸಾಲಿ ಸರ್ವಜ್ಞನೆಂದೆನಿಸಿ ।
ನಿಂದವನು ನಾನೆ ಸರ್ವಜ್ಞ ॥ ೪ ॥

#### ಸರ್ವಜ್ಞನ ಜನನ

ಮಕ್ಕಳಿಲ್ಲವು ಎಂದು । ಅಕ್ಕಮಲ್ಲಮ್ಮನು ।
ದುಕ್ಕವ ಬಸವರಸಗರುಪಲು ಕಾಶಿಯು ।
ಮುಕ್ಕಣ್ಣನೊಲಿದ ಸರ್ವಜ್ಞ ॥ ೫ ॥

ಮಾಸೂರ ಬಸವರಸ । ಕೂಸನೀಶನ ಕೇಳೆ ।
ಕಾಶಿಯ ಅಭವನೊಳು ಪಡೆದ ವರವದುವೆ ।
ನೂಸಿತೆಂತೆನಲು ಸರ್ವಜ್ಞ ॥ ೬ ॥

ಗಂಡಾಗಬೇಕೆಂದು । ಪಿಂಡವನು ನುಂಗಲದು ।
ರಂಡೆ ಮಾಳವ್ವೆಯೊಳು ಬರುವದೆಂತೆನಲು ।
ಕಂಡದನು ಪೇಳ್ದ ಸರ್ವಜ್ಞ ॥ ೭ ॥

ಗಡಿಗೆ ಮಡಿಕೆಯ ಕೊಂಡು । ಅಡಿಗೆಯ ವೇಳೆಯೊಳು ।
ಬಿಡದೆ ಮಳೆ ಮೋಡ ಪೊಡೆಯಲ್ಕೆ ಈರ್ವರಿಗೆ ।
ತಡಬಡಲಾಯ್ತು ಸರ್ವಜ್ಞ ॥ ೮ ॥

ಅಂಬಲೂರೊಳಗೆನೆವ । ಕುಂಬಾರ ನಾಲೆಯಲಿ ।
ಇಂಬಿನ ಕಳೆಯ ಮಾಳಿಯೊಳು ಬಸವರಸ ।
ನಿಂಬಿಟ್ಟನೆನ್ನ ಸರ್ವಜ್ಞ ॥ ೯ ॥

ಬಿಂದುವನು ಬಿಟ್ಟುಹೋ । ದಂದು ಬಸಿರಾದವಳು ।
ಒಂದಾಗಿ ಹೊತ್ತು ದಶಮಾಸ ಉದರದೊಳು ।
ನಿಂದಾನು ಬೆಳೆದೆ ಸರ್ವಜ್ಞ ॥ ೧೦ ॥

ಹೆತ್ತವಳು ಮಾಳಿಯೆ । ನ್ನೊತ್ತಿ ತೆಗೆದವಳು ಬೆ ।
ನ್ನೊತ್ತಿ ಹಿಡಿದವಳು ಕಾಳಿ ತಾ ಮೊರದೊಳಗೆ ।
ಬಿತ್ತರಿಸಿದವಳು ಸರ್ವಜ್ಞ ॥ ೧೧ ॥

## ಬಾಲ್ಯವೂ ಪ್ರೌಢತ್ವವೂ

ಬೆಳೆಯನ್ನದರಿದೆಂದು । ಕಳಯ ಕಂಡವರಿಲ್ಲ ।
ಮೊಳೆಯಲ್ಲಿ ಸಸಿಯನರಿತು ತಾಂ ಮಾಳಿಯನು ।
ತಿಳಿವವರು ಅರಿಗು ಸರ್ವಜ್ಞ ॥ ೧೨ ॥

ಗಂಡು ತನ್ನದು ಎಂದು । ಲೆಂಡೆ ಸುತನೆಂಬುವಳು ।
ಖಂಡಪರಶುವಿನ ವರಪುತ್ರ ಆನು ನೆರೆ ।
ಕಂಡುದನೆ ನುಡಿದೆ ಸರ್ವಜ್ಞ ॥ ೧೩ ॥

ಮಾಳನೂ ಮಾಳಿಯೂ। ಕೂಳಿತ್ತ ಹೆಮ್ಮೆಯಲಿ।
ಕೇಳಲಿನ್ನಾರ ಮಗನೆಂದು ನಾ ಶಿವನ।
ಹೇಳದವನೆಂದೆ ಸರ್ವಜ್ಞ ॥ ೧೪ ॥

ತಾ, ಯೆಂಬೆನಲ್ಲದೆ। ತಾಯಿ ನಾನೆಂಬೆನೆ?।
ತಾಯಿಯೆಂದಾನು ನುಡಿದೇನು ಪರಸ್ತ್ರೀಯ।
ತಾಯಿಯೆಂದೆಂಬೆ ಸರ್ವಜ್ಞ ॥ ೧೫ ॥

ನೂಕಿದರು ಅವರಾಗ। ಕೂಕತನದೊಳು ಬೇಗ।
ಲೋಕದೊಳಗೆಲ್ಲ ಕಂಡುದನು ನುಡಿದು ತಾ।
ನೇಕವಾಗಿಹನು ಸರ್ವಜ್ಞ ॥ ೧೬ ॥

ಲಿಂಗದೀಕ್ಷೆ

ಕುರುಹು ದೊರೆಯಿತು ದೇಹ। ಅರಿವನರಿಯಿತು ಪ್ರಾಣ।
ಹೆರುವಾಗಿಹೋಯ್ತು ಭವಪಾಶ ಮುಕ್ತಿಯು।
ಇರವು ನಿರವಯವು ಸರ್ವಜ್ಞ ॥ ೧೭ ॥

ಮೀರಿ ಬೆಳೆಯಲು ತನುವು। ಆರು ಬಣ್ಣವನುಡಿಸಿ।
ಮೂರು ರುಚಿದೋರಿ ಮರೆಸಿ ತಾ ತನ್ನನೆ।
ತೋರದೇ ಹೋದ ಸರ್ವಜ್ಞ ॥ ೧೮ ॥

ಶಿವಜ್ಞಾನಿಗೆ ಕುಲವಿಲ್ಲ

ಕುಲಗೆಟ್ಟವರ ಚಿಂತೆ। ಒಳಗಿರ್ಪರಂತಲ್ಲ।
ಕುಲಗೆಟ್ಟು ಶಿವನ ಮರೆಹೊಕ್ಕ ಋಷಿಗಳು।
ಕುಲವಾದರಯ್ಯ ಸರ್ವಜ್ಞ ॥ ೧೯ ॥

ಹೊಲಸು ಮಾಂಸದ ಹುತ್ತ। ಎಲುವಿನ ಹಂದರವು।
ಹೊಲೆ ಬಲಿದ ತನುವಿನೊಳಗಿರ್ದು ಮದರೊಳಗೆ।
ಕುಲವನರಸುವರೆ ಸರ್ವಜ್ಞ ॥ ೨೦ ॥

ಎಲುವಿನೀಕಾಯಕ್ಕೆ। ಸಲೆ ಚರ್ಮದ ಹೊದಿಕೆ।
ಮಲಮೂತ್ರ ಕ್ರಿಮಿಗಳೊಳಗಿರ್ದ ದೇಹಕೆ।
ಕುಲವಾವುದಯ್ಯ ಸರ್ವಜ್ಞ ॥ ೨೧ ॥

ಮಾಸಿನೊಳು ಮುಸುಕಿರ್ದು । ಸೂಸಿ ಬಹ ದಾನನದಿ ।
ಹೇಸಿಕೆಯು ಮಲವು ಸೂಸುವದ ಕಂಡು ಕುಲ ।
ಆಸೆಯನು ಬಿಡರು ಸರ್ವಜ್ಞ ॥ ೨೨ ॥

ಸರ್ವಜ್ಞನೊಬ್ಬನು

ಸರ್ವಜ್ಞನೆಂಬವನು । ಒರ್ವನೆ ಜಗಕೆಲ್ಲ ।
ಸರ್ವಜ್ಞರೀರ್ವರಾಗಲ್ಕೆ ತನಗಾಗಿ ।
ಕರ್ಮವೆಸಗಿಹನೆ? ಸರ್ವಜ್ಞ ॥ ೨೩ ॥

ಸರ್ವಜ್ಞ ವಚನಗಳು

ಏಳು ಕೋಟಿಯೆ ಕೋಟಿ । ಏಳು ಲಕ್ಷವೆ ಲಕ್ಷ ।
ಏಳು ಸಾವಿರದ ಎಪ್ಪತ್ತು ವಚನಗಳ ।
ಹೇಳಿದನು ಕೇಳೊ ಸರ್ವಜ್ಞ ॥ ೨೪ ॥

ಸರ್ವಜ್ಞನ ವಿನಯ

ಸರ್ವಜ್ಞನೆಂಬವನು । ಗರ್ವದಿಂದಾದವನೆ? ।
ಸರ್ವರೊಳೊಂದೊಂದು ನುಡಿಗಲಿತು ವಿದ್ಯದ ।
ಗರ್ವತವೆ ಆದ ಸರ್ವಜ್ಞ ॥ ೨೫ ॥

ಸರ್ವಜ್ಞನರಿದಿಹನು । ಸರ್ವರನು ಅರಿದಿಹನು ।
ಸರ್ವಜ್ಞನರಿಯದಿರುತಿಹನು ಉರ್ವಿಯೊಳು ।
ಗರ್ವಿ ತಾನಕ್ಕು ಸರ್ವಜ್ಞ ॥ ೨೬ ॥

ಕೃತಜ್ಞತೆ

ಹೇಳಲರಿಯೆನು ನಾನು । ಹೇಳಿನಲು ಹೇಳಿದೆನು ।
ಬಾಳಲೋಚನನ ಶರಣರ ಆಳಾಗಿ ।
ಹೇಳಿದೆನು ನೋಡ! ಸರ್ವಜ್ಞ ॥ ೨೭ ॥

ಎನ್ನ ಮನಸಿಗೆ ನೆನಹ । ಪನ್ನಗಾಧರ ಕೊಟ್ಟ ।
ಬಿನ್ನಾಣದಿಂದ ಸ್ತುತಿಗೈದು ಪೊಗಳುವೆ ।
ಚಿನ್ನ ಮೂರುತಿಯ ಸರ್ವಜ್ಞ ॥ ೨೮ ॥

ಎಲ್ಲ ಬಲ್ಲವರಿಲ್ಲ | ಬಲ್ಲವರು ಬಹಳಿಲ್ಲ |
ಬಲ್ಲಿದರು ಇದ್ದು ಬಲವಿಲ್ಲ, ಸಾಹಿತ್ಯ |
ವೆಲ್ಲವರಿಗಿಲ್ಲ ಸರ್ವಜ್ಞ || ೨೯ ||

## ೨. ಗುರುಪದ್ಧತಿ

### ಗುರುವಿನ ವಿಷಯ

### ಗುರುಮಹಾತ್ಮ್ಯೆ

ಗುರುವಿನ ವಿಸ್ತರದ | ಪರಿಯ ನಾನೇನೆಂಬೆ! |
ಮೆರೆವ ಬ್ರಹ್ಮಾಂಡದೊಳಹೊರಗನವಬೆಳಗಿ |
ಪರಿಪೂರ್ಣನಿಪ್ಪ ಸರ್ವಜ್ಞ || ೩೦ ||

### ಗುರುವಿನ ಅಗತ್ಯ

ಹರ ತನ್ನೊಳಿರ್ದು ಗುರು | ತೋರದಿರೆ ತಿಳಿವುದೆ? |
ಮರದೊಳಗೆ ಆಗ್ನಿ ಇರುತಿರ್ದು ತನ್ನ ತಾ |
ನರಿಯುದೇಕೆಂದ ಸರ್ವಜ್ಞ || ೩೧ ||

ಮೂರು ಕಣ್ಣೀಶ್ವರನ | ತೋರಿ ಕೊಡಬಲ್ಲ ಗುರು |
ಬೇರರಿವುದೊಂದು ತೆರನಿಲ್ಲ, ಗುರುಕರುಣ |
ತೋರುವುದು ಹರನ ಸರ್ವಜ್ಞ || ೩೨ ||

ಜ್ಯೋತಿಯಿಂದಲಿ ನೇತ್ರ | ರಾತ್ರಿಯೊಳು ಕಾಂಬಂತೆ |
ಸೂತ್ರದಿಂ ಧಾತನರಿವಂತೆ ಶಿವನ ಗುರು |
ಸಾಧನಿಂದರಿಗು ಸರ್ವಜ್ಞ || ೩೩ ||

ವಿದ್ಯ ಕಲಿತಡೆ ಇಲ್ಲ | ಬುದ್ಧಿ ಕಲಿತಡೆ ಇಲ್ಲ |
ಉದ್ಯೋಗ ಮಾಡಿದಡೆ ಇಲ್ಲ, ಗುರುಮುಖವು |
ಇದ್ದಲ್ಲದಿಲ್ಲ ಸರ್ವಜ್ಞ || ೩೪ ||

ಮಂಡೆ ಬೋಳಾದೊಡಂ | ದಂಡ ಕೋಲ್ವಿಡಿದೊಡಂ |
ಹೆಂಡತಿಯ ಬಿಟ್ಟು ನಡೆದೊಡಂ ಗುರುಮುಖವ |
ಕಂಡಲ್ಲದಿಲ್ಲ ಸರ್ವಜ್ಞ || ೩೫ ||

ಕಾಣಲೊಲ್ಲದೆ ತನ್ನ । ತ್ರಾಣವನು ನೆರೆನಂಬಿ ।
ಜಾಣತನವನ್ನು ತೋರಿದರೆ ಗುರುಮುಖವ ।
ಕಾಣದೆ ಹೋಹ ಸರ್ವಜ್ಞ ॥ ೩೬ ॥

ಪ್ರಾಣವನು ನೆರೆನಂಬಿ । ಮಾಣದಲೆ ಭೋಗಿಸುತ ।
ಪ್ರಾಣದ ಬೆಲೆಯನರಿಯದಗೆ ಗುರುಮೂರ್ತಿ ।
ಕಾಣಿಗು ಕಷ್ಟ । ಸರ್ವಜ್ಞ ॥ ೩೭ ॥

ಗುರುಲಕ್ಷಣ

ಊರಿಂಗೆ ದಾರಿಯನು । ಆರು ತೋರಿದಡೇನು ।
ನಾರಾಯಣದ ನಿಜವ ತೋರುವ ಗುರುವು ತಾ ।
ನಾರಾದಡೇನು ಸರ್ವಜ್ಞ ॥ ೩೮ ॥

ಪರತತ್ವ ತನ್ನೊಳಗೆ । ಎರವಿಲ್ಲದಿರುತಿರ್ದ್ದು ।
ಪರದೇಶಿಯಂತೆ ಇರುತಿಪ್ಪ ಯೋಗಿಯನು ।
ಪರಮ ಗುರುವೆಂಬೆ ಸರ್ವಜ್ಞ ॥ ೩೯ ॥

ಹರನಿಷ್ಠಗಲ್ಲದಲೆ । ಹರಿದು ಹೋಗದು ಪಾಪ ।
ಹರನಿಷ್ಠೆಯುಳ್ಳ ಗುರುವರನು ಒರ್ವನೆ ।
ನರ ದೈವವೆಂಬೆ ಸರ್ವಜ್ಞ ॥ ೪೦ ॥

ಬಂಧುಗಳು ಆದವರು । ಬಂದುಂಡು ಹೋಗುವರು ।
ಬಂಧನವ ಕಳೆಯಲರಿಯರು, ಗುರುವಿಂದ ।
ಬಂಧುಗಳು ಉಂಟೆ ಸರ್ವಜ್ಞ ॥ ೪೧ ॥

ಜೀಯ ಸದ್ಗುರುನಾಥ । ಕಾಯಪುಸಿಯನೆ ತೋರಿ ।
ಮಾಯಪಾಶವನು ಹರಿಸುತ್ತ ಶಿಷ್ಯಂಗೆ ।
ತಾಯಿಯಂತಾದ ಸರ್ವಜ್ಞ ॥ ೪೨ ॥

ತಂದೆಗೂ ಗುರುವಿಗೂ । ಒಂದು ಅಂತರವುಂಟು ।
ತಂದೆ ತೋರುವನು ಸದ್ಗುರುವ, ಗುರುರಾಯ ।
ಬಂಧನವ ಕಳೆವ ಸರ್ವಜ್ಞ ॥ ೪೩ ॥

ಗುರುವಿಂಗೆ ದೈವಕ್ಕೆ । ಹಿರಿದು ಅಂತರವುಂಟು ।
ಗುರುತೋರ್ವ ದೈವದೆಡೆಯನು, ದೈವ ತಾ ।
ಗುರುವ ತೋರುವದೆ? ಸರ್ವಜ್ಞ ॥ ೪೪ ॥

### ನಿಷಿದ್ಧ ಗುರು

ಹುಸಿವವನ ಬೇಹಾರ । ಕಸ ಹತ್ತಿದಾರಂಬ ।
ವಿಷಯವುಳ್ಳವನ ಗುರುತನವು ಇವು ಮೂರು ।
ಮಸಿವಣ್ಣವೆಂದ ಸರ್ವಜ್ಞ ॥ ೪೫ ॥

### ಗುರುವೇ ಪರಮೇಶ್ವರ

ದರುಶನಗಳಾರರಿಂ । ಪುರುಷರು ಮೂವರಿಂ ।
ಪರತತ್ವದಿರವು ಬೇರೆಂದು ತೋರಿದ ।
ಗುರು ತಾನೆ ಹರನು ಸರ್ವಜ್ಞ ॥ ೪೬ ॥

ಶಂಬುವುದು! ನಿನಗೇಕೆ । ಹಂಬಲವು ಪರಶಿವನ? ।
ನಂಬಿ ಗುರುದೈವವನಗಸ್ತ್ಯ ಮುನಿಯು ತಾ ।
ನಂಬುಧಿಯ ಸವಿದ ಸರ್ವಜ್ಞ ॥ ೪೭ ॥

ಪರಮನ್ನೈಮೊಗವುಳಿದು । ನೆರವಿಯರನೊಲ್ಲದೆ ।
ನರರೂಪ ಧರಿಸಿ ಗುರುವಾಗಿ ಎರೆವಂಗೆ ।
ಸರಿಯುಹರ ಕಾಣೆ ಸರ್ವಜ್ಞ ॥ ೪೮ ॥

ಪರಮನಾರೂಪದಲಿ । ನೆರವೀಯಲರಿಯದೆ ।
ನರನಾಗಿ ಬಂದು ವರವೀವ ಗುರುವಿಂಗೆ ।
ಸರಿಯಾರ ಕಾಣೆ ಸರ್ವಜ್ಞ ॥ ೪೯ ॥

ಸುರುತರುವು ಮರನಲ್ಲ । ಸುರಭಿಯೊಂದಾವಲ್ಲ ।
ಪರುಷ ಪಾಷಾಣದೊಳಗಲ್ಲ ಗುರುರಾಯ ।
ನರರೊಳಗಲ್ಲ ಸರ್ವಜ್ಞ ॥ ೫೦ ॥

### ಗುರುನಿಂದೆ ತರವಲ್ಲ

ಗುರುವ ನರನೆಂದವಗೆ । ಹರನ ಶಿಲೆಯೆಂದವಗೆ ।
ಕರುಣಪ್ರಸಾದ ಎಂಜಲೆಂದವನಿಗೆ ।
ನರಕ ತಪ್ಪುವದೆ ಸರ್ವಜ್ಞ ॥ ೫೧ ॥

ಹಿರಿಯನಾನೆನಬೇಡ । ಗುರುವ ನಿಂದಿಸಬೇಡ ।
ಬರೆವರ ಕೂಡ ಹಗೆ ಬೇಡ, ಬಂಗಾರ ।
ದೆರವು ಬೇಡೆಂದ ಸರ್ವಜ್ಞ ॥ ೫೨ ॥

ಒಂದೂರೊಳಿರಲು ಗುರು । ವಂದನೆಯ ಮಾಡದಲೆ ।
ಸಂದಿಸಿ ಕೂಳನುಣುತಿಪ್ಪವನ ಬದುಕು ।
ಹಂದಿಯಂತೆಂದ ಸರ್ವಜ್ಞ ॥ ೫೩ ॥

ಗುರುವಿಗೆ ಭಯಪಡು

ಉರಿಯುದಕ ಮಾರುತವು । ಉರಗ ಹರಿ ನಾಗವು ।
ಗುರುವಾಜ್ಞೆಗಂಜಿ ನಿಲುವವು, ಇದನು ನರ ।
ರರಿಯದಲೆ ಕೆಡುಗು ಸರ್ವಜ್ಞ ॥ ೫೪ ॥

ಕೊರಡು ಸುರುತರುವಾಯ್ತು । ಬರಡು ನೆರೆ ಹಯನಾಯ್ತು ।
ಮರುಳು ತಂಡಗಳು—ಪ್ರಣವವುಚ್ಚರಿಸುವವು ।
ಗುರುವಾಜ್ಞೆಗಂಜಿ ! ಸರ್ವಜ್ಞ ॥ ೫೫ ॥

ಗುರುಸೇವೆ ಕೈಕೊಂಡು । ಹಿರಿದಾಗಿ ಮಾಡದಲೆ ।
ಹರಿದೇರಿ ಮುಕ್ತಿ ಪಡೆಯುವಡೆ ಅದು ತಾನು ।
ಹಿರಿದಾದ ತೆವರೆ ? ಸರ್ವಜ್ಞ ॥ ೫೬ ॥

ಗುರುಸೇವೆ ಮಾಡು

ಎತ್ತಾಗಿ ತೊತ್ತಾಗಿ । ಹಿತ್ತಲದ ಗಿಡನಾಗಿ ।
ಮುತ್ತೆ ಪಾದದ ಕೆರನಾಗಿ ಗುರುವಿನ ।
ಹತ್ತಿಲಿರು ಎಂದ ಸರ್ವಜ್ಞ ॥ ೫೭ ॥

**ಗುರುಬೋಧ ವಿಷಯ.**

ಗುರುಬೋಧೆ ಅವಶ್ಯ

ಗುರುವಚನವುಪದೇಶ । ಗುರುವಚನ ಪರಭಕ್ತಿ ।
ಗುರರುವಚನ ಮೋಕ್ಷಪದವದುವೆ ಗುರುವಚನ ।
ಪರಮಾರ್ಥವಯ್ಯ ಸರ್ವಜ್ಞ ॥ ೫೮ ॥

ಬಳ್ಳಿಗುರುಡರು ಕೂಡಿ | ಹಳ್ಳವನು ಬಿದ್ದಂತೆ |
ಒಳ್ಳೆಯ ಗುರುವಿನುಪದೇಶವಿಲ್ಲದಿರೆ |
ಎಲ್ಲಿಯದು ಮುಕ್ತಿ ಸರ್ವಜ್ಞ || ೫೯ ||

ನರಕ ಪಾಪಿಷ್ಠರಿಗೆ | ಸುರಲೋಕ ನಿಷ್ಠರಿಗೆ |
ಗುರುಬೋಧೆಯಿಂದ ಜಗವುಳಿದುದಲ್ಲದೆ |
ಉರಿದು ಹೋಗಿಹುದು ಸರ್ವಜ್ಞ || ೬೦ ||

ಮೊಲೆವಾಲನುಂಬುದನು | ಮೊಲೆಗೂಸು ಬಲ್ಲುದೆ ? |
ಮೊಲೆಗೂಸಿನಂತಿಪ್ಪ ಶಿಷ್ಯಂಗೆ ಗುರುಬೋಧೆ |
ಮೊಲೆವಾಲು ಕಾಣೊ ! ಸರ್ವಜ್ಞ || ೬೧ ||

ಬೆಳ್ಳುಳ್ಳಿ ಬಿಸಿಲಿಂಗೆ | ಪೊಳ್ಳಯಿಸಿ ಹರಿವಂತೆ |
ಒಳ್ಳೆಯ ಗುರುವಿನುಪದೇಶದಿಂ ಭವದ |
ಬಳ್ಳಿ ಹರಿದಿಹುದು ಸರ್ವಜ್ಞ || ೬೨ ||

ಬೆಳುಳ್ಳಿ ಪೊಡೆದಿಹರೆ | ಹೊಳ್ಳಪ್ಪ ತೆರನಂತೆ |
ಒಳ್ಳೆಯ ಗುರುವಿನುಪದೇಶದಿಂ ಪಾಪ |
ಹೊಳ್ಳಹುದು ನೋಡ ಸರ್ವಜ್ಞ || ೬೩ ||

### ಗುರುಬೋಧೆಯ ಲಕ್ಷಣ

ಮೊಸರು ಕಡೆಯಲು ಬೆಣ್ಣೆ | ಯೊಸೆದು ತೋರುವ ತೆರದಿ |
ಹಸನಪ್ಪ ಗುರುವಿನುಪದೇಶದಿಂ ಮುಕ್ತಿ |
ವಶವಾಗದಿಹುದೆ ? ಸರ್ವಜ್ಞ || ೬೪ ||

ತುಪ್ಪವಾದಾಬಳಿಕ | ಹೆಪ್ಪನೆರೆದವರುಂಟೆ ? |
ನಿಷ್ಪನ್ನನಾದ ಗುರುವಿನುಪದೇಶದಿಂ |
ತಪ್ಪದದು ಮುಕ್ತಿ ಸರ್ವಜ್ಞ || ೬೫ ||

ಪುರಹುಳ್ಳ ಮನುಜರಿಗೆ | ತೆರನಾವುದರಿವುದಕೆ ? |
ಕರಿಕೊಂಡ ಬೆಳಲ ಹಣ್ಣಂತೆ ಗುರುಬೋಧೆ |
ನೆರೆಗೊಳ್ಳಬೇಕು ಸರ್ವಜ್ಞ || ೬೬ ||

ಸಾಣೆಕಲ್ಲೊಳು ಗಂಧ। ಮಾಣದಲೆ ಎಸೆವಂತೆ।
ಜಾಣಸದ್ಗುರುವಿನುಪದೇಶದಿಂ ಮುಕ್ತಿ।
ಕಾಣಿಸುತ್ತಿಹುದು ಸರ್ವಜ್ಞ ॥ ೭೭ ॥

ಬೊಮ್ಮವೆಂಬುದು ತಾನು। ಒಮ್ಮಾರು ದೂರವೆ ?।
ಒಮ್ಮೆ ಸದ್ಗುರುವಿನುಪದೇಶವಪ್ಪಡೆ।
ಗಮ್ಮನೇ ಮುಕ್ತಿ ಸರ್ವಜ್ಞ ॥ ೭೮ ॥

ಹೇಳಿದ್ದೆ ಹೇಳುವರು। ಕೇಳಿದ್ದೆ ಕೇಳುವರು।
ಕೇಳಿದ್ದ ಕೇಳಿ ಸುಖಿಸುವರು, ಗುರುಗಳ।
ಹೇಳಿಕೆಯೆ ಬೇರೆ ಸರ್ವಜ್ಞ ॥ ೭೯ ॥

ಯೋಗ್ಯ ಗುರು

ಎಂಟು ಕಂಟಕರಿಂಗೆ। ನೆಂಟರುಗಳಯ್ವರಿಗೆ।
ಗಂಟಲಗಾಳನಾಗಿಪ್ಪ ಗುರು, ನೀಲ।
ಕಂಠನಾಗಿಕ್ಕು ಸರ್ವಜ್ಞ ॥ ೮೦ ॥

ಮೂರರಿಂದಲಿ ಹೊರಗೆ। ತೋರಿರುವದನು ಗುರು।
ಆರರಿಂದೊಳಗೆ ತೋರಿದಡೆ ಶಿಷ್ಯ ತಾ।
ನಾರಡಿಗೊಂಬ ಸರ್ವಜ್ಞ ॥ ೮೧ ॥

ಅಯೋಗ್ಯ ಗುರು

ಒಂದರೊಳಗೆಲ್ಲವೂ। ಸಂದಿಸಿರುವದನು ಗುರು।
ಚೆಂದದಿ ತೋರಿ ಕೊಡದಿರೆ ಶಿಷ್ಯನಂ।
ಕೊಂದನೆಂದರಿಗು ಸರ್ವಜ್ಞ ॥ ೮೩ ॥

ಹಂದಿ ಚಂದನದ ಸು। ಗಂಧವನು ಬಲ್ಲುದೆ ?।
ಒಂದನು ತಿಳಿಯಲರಿಯದ ಗುರುವಿಂಗೆ।
ನಿಂದೆಯೇ ಬಹುದು ಸರ್ವಜ್ಞ ॥ ೮೨ ॥

ಯೋಗ್ಯ ಶಿಷ್ಯ

ಸುರಧೇನು ಗುರುವನ್ನು। ಕರೆದುಂಬ ಶಿಷ್ಯಂಗೆ।
ದುರಿತಕೋಟಿಗಳು ಹರಿಯಲು ಚಿರಕಾಲ।
ನೆರೆ ಸುಖಿಸಲಕ್ಕು ಸರ್ವಜ್ಞ ॥ ೮೪ ॥

ದಾನ ಭಕ್ತಿಗಳಲ್ಲಿ । 'ನಾನು' ಮರೆದಿರಬೇಕು ।
ನಾನೆಂಬ ರೋಗ ನೀಗಿದಗೆ ಗುರುಬೋಧೆ ।
ತಾನೆ ಫಲಿಸುವದು ಸರ್ವಜ್ಞ ॥ ೭೫ ॥

ಅಯೋಗ್ಯ ಶಿಷ್ಯ

ಭಕ್ತಿಯಿಲ್ಲದ ಶಿಷ್ಯ । ಗೊತ್ತಿ ಕೊಟ್ಟುಪದೇಶ ।
ಬತ್ತಿದ ಕೆರೆಯ ಬಯಲಲ್ಲಿ ರಾಜಾನ್ನ ।
ಬಿತ್ತಿ ಬೆಳೆದಂತೆ ಸರ್ವಜ್ಞ ॥ ೭೬ ॥

ಶ್ವಾನ ತೆಂಗಿನ ಕಾಯ । ತಾನು ಮೆಲಬಲ್ಲುದೆ? ।
ಹೀನಮನದವನಿಗುಪದೇಶವಿತ್ತಡದು ।
ಹಾನಿ ಕಾಣಯ್ಯ! ಸರ್ವಜ್ಞ ॥ ೭೭ ॥

ಹೊಟ್ಟೆ ದೇವಗೆ ತಿಳಿವ । ಕುಟ್ಟೆ ಹೇಳಿದಡೇನು? ।
ಗಟ್ಟಿ ಕಲ್ಲಾದ ಭೂಮಿಯಲಿ ಬೀಜವು ।
ಹುಟ್ಟಿ ಬೆಳೆದಿಹುದೆ? ಸರ್ವಜ್ಞ ॥ ೭೮ ॥

ಯೋಗ್ಯಗುರುಶಿಷ್ಯ ಸಂವಾದ

ಕಟ್ಟಿಗೆಗಳೆರಡನ್ನು । ಕಟ್ಟಿಟ್ಟರೇನಹುದು ।
ಗಟ್ಟ್ಯಾಗಿ ಎರಡ ಮಥಿಸಲ್ಕೆ ಬೇಗೆಯಿಂದು ।
ಚಿಟ್ಟಿಕೊಂಡಂತೆ ಸರ್ವಜ್ಞ ॥ ೭೯ ॥

ಯೋಗ್ಯಗುರುಶಿಷ್ಯ ಸಂವಾದ

ಹೇಳಬಲ್ಲಡೆ ಗುರುವು । ಕೇಳಬಲ್ಲಡೆ ಶಿಷ್ಯ ।
ಹೇಳಲು ಕೇಳಲರಿಯದಾ ಗುರುಶಿಷ್ಯ ।
ಮೇಳವೆಂತೆಂದ ಸರ್ವಜ್ಞ ॥ ೮೦ ॥

ಕೇಳಿದರೆ ಗುರುವಾಗಿ । ಹೇಳುವನು ತಾನೊಂದ ।
ಕೇಳದಲೆ ಹೇಳಬಲ್ಲವನ ಆ ಮಾತ ।
ಕೇಳುವದೆ ಲೇಸು ಸರ್ವಜ್ಞ ॥ ೮೧ ॥

ಕೇಳದಲೆ ಗುರುವು ತಾ । ಹೇಳುವನು ನಿನಗೊಂದ ।
ಕೇಳಿದರೆ ಬೇರೆ ಹೇಳುವನ ನೆರೆಮಾತು ।
ಕೇಳುವವನೆಗ್ಗ ಸರ್ವಜ್ಞ ॥ ೮೨ ॥

ಹೊಲಬನರಿಯದ ಗುರುವು । ತಿಳಿಯಲರಿಯದ ಶಿಷ್ಯ ।
ನೆಲೆಯನಾರಯ್ಯದುಪದೇಶ ಅಂಧಕನು ।
ಕೊಳನ ಹೊಕ್ಕಂತೆ ಸರ್ವಜ್ಞ ॥ ೮೩ ॥

ಮುಂದನರಿಯದ ಗುರುವು । ಹಿಂದನರಿಯದ ಶಿಷ್ಯ ।
ಸಂದೆರಡು ವರ್ಗವರಿಯದಿರ್ದುಪದೇಶ ।
ಕೊಂದುಕೊಂಡಂತೆ ಸರ್ವಜ್ಞ ॥ ೮೪ ॥

ಅರಿವನರಿಯದ ಗುರುವು । ಪರವನರಿಯದ ಶಿಷ್ಯ ।
ನೆರೆಯರಿಯದೋದು ಇವು ಮೂರು, ಅಂಧಕನು ।
ತಿರುಗಾಡಿದಂತೆ ಸರ್ವಜ್ಞ ॥ ೮೫ ॥

ಹೇಳಿ ಹೇಳರು ಸಹಜ । ಹೇಳಲಿಕೆ ಅರಿಯದಲೆ ।
ಹೇಳಿದೊಡೆ ಮುಂದೆ ಕೇಳಿ ! ಗುರುಶಿಷ್ಯರ ।
ಹಾಳಿಸಂವಾದ ! ಸರ್ವಜ್ಞ ॥ ೮೬ ॥

**ಗುರುಕರುಣ ವಿಷಯ**

**ಭಕ್ತರಿಗೆ ಮೇಲು**

ಮೂರಿಟ್ಟರಾರಕ್ಕು । ಆರು ಹನ್ನೆರಡಕ್ಕು ।
ಹೇರುವ ಗೊಡ್ಡು ಹಯನಕ್ಕು ಗುರುಕರುಣ ।
ತೋರುವ ದಿನಕೆ ಸರ್ವಜ್ಞ ॥ ೮೭ ॥

ಸರವೆ ಸುರಲತೆಯಕ್ಕು । ಗೊರವ ಸುರಪತಿಯಕ್ಕು ।
ಹೆರಕೊಟ್ಟೆ ಗರಿಯು ಗಿರಿಯಕ್ಕು, ಗುರುವಿನ ।
ಕರುಣವಿರುವನಕ ಸರ್ವಜ್ಞ ॥ ೮೮ ॥

ಗುರುವೆ ನಿಮ್ಮನು ನೆನೆದು । ಉರಿವ ಕಿಚ್ಚನು ಹೊಗಲು ।
ಉರಿ ತಗ್ಗಿ ಉದಕ ಕಂಡಂತೆ ನಿಮ್ಮಯ ।
ಕರುಣವುಳ್ಳರಿಗೆ ಸರ್ವಜ್ಞ ॥ ೮೯ ॥

ದುರ್ಗಿ ಮಾರಿಯು ಚಂಡಿ | ಯುಗ್ಗದ ಶಕ್ತಿಗಳು |
ಸದ್ಗುಣ ಸತ್ಯ ಮುಸುಕಿಹರ ಮುಟ್ಟುವಿದು |
ಸದ್ಗುರುವಿನಾಜ್ಞೆ ಸರ್ವಜ್ಞ || ೯೦ ||

ವಿಷಯಕ್ಕೆ ಕುದಿಯದಿರು | ಅಶನಕ್ಕೆ ಹರಿಯದಿರು |
ಅಸಮಾಕ್ಷನಡಿಯ ಬಿಡದಿರು ಗುರುಕರುಣ |
ವಶವರ್ತಿಯಹುದು ಸರ್ವಜ್ಞ || ೯೧ ||

ಬಂದ ಸುಖದುಃಖವನು | ಕುಂದದುಬ್ಬದೆ ನುಂಗಿ |
ಇಂದುಧರನಾಜ್ಞೆಯೆಂದಿಹಗೆ ಗುರುಕೃಪೆಯು |
ಎಂದಿಗೂ ಬಿಡದು ಸರ್ವಜ್ಞ || ೯೨ ||

ಭಕ್ತಿಹೀನರಿಗೆ ಹಾನಿ

ಹಸಿಯ ಸಮಿಧೆಯ ತಂದು | ಹೊಸೆದರುಂಟೇ ಕಿಚ್ಚು? |
ವಿಷಯಂಗಳುಳ್ಳ ಮನುಜಂಗೆ ಗುರುಕರುಣ |
ವಶವರ್ತಿಯಹುದೆ? ಸರ್ವಜ್ಞ || ೯೩ ||

ಕುಟ್ಟಿಕೊಂಡರೆ ಏನು | ಇಟ್ಟ ಬೂದಿಯಲೇನು |
ಬೆಟ್ಟದಲಿ ಇದ್ದು ಫಲವೇನು ಗುರುತೋರ್ದ |
ಬಟ್ಟೆ ತಪ್ಪಿದರೆ ಸರ್ವಜ್ಞ || ೯೪ ||

**ಗುರುವಿಂದ ಮುಕ್ತಿ**

ಗುರುದರ್ಶನವೇ ಮುಕ್ತಿ

ಪರುಷ ಲೋಹವ ಸೋಂಕಿ | ವರುಷವಿರಬಲ್ಲುದೆ? |
ಪರುಷವೆಂತಂತೆ ಶಿಷ್ಯಂಗೆ ಗುರುವಿನ |
ದರುಶನವೆ ಪರುಷ ಸರ್ವಜ್ಞ || ೯೫ ||

ಪರುಷ ಲೋಹವ ಮುಟ್ಟೆ | ವರಸೆ ಇರಬಲ್ಲುದೆ? |
ಪರುಷವೆಂತಂತೆ ಶಿಷ್ಯಂಗೆ ಗುರುವಿನ |
ಪರುಷನವೆ ಮೋಕ್ಷ ಸರ್ವಜ್ಞ || ೯೬ ||

### ಗುರುಪಾದವೆ ಮುಕ್ತಿ

ತಾಪದಲಿ ಸಂಸಾರ । ಕೂಪದಲಿ ಬಿದ್ದವರು ।
ಆಪತ್ತನಳಿದು ಪೊರಮಡಲು ಗುರುಪಾದ ।
ಸೋಪಾನವಯ್ಯ ಸರ್ವಜ್ಞ ॥ ೯೭ ॥

ಮನವ ಮುಟ್ಟಲು ಗಂಡ ! । ತನುವ ಮುಟ್ಟಲು ಪಾಪ ! ।
ಮನವೆರಕವಾಗಿ ಗುರುಚರಣ ನೋಂಕಿದರೆ ।
ತನು ಶುದ್ಧವಯ್ಯ ! ಸರ್ವಜ್ಞ ॥ ೯೮ ॥

ಗುರುಪಾದಕೆರಗಿದರೆ । ಶಿರಸು ತಾ ಮಣಿಯುಕ್ಕು ।
ಪರಿಣಾಮವಕ್ಕು ಪದವಕ್ಕು, ಕೈಲಾಸ ।
ನೆರೆಮನೆಯು ಅಕ್ಕು ಸರ್ವಜ್ಞ ॥ ೯೯ ॥

ಗುರುಪಾದ ಸೇವೆ ತಾ । ದೊರಕೊಂಡಿತಾದಡೆ ।
ಪಿರಿದಪ್ಪ ಪಾಪ ಪರಿದಿಹುದು, ಕರ್ಪುರದ ।
ಗಿರಿಯು ಬೆಂದಂತೆ ಸರ್ವಜ್ಞ ॥ ೧೦೦ ॥

ಬಾಗಿ ಗುರುಚರಣವನು । ಬೇಗದಿಂದಲಿ ಭಜಿಸಿ ।
ಆಗಮಾತೀತನೊಳು ಭವವ ದಾಂಟಿದನು ।
ಭೋಗದೊಳಗಿಹನೆ? ಸರ್ವಜ್ಞ ॥ ೧೦೧ ॥

### ಗುರುವನ್ನು ಬೇಡು

ಹಲವು ಯೋನಿಗಳಲ್ಲಿ । ಹೊಲಬರಿಯದುದಿಸಿದೆನು ।
ಮಲರಹಿತನಾದ ಗುರುರಾಯ ಪರಿಭವದ ।
ಬಲೆಯಿಂದ ಬಿಡಿಸೊ ! ಸರ್ವಜ್ಞ ॥ ೧೦೨ ॥

ಹುಲಿಯ ಬಾಯಲಿ ಸಿಕ್ಕ । ಹುಲ್ಲೆಯಂದದಿ ಮೊರೆವೆ ।
ಹುಲಿಯ ಬಾಯಿಂದ ಕರಕಷ್ಟ, ಗುರುರಾಯ ।
ಕೊಲುತಿಹಳು ಮಾಯೆ ! ಸರ್ವಜ್ಞ ॥ ೧೦೩ ॥

ಹಲವು ಶಾಸ್ತ್ರವನೋದಿ । ಬಲೆಯೆನಗೆ ಬಿಡಲಿಲ್ಲ ।
ಮಲರಹಿತ ನೀನು, ಗುರುರಾಯ, ಎನಗೊಲಿದು ।
ಮಲವ ಹರಿಸೆನ್ನ ! ಸರ್ವಜ್ಞ ॥ ೧೦೪ ॥

ಅಂಗ ಭೋಗಕೆ ಮೆಚ್ಚಿ। ಲಿಂಗಭಕ್ತಿಯ ಮರೆದೆ।
ಭಂಗಪಡುತಿಹೆನು ಗುರುರಾಯ, ಭವದೂರ!।
ಹಿಂಗೆನ್ನಭವವ! ಸರ್ವಜ್ಞ ॥ ೧೦೫ ॥

ಹಿಂದಿನ ಜನುಮದಲಿ। ಎಂದೊ ಲೇಸನು ಮಾಡಿ।
ಇಂದು ನಿಮ್ಮಡಿಗೆ ಎರಗಿದೆನು ಗುರುವೆ ಭವ।
ಬಂಧನವ ಬಿಡಿಸೊ! ಸರ್ವಜ್ಞ ॥ ೧೦೬ ॥

ಘನ ಗುರುವೆ ನೀವಲ್ಲ। ದೆನಗಾರು ಗತಿಯುಂಟು!।
ಅನುನಯದಿ ನಿಮ್ಮ ಮೊರೆಹೊಕ್ಕ ಬಳಿಕಿನ್ನು।
ಜನನವೆನಗುಂಟೆ? ಸರ್ವಜ್ಞ ॥ ೧೦೭ ॥

ಸೊಣಗನಂದಣವೇರಿ। ಕುಣಿದು ಪೋಪದು ಮಲಕೆ।
ಸೊಣಗನ ಗುಣವು ಎನ್ನಲ್ಲಿ, ಗುರುರಾಯ।
ಟೊಣೆದು ಬಿಡಬೇಡ! ಸರ್ವಜ್ಞ ॥ ೧೦೮ ॥

ಪಾಪವೆನ್ನದು ಕಾಯ। ತಾಪ ನಿನ್ನದು ರಾಯ।
ಕೂಪದೊಳು ಬಿದ್ದು ಕೆಡುತಿಹೆನು, ಕೈವಿಡಿದು।
ಕಾಪನಾಗಯ್ಯ! ಸರ್ವಜ್ಞ ॥ ೧೦೯ ॥

ಗುರುವಿಂದ ಪಾಪ ಪರಿಹಾರ

ಬೆಟ್ಟ ಕರ್ಪುರವುರಿದು। ಬೊಟ್ಟಿಡಲು ಬೂದಿಲ್ಲ।
ಕೆಟ್ಟನೆ ಗುರುವಿಗೆರಗಿದನ ಸಂಸಾರ।
ಸುಟ್ಟು ಹೋಗುವದು ಸರ್ವಜ್ಞ ॥ ೧೧೦ ॥

ಗುರುರಾಯನುಪದೇಶ। ದೊರಕೊಂಡಿತಾದಡೆ।
ಹರಿವುದು ಪಾಪವೆಂತೆನಲು? ವಜ್ರದಿಂ।
ಗಿರಿಯು ಹೊಯಿದಂತೆ! ಸರ್ವಜ್ಞ ॥ ೧೧೧ ॥

ಹಾರಿದ ಬಲದಿಂದ। ಬೇರು ಕಿತ್ತಿತು ಗಿರಿಯು।
ತಾರಕ ಗುರುವಿನುಪದೇಶದಿಂ ಕರ್ಮ।
ಹಾರದಿರುತಿಹುದೆ? ಸರ್ವಜ್ಞ ॥ ೧೧೨ ॥

ಬೆಳಗ ನುಂಗಿದ ಗುರುವಿ । ನೊಳಗ ನುಂಗಿದ ಶಿಷ್ಯ ।
ಒಳಗಿನಿಂದೊಳಗನರಿದೊಡೆ ಪರಬೊಮ್ಮ ।
ದುಳುಮೆ ತಾನಕ್ಕು ಸರ್ವಜ್ಞ ॥ ೧೧೩ ॥

ಗುರುವಿನಿಂದಲೆ ಮೋಕ್ಷ

ಉರಿಯುಂಡ ಕರ್ಪೂರವು । ನರಕು ಮಾರುವದುಂಟೆ ? ।
ಗುರುಕರುಣದಿಂದ ನಿಜದೊಳಗೆ ಬೆರೆದಾತ ।
ನರಕ ಕೂಡುವನೆ ? ಸರ್ವಜ್ಞ ॥ ೧೧೪ ॥

ಗುರುವಿಂದ ಬಂಧುಗಳು । ಗುರುವಿಂದ ದೈವಗಳು ।
ಗುರುವಿಂದಲಿಹುದು ಪುಣ್ಯವದು, ಜಗಕೆಲ್ಲ ।
ಗುರುವಿಂದ ಮುಕ್ತಿ ಸರ್ವಜ್ಞ ॥ ೧೧೫ ॥

## ೩. ಲಿಂಗಪದ್ಧತಿ

### ಲಿಂಗಮಾಹಾತ್ಮ್ಯ

ಕಲ್ಲಿನಲಿ ಕುಚದಲ್ಲಿ । ಬಳ್ಳದಲಿ ಹಿಕ್ಕೆಯಲಿ ।
ಎಲ್ಲಿ ಭಾವಿಸಿದಡಲ್ಲಿರ್ಪ ಭರಿತನನು ।
ಬಲ್ಲವೆ ನಿಗಮ ? ಸರ್ವಜ್ಞ ॥ ೧೧೬ ॥

ಲಿಂಗಕ್ಕೆ ಕಡೆಯೆಲ್ಲಿ ? । ಲಿಂಗಿಲ್ಲದೆಡೆಯೆಲ್ಲಿ ? ।
ಲಿಂಗದೊಳು ಜಗವು ಅಡಗಿಹುದು, ಲಿಂಗವನು ।
ಹಿಂಗಿದವರುಂಟೆ? ಸರ್ವಜ್ಞ ॥ ೧೧೭ ॥

ಲಿಂಗವುಳ್ಳನೆ ಪುರುಷ । ಲಿಂಗವುಳ್ಳನೆ ಸರಸ ।
ಲಿಂಗವುಳ್ಳವನ ಭೋಗದಿ ಜಗವು, ಶುಭ ।
ಲಿಂಗದಿಂ ಜನನ ಸರ್ವಜ್ಞ ॥ ೧೧೮ ॥

ಆಕಾರ ತಾನಲ್ಲ । ಓಕಾರ ಮುಖವಲ್ಲ ।
ಆಕಾಶ ತಳವ ಮೀರಿಹುದು ಹರಿಯಜರು ।
ತಾ ಕಾಣರಯ್ಯ ಸರ್ವಜ್ಞ ॥ ೧೧೯ ॥

## ಷಟ್ಸ್ಥಲ ವಿಷಯ.

### ಭಕ್ತಸ್ಥಲ

ಇಟ್ಟ ವಿಭೂತಿ ತಾ । ಪಟ್ಟಗಟ್ಟಿರುತಿಕ್ಕು ।
ಇಟ್ಟ ವಿಭೂತಿಯರಿಯದಿರೆ ಸೀಳಿದ ।
ಬಟ್ಟೆಯಂತಕ್ಕು ಸರ್ವಜ್ಞ ॥ ೧೨೦ ॥

ರುದ್ರಾಕ್ಷಿ ಭಸಿತವನು । ಹೊದ್ದಿರಲು ದೇಹದೊಳ ।
ಗಿದ್ದ ಪಾಪಗಳು ಬಯಲಾಗಿ ಶಿವನು ತಾ ।
ನಿದ್ದಲ್ಲಿ ಬರುವ ಸರ್ವಜ್ಞ ॥ ೧೨೧ ॥

ಶಿವಪೂಜೆ ಮಾಡಿದಡೆ । ಶಿವನ ಕೊಂಡಾಡಿದಡೆ ।
ಶಿವನಲ್ಲಿ ನೆನಹು ನೆಲಸಿರ್ದಡಾತಂಗೆ ।
ಶಿವಲೋಕದಿರವು ಸರ್ವಜ್ಞ ॥ ೧೨೨ ॥

ಲಿಂಗದ ಮೈವೆಳಗು । ಮಂಗಳದ ಚಿದ್ಭಸ್ಮ ।
ಹಿಂಗದೆ ಧರಿಸಿದವನಿಗೆ ಶಿವನು ಜಿ- ।
ಹಂಗವಾಗಿಕ್ಕು ಸರ್ವಜ್ಞ ॥ ೧೨೩ ॥

ಗುರುಲಿಂಗ ಜಂಗಮವು । ಹರನೊಲಿದ ರೂಪೆಂದು ।
ಅರಿದು ನಿಶ್ಚಯಿಸಿ ನಡೆಯುವ ಭಕ್ತಂಗೆ ।
ಪರಮ ಪದವಹುದು ಸರ್ವಜ್ಞ ॥ ೧೨೪ ॥

### ಮಾಹೇಶ್ವರ ಸ್ಥಲ

ಲಿಂಗದಲಿ ಮನವಾಗಿ । ಲಿಂಗದಲಿ ನೆನಹಾಗಿ ।
ಲಿಂಗದಲಿ ನೋಟ ನುಡಿಕೂಟವಾದವನು ।
ಲಿಂಗವೇ ಆಕ್ಕು! ಸರ್ವಜ್ಞ ॥ ೧೨೫ ॥

ನಿಷ್ಠೆ ಇದ್ದಡೆ ಶಿವನು । ಗಟ್ಟಿಗೊಂಡೊಳಗಿಪ್ಪ ।
ನಿಷ್ಠೆಯಿಲ್ಲದಲೆ ಭಜಿಸಿದಡೆ ಶಿವನವನ ।
ಬಿಟ್ಟು ಬಯಲಪ್ಪ ಸರ್ವಜ್ಞ ॥ ೧೨೬ ॥

ಅಂಜದಲೆ ಕೊಂಡಿಹರೆ। ನಂಜು ಅಮೃತವಕ್ಕು।
ಅಂಜಿ ಅಳಕುತಲಿ ಕೊಂಡಿಹರೆ ಅಮೃತವು।
ನಂಜಿನಂತಕ್ಕು। ಸರ್ವಜ್ಞ ॥ ೧೩೫ ॥

ಎಂಜಲವ ಕೊಂಡಿಹರೆ। ಅಂಜದಲೆ ಕೊಂಡಿಹುದು।
ಅಂಜಿ ಅಳಕುತಲಿ ಕೊಂಡಿಹರೆ ಎಂಜಲವು।
ನಂಜಿನಂತಕ್ಕು। ಸರ್ವಜ್ಞ ॥ ೧೩೬ ॥

ಲಿಂಗಕ್ಕೆ ತೋರದಲೆ। ನುಂಗಿದಡೆ ಏನಹುದು।
ಭಂಗ ಬಂಧನವು ಘನವಹುದು। ಆ ಲಿಂಗ।
ಹಿಂಗಿಹುದು ನೋಡ। ಸರ್ವಜ್ಞ ॥ ೧೩೭ ॥

ಪ್ರಾಣಲಿಂಗಿ ಸ್ಥಲ

ಆಣವಾದಿಯೊಳಿರಲು। ಹೂಣಿ ಲಿಂಗದಿ ಮನವ।
ಕೇಣವಿಡದಿಹನು ವಿರತಿಯಲಿ ದೇಹದಿಹ।
ಪ್ರಾಣಲಿಂಗಿಯು ತಾ ಸರ್ವಜ್ಞ ॥ ೧೩೮ ॥

ಮಲಯಜದ ಮರದೊಳಗೆ। ಸಲೆ ಗಂಧವಿಪ್ಪಂತೆ।
ಸುಲಲಿತವಾದ ಶರಣರ ಹೃದಯದಲಿ।
ನೆಲಸಿಹನು ಶಿವನು ಸರ್ವಜ್ಞ ॥ ೧೩೯ ॥

ಶರಣ ಸ್ಥಲ

ಕವಿಗೆ ನವರಸ ಲೇಸು। ಭವಿಗೆ ಬಹು ಭವ ಲೇಸು।
ಭವಬಾಧೆ ಹರಿವ ಗುರುಲೇಸು, ಜಗಕೊಬ್ಬ।
ಶಿವಶರಣ ಲೇಸು ಸರ್ವಜ್ಞ ॥ ೧೪೦ ॥

ಕರಣೇಂದ್ರಿಯಾದಿಗಳ। ಸ್ಮರಣೆಗಳ ನತಿಗಳೆದು।
ಶರಣಸತಿ ಲಿಂಗ ಪತಿಯಾಗಿ ಚರಿಸುವನು।
ಪರಮನ ಶರಣ ಸರ್ವಜ್ಞ ॥ ೧೪೧ ॥

ಕಿಚ್ಚಿನೊಳು ಸುಘೃತವು। ಪಚ್ಚತಳ ಕರ್ಪುರವು।
ಅಚ್ಚಳಿದು ನಿಜದಿ ನಿಂದಂತೆ ಭೇದವನು।
ಮುಚ್ಚುವನೆ ಶರಣ ಸರ್ವಜ್ಞ ॥ ೧೪೨ ॥

## ಶಿವಪೂಜಾ ವಿಷಯ

ಅಲಸದಾ ಶಿವಪೂಜೆ । ಹುಲಸುಂಟು ಕೇಳಯ್ಯ ।
ಬಲುಕವಲೊಡೆದು ಬೇರಿಂದ ತುದಿತನಕ ।
ಹಲಸು ಕಾತಂತೆ ಸರ್ವಜ್ಞ ॥ ೧೫೮ ॥

ಉಂಡುಂಡು ತಿರುಗುತಿಹ । ಭಂಡರ ಕೆಳೆ ಬೇಡ ।
ಕಂಡು ಲಿಂಗವನು ಪೂಜಿಸದವಗೆ ಯಮ ।
ದಂಡ ಕಾಣಯ್ಯ ಸರ್ವಜ್ಞ ॥ ೧೫೯ ॥

ಲಿಂಗವಿಲ್ಲದ ಅಂಗ । ಅಂಗಿಯಿಲ್ಲದ ಪುರುಷ ।
ಗಂಗೆಯಿಲ್ಲದ ಶಿವಪೂಜೆ ಇವು ಮೂರು ।
ಭಂಗ ಕಾಣಯ್ಯ ಸರ್ವಜ್ಞ ॥ ೧೬೦ ॥

## ಅಂತರಂಗ ಶಿವಾರ್ಚನೆ

### ಮಾನಸ ಪೂಜೆ ಶ್ರೇಷ್ಠ

ಸೃಷ್ಟಿಯೆಲ್ಲವನು ಮನ । ಮುಟ್ಟುವದು ನಿಮಿಷದಲಿ ।
ನೆಟ್ಟು ಭವಜೀವವಿಷ್ಟ ಮೂರೊಂದೆಂದು ।
ದೃಷ್ಟಿಪನೆ ಶ್ರೇಷ್ಠ ಸರ್ವಜ್ಞ ॥ ೧೬೧ ॥

ಕಾಯಕಮಲವೆ ಸಜ್ಜೆ । ಜೀವರತುನವೆ ಲಿಂಗ ।
ಭಾವ ಪುಷ್ಪದಿ ಶಿವಪೂಜೆ ಮಾಡುವನ ।
ದೇವನೆಂದೆಂಬೆ ಸರ್ವಜ್ಞ ॥ ೧೬೨ ॥

ಆತುಮದ ಲಿಂಗವನು । ಪ್ರೀತಿಯಲಿ ಅರಿದಂಗೆ ।
ಸೂತಕಗಳಿಲ್ಲ ಭವವಿಲ್ಲ, ಪಂಚಮಾ ।
ಪಾತಕಗಳಿಲ್ಲ ಸರ್ವಜ್ಞ ॥ ೧೬೩ ॥

ಲಿಂಗವನು ಅರಿದವನ । ಅಂಗ ಹಿಂಗಿರಬೇಕು ।
ತೆಂಗಾಯಿಯೊಳಗೆ ಪರಿಪೂರ್ಣ ಜಲ ಬಲಿದು ।
ಹಿಂಗಿದಪ್ಪಂದ ಸರ್ವಜ್ಞ ॥ ೧೬೪ ॥

ನಿಷ್ಠ ಪೂಜೆಯೆ ಇಷ್ಟ

ಅಂಗವನು ಲಿಂಗವನು । ಸಂಗೊಳಿಸಲೆಂತಕ್ಕು ।
ಲಿಂಗದ ನೆನಹು ಘನವಾಗೆ ಶಿವಲಿಂಗ ।
ಹಿಂಗಿರದು ಅವನ ಸರ್ವಜ್ಞ ॥ ೧೬೫ ॥

ಒಮ್ಮನದಿ ಶಿವಪೂಜ । ಗಮ್ಮನೇ ಮಾಡುವದು ।
ಇಮ್ಮನವ ಪಿಡಿದು ಕೆಡಬೇಡ, ವಿಧಿವಶವು ।
ಸುಮ್ಮನೆ ಕೆಡುಗು ಸರ್ವಜ್ಞ ॥ ೧೬೬ ॥

ಬಹಿರಂಗ ಶಿವಾರ್ಚನೆ

ಭಕ್ತಿಯಿಲ್ಲದ ಪೂಜೆ ವ್ಯರ್ಥ

ಅಷ್ಟವಿಧದರ್ಚನೆಯು । ನೆಷ್ಟು ಮಾಡಿದಡೇನು ।
ನಿಷ್ಠೆನೆಲೆಗೊಳದೆ ಭಜಿಸುವ ಪೂಜೆಯದು ।
ನಷ್ಟ ಕಾಣಯ್ಯ ಸರ್ವಜ್ಞ ॥ ೧೬೭ ॥

ಇಷ್ಟಲಿಂಗದಿ ಮನವ । ನೆಟ್ಟನೆಯೆ ನಿಲಿಸದಲೆ ।
ಕಷ್ಟ ಭ್ರಮೆಗಳಲಿ ಮುಳುಗಿದನು ಕರ್ಮದ ।
ಬಟ್ಟೆಗೆ ಹೋಹ ಸರ್ವಜ್ಞ ॥ ೧೬೮ ॥

ಎಷ್ಟು ಬಗೆಯಾರತಿಯು । ನೊಟ್ಟೆಯ್ಸಿ ಫಲವೇನು ।
ನಿಷ್ಠೆಯಿಲ್ಲದನ ಶಿವಪೂಜೆ ಹಾಳೂರ ।
ಕೊಟ್ಟಿಗುರಿದಂತೆ ಸರ್ವಜ್ಞ ॥ ೧೬೯ ॥

ಎಸೆವೆಂಟು ದಿಕ್ಕಿನಲಿ । ಮಿಸುನಿ ಗಿಣ್ಣಿಲು ಗಿಂಡಿ ।
ಹುಸಿದು ಮಾಡುವನ ಶಿವಪೂಜೆ ಬೋಗಾರ ।
ಹಸರವಿಟ್ಟಂತೆ ಸರ್ವಜ್ಞ ॥ ೧೭೦ ॥

ಹುಸಿದು ಮಾಡುವ ಪೂಜೆ । ಮುಸಿವಣ್ಣವೆಂತೆನಲು ।
ಮುಸುಕಿರ್ದ ಮಲವನೊಳಗಿರಿಸಿ ಪೃಷ್ಠವನು ।
ಹಿಸುಕಿ ತೊಳೆದಂತೆ ಸರ್ವಜ್ಞ ॥ ೧೭೧ ॥

ಬತ್ತಿ ಹೆತ್ತುಪ್ಪನು । ಹೊತ್ತಿಸಿದ ಫಲವೇನು ।
ಮತ್ತೊಂದು ದೈವಕೆರಗುವನ ಶಿವಪೂಜೆ ।
ಹತ್ತಿಗೇಡೆಂದ ಸರ್ವಜ್ಞ ॥ ೧೭೨ ॥

ಆಳುತೇಳುತ ಬೆರಳು । ಚಾಳಿ, ಮಿಡುಕುವ ಬಾಯಿ ।
ಮೇಳದೊಳು ತೊಡಕ ಬಿಡದವನ ಜಪವದುವೆ ।
ಹಾಳು ಮನೆಯಂತೆ ಸರ್ವಜ್ಞ ॥ ೧೭೩ ॥

ಎಣಿಸುತಿರ್ಪುದು ಬಾಯಿ । ಪೊಣರುತಿರ್ಪುದು ಬೆರಳು ।
ಕ್ಷಣಕೊಮ್ಮೆ ಒಂದನೆಣಿಸುವನ ಜಪಕೊಂದು ।
ಕುಣಿಕೆಯುಂಟೆಂದ ಸರ್ವಜ್ಞ ॥ ೧೭೪ ॥

ಎಣಿಸುತಿರ್ಪುದು ಬೆರಳು । ಗುಣಿಸುತಿರ್ಪುದು ಜಿಹ್ವೆ ।
ಮನಹೋಗಿ ಹಲವ ನೆನೆದರದು ಹಾಳೂರ ।
ಶುನಕನ-ತಕ್ಕು ಸರ್ವಜ್ಞ ॥ ೧೭೫ ॥

ಕೊಲುವ ಕೈಯೊಳು ಪೂಜೆ। ಮೆಲುವ ಬಾಯೊಳು ಮಂತ್ರ ।
ನಲಿವಾಪವೆರೆದ ಮನದೊಳಗ ಪೂಜಿಪನು ।
ಹೊಲೆಯ ಕಾಣಯ್ಯ ಸರ್ವಜ್ಞ ॥ ೧೭೬ ॥

ಜಂಗಮ

ಲಿಂಗಪೂಜಿಸುವಾತ । ಜಂಗಮಕೆ ನೀಡಿದೊಡೆ ।
ಲಿಂಗದಕ್ಷೇಮ ಘನವಾಗಿ ಆ ಲಿಂಗ ।
ಹಿಂಗದಿರುತಿಹುದು ಸರ್ವಜ್ಞ ॥ ೧೭೭ ॥

ಲಿಂಗಪೂಜಿಸುವಾತ । ಜಂಗಮಕೆ ನೀಡದಡೆ ।
ಲಿಂಗದ ಕ್ಷೋಭೆ ಘನವಾಗಿ ಮಹಲಿಂಗ ।
ಹಿಂಗಿಹುದು ಅವನ ಸರ್ವಜ್ಞ ॥ ೧೭೮ ॥

ಲಿಂಗಕ್ಕೆ ತೋರಿಸುತ । ನುಂಗುವಾತನೆ ಕೇಳು ।
ಲಿಂಗವುಂಬುವಡೆ ? ಇದನರಿದು, ಕಪಿಯೆ ನೀ ।
ಜಂಗಮಕೆ ನೀಡು ಸರ್ವಜ್ಞ ॥ ೧೭೯ ॥

## ಪ್ರಬೋಧ

ಲಿಂಗ ಪ್ರಸಾದವನು । ಅಂಗಕ್ಕೆ ಕೊಂಬುವರು ।
ಗಂಗಾಳದೊಳಗೆ ಕೈ ತೊಳೆದು ಚೆಲ್ಲುವ ।
ಮಂಗಗಳ ನೋಡು ಸರ್ವಜ್ಞ ॥ ೧೮೦ ॥

ಹಲವನೋದಿದಡೇನು । ಚೆಲುವನಾದಡದೇನು ।
ಕುಲವೀರನೆನಿಸಿ ಫಲವೇನು? ಲಿಂಗದ ।
ಒಲುಮೆ ಇಲ್ಲದಲೆ ಸರ್ವಜ್ಞ ॥ ೧೮೧ ॥

ಓದು ವಾದಗಳೇಕೆ । ಗಾದೆಯ ಮಾತೇಕೆ ।
ವೇದ ಪುರಾಣ ನಿನಗೇಕೆ ಲಿಂಗದ ।
ಹಾದಿಯರಿಯದಲೆ ಸರ್ವಜ್ಞ ॥ ೧೮೨ ॥

ವೇದ ಆಗಮವೇಕೆ । ವಾದ ಓದುಗಳೇಕೆ? ।
ನಾದಬಿಂದುಗಳ ಭ್ರಮೆಯೇಕೆ? ಶರಣರ ।
ಹಾದಿ ಹಿಡಿದವಗೆ ಸರ್ವಜ್ಞ ॥ ೧೮೩ ॥

ಒಪ್ಪಾದ ನುಡಿಯೇಕೆ । ಪುಷ್ಪವೇರಿಸಲೇಕೆ ।
ಅರ್ಪಿತದ ಗೊಡವೆ ತನಗೇಕೆ? ಲಿಂಗದ ।
ನೆಪ್ಪನರಿಯದಗೆ ಸರ್ವಜ್ಞ ॥ ೧೮೪ ॥

ಕಂಡವರ ಕಂಡು ತಾ । ಕೊಂಡು ಲಿಂಗವ ಕಟ್ಟೆ ।
ಕೊಂಡಾಡಲರಿಯದಧಮಂಗೆ ಲಿಂಗವದು ।
ಕೆಂಡದಂತಿಹುದು ಸರ್ವಜ್ಞ ॥ ೧೮೫ ॥

ನುಡಿಯಲ್ಲಿ ಎಚ್ಚತ್ತು । ನಡೆಯಲ್ಲಿ ತಪ್ಪಿದಡೆ ।
ಹಿಡಿದಿರ್ದ ಲಿಂಗ ಹೊಡಮರಳಿ ಕಚ್ಚುವ ।
ಹೆಡೆನಾಗ ನೋಡ ಸರ್ವಜ್ಞ ॥ ೧೮೬ ॥

ಕಟ್ಟಲೂ ಬಿಡಲು ಶಿವ । ಬಟ್ಟಲವೆ ಕದ್ದನೇ? ।
ಕಟ್ಟಲೂ ಬೇಡ, ಬಿಡಬೇಡ, ಕಣ್ಣುಮನ ।
ಕಟ್ಟಿದರೆ ಸಾಕು ಸರ್ವಜ್ಞ

### ಆತನನ್ನೇ ಬೇಡು

ಭ್ರಷ್ಟ ದೈವಕೆ ಬಾಯ । ಬಿಟ್ಟಲ್ಲಿ ಫಲವಿಲ್ಲ ।
ಸೃಷ್ಟಿಗೀಶ್ವರನ ಭಜಿಸಿದರೆ ಮುಂದಕ್ಕೆ ।
ಇಷ್ಟಾರ್ಥವೀವ ಸರ್ವಜ್ಞ ॥ ೧೯೫ ॥

ಎಲ್ಲ ದೈವವ ಬೇಡಿ । ಹಲ್ಲು ಬಾಯ್ದೆರೆಯದೆ ।
ಬಲ್ಲಂದ ಶಿವನ ಭಜಿಸಿ ಬೇಡಿದಡಾತ ।
ಇಲ್ಲೆನಲಿಕರಿಯ ಸರ್ವಜ್ಞ ॥ ೧೯೬ ॥

ನರನ ಬೇಡುವ ದೈವ । ವರವೀಯಬಲ್ಲುದೇ ? ।
ತಿರಿವರನಡರಿ ತಿರಿವರೇನಿದನರಿದು ।
ಹರನ ಬೇಡುವದು ಸರ್ವಜ್ಞ ॥ ೧೯೭ ॥

### ಪ್ರತಿಮಾಪೂಜೆ ಕನಿಷ್ಠ

ಆದಿ ದೈವವನು ತಾ । ಭೇದಿಸಲಿಕರಿಯದಲೆ ।
ಹಾದಿಯ ಕಲ್ಲಿಗೆಡೆ ಮಾಡಿ ನಮಿಸುವ ।
ಮಾದಿಗರ ನೋಡು ಸರ್ವಜ್ಞ ॥ ೧೯೮ ॥

ತನ್ನಲಿಹ ಲಿಂಗವನು । ಮನ್ನಿಸಲಿಕರಿಯದೆ ।
ಬಿನ್ನಣದಿ ಕಟೆದ ಪ್ರತಿಮೆಗಳಿಗೆರಗುವ ।
ಅನ್ಯಾಯ ನೋಡು ಸರ್ವಜ್ಞ ॥ ೧೯೯ ॥

ಉಣಬಂದ ಜಂಗಮಕೆ । ಉಣಬಡಿಸಲೊಲ್ಲದಲೆ ।
ಉಣದಿಪ್ಪ ಲಿಂಗಕುಣಬಡಿಸಿ ಕೈಮುಗಿವ ।
ಬಣಗುಗಳ ನೋಡ ಸರ್ವಜ್ಞ ॥ ೨೦೦ ॥

ಕಲ್ಲು ಕಲ್ಲೆಂಬುವಿರಿ । ಕಲ್ಲೊಳಿಪ್ಪುದೆ ದೈವ ? ।
ಕಲ್ಲಲ್ಲಿ ಕಳೆಯನಿಲಿಸಿದ ಗುರುವಿನ ।
ಸೊಲ್ಲಲ್ಲೆ ದೈವ ಸರ್ವಜ್ಞ ॥ ೨೦೧ ॥

ಬಟ್ಟೆಯ ಕಲ್ಲಿಂಗೆ । ಒಟ್ಟೈ ಪತ್ರಿಯನಿಟ್ಟು ।
ಕಟ್ಟಿದ ಲಿಂಗವಡಿಯಾಗಿ ಶರಣೆಂಬ ।
ಭ್ರಷ್ಟರನು ನೋಡ ! ಸರ್ವಜ್ಞ ॥ ೨೦೨ ॥

ಕಲ್ಲುಕಲ್ಲನೆ ಒಟ್ಟಿ । ಕಲ್ಲಿನಲಿ ಮನೆ ಕಟ್ಟಿ ।
ಕಲ್ಲ ಮೇಲ್ಕಲ್ಲ ಕೊಳುವ ಮಾನವರೆಲ್ಲ ।
ಕಲ್ಲಿನಂತಹರು ಸರ್ವಜ್ಞ ॥ ೨೦೩ ॥

ನಂಬುತಿರು ನಂಬದಿರು । ಎಂಬುವರು ಮಾನವರು ।
ಕುಂಬಾರವರೆವ ಬಲುಕಲ್ಲ ಹರನೆಂದು ।
ನಂಬುವವರಾರು ಸರ್ವಜ್ಞ ॥ ೨೦೪ ॥

ಗುಡಿಯು ಬೋದಿಗೆ ಕಲ್ಲು । ನಡುರಂಗ ತಾ ಕಲ್ಲು ।
ಕಡೆ ಮೂಲೆ ನೆರಗು ತಾ ಕಲ್ಲು, ವರವನು ।
ಕೊಡುವಾತ ಬೇರೆ ಸರ್ವಜ್ಞ ॥ ೨೦೫ ॥

ಪ್ರಾಣನೂ ಪರಮನೂ । ಕಾಣದಲೆ ಒಳಗಿರಲು ।
ಮಾಣದೆ ಸಿಲೆಯ ಹಿಡಿದದಕೆ ಮೂರ್ಖ ತಾ ।
ಪ್ರಾಣಾತ್ಮನೆಂಬ ಸರ್ವಜ್ಞ ॥ ೨೦೬ ॥

ಕಲ್ಲು ಗುಂಡಿನ ಮೇಲೆ । ಮಲ್ಲಿಗೆಯ ಅರಳಿಕ್ಕಿ ।
ನಿಲ್ಲದೆ ಹಣೆಯ ಬಡಿವರ್ಗೆ ಬುಗುಟೆಲ್ಲ ।
ದಿಲ್ಲ ಕಾಣಯ್ಯ ಸರ್ವಜ್ಞ ॥ ೨೦೭ ॥

ತ್ರಿಮೂರ್ತಿ ಜಿಜ್ಞಾಸ

ಹೆಣ್ಣಿನ ಹೊನ್ನಿನ । ಮಣ್ಣಿನ ಬಲೆಯನ್ನು ।
ಹಣ್ಣಿಸಿ ಜಗವನದರೊಳು ಹಿಡಿದ ಮು ।
ಕ್ಕಣ್ಣನ ನೋಡ। ಸರ್ವಜ್ಞ ॥ ೨೦೮ ॥

ಉತ್ಪತಿಗೆ ಬೊಮ್ಮಗಡ । ಸ್ಥಿತಿಗೆ ತಾ ವಿಷ್ಣುಗಡ ।
ಹತವ ಗೈವುದಕೆ ರುದ್ರಗಡನಿವರುಗಳ ।
ಸ್ಥಿತಿಯುನರಿಯೆಂದ ಸರ್ವಜ್ಞ ॥ ೨೦೯ ॥

ಜಂತ್ರ ಖಡುಗಕೆ ಹರನು । ತಂತ್ರ ಚಕ್ರಕೆ ಹರಿಯು ।
ಮಂತ್ರ ಮೋಹಕ್ಕೆ ಬೊಮ್ಮನು, ಜಗದಿ ಸ್ವ ।
ತಂತ್ರನಾರುಂಟು? ಸರ್ವಜ್ಞ ॥ ೨೧೦ ॥

### ಬ್ರಹ್ಮನು ಅಸಮರ್ಥ

ಬೊಮ್ಮ ನಿರ್ಮಿಪನೆಂಬ | ದುರ್ಮತಿಯೆ ನೀ ಕೇಳು |
ಬೊಮ್ಮನ ಸತಿಗೆ ಮೂಗಿಲ್ಲವಾಮೂಗ |
ನಿರ್ಮಿಸನದೇಕೆ ಸರ್ವಜ್ಞ ॥ ೨೧೧ ॥

ಹುಟ್ಟಿಸುವನಜನೆಂಬ | ಕಷ್ಟದ ನುಡಿಬೇಡ |
ಹುಟ್ಟಿಪನು ತನ್ನ ಶಿರ ಹರಿಯೆ ಮತ್ತೊಂದ |
ಹುಟ್ಟಿಸನದೇಕೆ? ಸರ್ವಜ್ಞ ॥ ೨೧೨ ॥

### ವಿಷ್ಣು ಅಸಮರ್ಥ

ಹತ್ತುಭವವನು ಎತ್ತಿ | ಎತ್ತು ಎಮ್ಮೆಯ ಕಾದು |
ಮತ್ತೆ ಪಾಂಡವರಿಗಾಳಾದ ಹರಿಯು ತಾ |
ನೆತ್ತಣ ದೈವ ಸರ್ವಜ್ಞ ॥ ೨೧೩ ॥

ನರಸಿಂಹನವತಾರ | ಹಿರಿದಾದ ಅದ್ಭುತವು |
ಶರಭನುಗುರಿಂದ ಕೊಲುವಾಗ ಹರಿಯೂರ |
ನರಿಯುಂದವಾದ ಸರ್ವಜ್ಞ ॥ ೨೧೪ ॥

ಪಾಲಿಸುವ ಹರಿಯು ತಾ | ನೋಲನೆಂದೆನಬೇಡ |
ಶೂಲಿ ತಾ ಮಗನ ತಲೆ ಚಿಗುಟಿ, ಹರಿಯೇಕೆ |
ಪಾಲಿಸದೆ ಹೋದ ಸರ್ವಜ್ಞ ॥ ೨೧೫ ॥

### ಶಿವನು ಸರ್ವಸಮರ್ಥ

ಷಡುದರುಶನಾದಿಗಳು | ಮೃಡ ಮಾಡಲಾದವೈ |
ಪೊಡಮಡುತ ನಿಗಮಗಳರಸುವ ಅಭವನ |
ಗಡಣಕೆಣೆಯಾರು ಸರ್ವಜ್ಞ ॥ ೨೧೬ ॥

ಹೆರನವನ ಕೊಲುವಂದು | ಎರಳೆಯನು ಎಸೆವಂದು |
ಮರಳಿ ವರಗಳನು ಕೊಡುವಂದು ಪುರಹರಗೆ |
ಸರಿಯಾರ ಕಾಣೆ ಸರ್ವಜ್ಞ ॥ ೨೧೭ ॥

ಹರಿ ಬೊಮ್ಮರೆಂಬುವರು । ಹರನಿಂದಲಾದವರು ! ।
ಅರಸಿಂಗೆ ಆಳು ಸರಿಯಹನೆ? ಶಿವನಿಂದ ।
ಮೆರೆವರಿನ್ನಾರು? ಸರ್ವಜ್ಞ ॥ ೨೦೮ ॥

ಹಿರಿಯ ಬೊಮ್ಮನು ಕೆಂಚ । ಕಿರಿಯ ಹರಿ ತಾ ಕರಿಗ ।
ಪುರಹರನು ಶುದ್ಧ ಧವಳಾಂಕನಿವರುಗಳು ।
ಸರಿಯೆ ದೈವಕ್ಕೆ? ಸರ್ವಜ್ಞ ॥ ೨೦೯ ॥

ಹರಿದಲೆಯು ಬೊಮ್ಮಂಗೆ । ಕುರಿದಲೆಯು ದಕ್ಷಂಗೆ ।
ನೆರೆಹತ್ತು ಜನನವಾಹರಿಗೆ ಇವರುಗಳು ।
ಸರಿಯಹರೆ ಹರಗೆ? ಸರ್ವಜ್ಞ ॥ ೨೧೦ ॥

ಶಿವಾಧಿಕ್ಯ

ಧರೆಯ ತೇರನು ಮಾಡಿ । ಅಜನ ಸಾರಥಿ ಮಾಡಿ ।
ಹರಿಯ ಶರ ಮಾಡಿ ತ್ರಿಪುರವನು ಅಳಿದಂಗೆ ।
ಸರಿಯಾರು ಹೇಳಿ ಸರ್ವಜ್ಞ ॥ ೨೧೧ ॥

ಇಂದ್ರನಾನೆಯನೇರಿ । ಒಂದನೂ ಕೊಡಲರಿಯ ।
ಚಂದ್ರಶೇಖರನು ಮುದಿಯೆತ್ತನೇರಿ ಬೇ ।
ಕೆಂದುದನು ಕೊಡುವ ಸರ್ವಜ್ಞ ॥ ೨೧೨ ॥

ಉಂಬಳಿಯು ಇದ್ದವರು । ಕಂಬಳಿಯ ಹೊದೆಯುವರೆ? ।
ಶಂಭುವಿದ್ದಂತೆ ಮತ್ತೊಂದು ದೈವವ ।
ನಂಬುವನೆ ಹೆಡ್ಡ ಸರ್ವಜ್ಞ ॥ ೨೧೩ ॥

ಸುರತರುವು, ಸುರಧೇನು, । ಸುರಮಣಿಯು, ಸುರಲತೆಯು ।
ಪುರುಷನುತ್ತಮನು ಹರಿಯಾಗಿ ಇವರುಗಳು ।
ಪರಮನಿಂ ಜನನ ಸರ್ವಜ್ಞ ॥ ೨೧೪ ॥

ದೇಶಕ್ಕೆ ಸಜ್ಜನನು । ಹಾಸ್ಯಕ್ಕೆ ಹನುಮಂತ ।
ಕೇಶವನೆ ಭಕ್ತನೆಲ್ಲರಲಿ ಮೂರು ಕ ।
ಣ್ಣೀಶನೆ ದೈವ ಸರ್ವಜ್ಞ ॥ ೨೧೫ ॥

ಕನಕದಿಂ ಹಿರಿದಿಲ್ಲ । ದಿನಪನಿಂ ಬೆಳಗಿಲ್ಲ ।
ಜನಕನಿಂದಧಿಕ ಗಣವಿಲ್ಲ, ಪರದೈವ ।
ತ್ರಿಣಯನಿಂದಿಲ್ಲ ಸರ್ವಜ್ಞ ॥ ೨೨೬ ॥

ಸತ್ಯಕ್ಕೆ ಸರಿಯಿಲ್ಲ । ಚಿತ್ತಕ್ಕೆ ಸ್ಥಿರವಿಲ್ಲ ।
ಹಸ್ತದಿಂದಧಿಕ ಹಿತರಿಲ್ಲ, ಪರದೈವ ।
ನಿತ್ಯನಿಂದಿಲ್ಲ ಸರ್ವಜ್ಞ ॥ ೨೨೭ ॥

ಶೇಷನಿಂ ಬಲವಿಲ್ಲ । ಮೋಸದಿಂ ಕಳವಿಲ್ಲ ।
ನೇಸರಿಂ ಜಗಕೆ ಹಿತರಿಲ್ಲ, ಪರದೈವ ।
ಈಶನಿಂದಿಲ್ಲ ಸರ್ವಜ್ಞ ॥ ೨೨೮ ॥

ಭಾಷೆಯಿಂ ಮೇಲಿಲ್ಲ । ದಾಸನಿಂ ಕೀಳಿಲ್ಲ ।
ಮೋಸದಿಂದಧಿಕ ಕೇಡಿಲ್ಲ, ಪರದೈವ ।
ಈಶನಿಂದಿಲ್ಲ ಸರ್ವಜ್ಞ ॥ ೨೨೯ ॥

ಸಂಗದಿಂ ಕೆಳೆಯಿಲ್ಲ । ಭಂಗದಿಂ ಮೊರೆಯಿಲ್ಲ ।
ಗಂಗೆಯಿಂದಧಿಕ ನದಿಯಿಲ್ಲ, ಪರದೈವ ।
ಲಿಂಗದಿಂದಿಲ್ಲ ಸರ್ವಜ್ಞ ॥ ೨೩೦ ॥

ನಿದ್ರೆಯಿಂ ಸುಖವಿಲ್ಲ । ಪದ್ರದಿಂ ಅರಿಯಿಲ್ಲ ।
ಮುದ್ರೆಯಿಂದಧಿಕ ಮಾತಿಲ್ಲ, ದೈವ ತಾ ।
ರುದ್ರನಿಂದಿಲ್ಲ ಸರ್ವಜ್ಞ ॥ ೨೩೧ ॥

ಮಾತೆಯಿಂ ಹಿತರಿಲ್ಲ । ಕೋತಿಯಿಂ ಮರುಳಿಲ್ಲ ।
ಜ್ಯೋತಿಯಿಂದಧಿಕ ಬೆಳಕಿಲ್ಲ, ದೈವವ– ।
ಜಾತನಿಂದಿಲ್ಲ ಸರ್ವಜ್ಞ ॥ ೨೩೨ ॥

ಇದ್ದಲಿಂ ಕರಿದಿಲ್ಲ । ಬುದ್ಧಿಯಿಂ ಹಿರಿದಿಲ್ಲ ।
ವಿದ್ಯದಿಂದಧಿಕ ಧನವಿಲ್ಲ, ದೈವ ತಾ ।
ರುದ್ರನಿಂದಿಲ್ಲ ಸರ್ವಜ್ಞ ೨೩೩ ॥

ಲೀಲೆಯಿಂ ಕಣ್ಣಿಲ್ಲ । ಗಾಲಿಯಿಂ ಬಟುವಿಲ್ಲ ।
ವಾಲಿಯಿಂದಧಿಕ ಬಲರಿಲ್ಲ, ಪರದೈವ ।
ಶೂಲಿಯಿಂದಿಲ್ಲ ಸರ್ವಜ್ಞ ॥ ೨೩೪ ॥

ನಿಂಬೆಗಿಂ ಹುಳಿಯಿಲ್ಲ । ತುಂಬೆಗಿಂ ಕರಿದಿಲ್ಲ ।
ನಂಬಿಗೆಯಿಂದಧಿಕ ಗುಣವಿಲ್ಲ, ದೈವ ತಾ ।
ಶಂಭುವಿಂದಿಲ್ಲ ಸರ್ವಜ್ಞ ॥ ೨೩೫ ॥

ನಾಲಿಗೆಗೆ ನುಣುಪಿಲ್ಲ । ಹಾಲಿಗಿಂ ಬಿಳುಪಿಲ್ಲ ।
ಕಾಲನಿಂದಧಿಕ ಅರಿಯಿಲ್ಲ, ದೈವವದು ।
ಶೂಲಿಯಿಂದಿಲ್ಲ ಸರ್ವಜ್ಞ ॥ ೨೩೬ ॥

ಉಣಲಡಿಗೆ ಹಲವಾಗಿ । ಕಣಿಕ ತಾನೊಂದಯ್ಯ ।
ಮಣಿಯಿಸುವ ದೈವ ಘನವಾಗಿ, ಜಗಕೆಲ್ಲ ।
ತ್ರಿಣಯನೆ ದೈವ ಸರ್ವಜ್ಞ ॥ ೨೩೭ ॥

ಆಡಿಂಗೆ ಆರ್ಕೋಟಿ । ಕೋಡಗಕ್ಕೊಂದು ದಿನ ।
ಕೋಡಗವು ಕೋಟಿ ಮಡಿದಲ್ಲಿ ಬಳ್ಳು ಹು– ।
ಬ್ಬಾಡ ಹೊತ್ತಿಲ್ಲ ಸರ್ವಜ್ಞ ॥ ೨೩೮ ॥

ಆಡಾದನಾಅಜನು । ಕೋಡಗಾದನು ಹರಿಯು ।
ನೋಡಿದರೆ ಶಿವನು ನರಿಯಾದನೀ ಬೆಡಗ ।
ರೂಢಿಯೊಳು ಒಲ್ಲ ಸರ್ವಜ್ಞ ॥ ೨೩೯ ॥

## ೬. ಭಕ್ತ ಪದ್ಧತಿ

### ೧. ಭಕ್ತಿಯೇ ಶ್ರೇಷ್ಠ

ತೆರೆದ ಹಸ್ತವು ಲೇಸು । ಹಿರಿದು ಪೂಜೆಯು ಲೇಸು ।
ಅರಸೂಲಿಯೆ ಲೇಸು, ಸರ್ವಕು ಶಿವನಿಂಗೆ ।
ಶರಣವೇ ಲೇಸು ಸರ್ವಜ್ಞ ॥ ೨೪೦ ॥

ಖುಲ್ಲ ಮಾನವ ಬೇಡೆ । ಕಲ್ಲು ತಾ ಕೊಡುವನೇ ? ।
ಸೊಲ್ಲರಿವ ಶಿವನ ಬೇಡಿದಡೆ ಬಯಸಿದು ।
ಎಲ್ಲವನು ಕೊಡುವ ಸರ್ವಜ್ಞ ॥ ೨೪೧ ॥

ಹಾವ ಬೇಡುವ ಸುತಗೆ । ಈವಳೆ ನಿಜ ಮಾತೆ ? ।
ಭಾವಜ ಹರನು ತನ್ನಂಗ ಭಕ್ತಂಗೆ ।
ಈವುದೇ ಮುಕ್ತಿ । ಸರ್ವಜ್ಞ ॥ ೨೪೨ ॥

ಶಿಲ್ಲದಲೆ ಹರಸಿದೊಡೆ । ಕಲ್ಲು ಭೇದಿಸಲಕ್ಕು ।
ಬಲ್ಲಂತ ಶಿವನ ಭಕ್ತಿಯಿಂ ಭಜಿಸಿದಡೆ ।
ಇಲ್ಲಿನಲಿಕರಿಯ ಸರ್ವಜ್ಞ ॥ ೨೪೩ ॥

ಭಕ್ತಿಯಿಂದಲೆ ಮುಕ್ತಿ । ಭಕ್ತಿಯಿಂದಲೆ ಶಕ್ತಿ ।
ಭಕ್ತಿ ವಿರಕ್ತಿಯುಳಿದರೀ ಜಗದಲ್ಲಿ ।
ಮುಕ್ತಿಯಿಲ್ಲೆಂದ ಸರ್ವಜ್ಞ ॥ ೨೪೪ ॥

ಭಕ್ತಿಯೆಂಬುದೆ ಬೀಜ । ಮುಕ್ತಿಯೆಂಬುದೆ ಫಲವು ।
ಯುಕ್ತಿಯಿಂ ವೃಕ್ಷವೇರಿದಗೆ ಇಹದಲ್ಲಿ ।
ಮುಕ್ತಿಯಹುದೆಂದ ಸರ್ವಜ್ಞ ॥ ೨೪೫ ॥

ಸರ್ವೇಶನ ಕೃಪೆ ಇಲ್ಲದಿದ್ದರೆ ಸರ್ವವೂ ವ್ಯರ್ಥ

ಆಗುಹೋಗುಗಳು ನೆರೆ । ರಾಗಭೋಗಗಳು ಸ- ।
ರಾಗವಾಗಿಕ್ಕು ಶಿವನೊಲಿದಡಲ್ಲದಿರೆ ।
ಹೋಗಿಕ್ಕು ಕಾಣೊ ಸರ್ವಜ್ಞ ॥ ೨೪೬ ॥

ಮದ್ದು, ಮಂತ್ರವು, ವಾದ । ತಿದ್ದುವವು ಕುತ್ತಗಳ ।
ಸಿದ್ಧಿಯು ಸಿದ್ಧಲರಿಯವು ಶಿವನೊಲಿಯ ।
ದಿದ್ದರೆ ಕಾಣೊ ಸರ್ವಜ್ಞ ॥ ೨೪೭ ॥

ಕಂಡವರು ಕೆರಳುವರು । ಹೆಂಡತಿಯು ಕನಲುವಳು ।
ಖಂಡಿತದಿ ಲಕ್ಷ್ಮಿ ತೊಲಗುವಳು, ಶಿವನೊಲುಮೆ ।
ಕಂಡು ಕೊಳದಿರಲು ಸರ್ವಜ್ಞ ॥ ೨೪೮ ॥

ಕೊಟ್ಟಲ್ಲಿ ಬಾರದದು । ಇಟ್ಟಲ್ಲಿ ಹೋಗುವದು ।
ಮುಟ್ಟೆ ಕೈಯಲ್ಲಿ ನಿಲ್ಲದದು, ಜಗದೀಶ ।
ಕೊಟ್ಟಲ್ಲದಿಲ್ಲ ಸರ್ವಜ್ಞ ॥ ೨೪೯ ॥

ಭಕ್ತಿಹೀನತ್ವವು ಕನಿಷ್ಠ

ಜ್ವರಬಂದ ಮನುಜಂಗೆ । ನೊರೆವಾಲು ಕಹಿಯಕ್ಕು ।
ನರಕದಲಿ ಬೀಳ್ವ ಅಧಮಂಗ ಶಿವಭಕ್ತಿ ।
ಹಿರಿದು ಕಹಿಯಕ್ಕು ಸರ್ವಜ್ಞ ॥ ೨೫೦ ॥

ಹರನಾಮ ಕರೆಯುದಲೆ । ವರಶಿವನ ನೆನೆಯುದಲೆ ।
ಸ್ಮರಹರನ ಕರುಣವಿಲ್ಲದಲೆ ಜಗದೊಳಗೆ ।
ಇರುವದೆ ಕಷ್ಟ ಸರ್ವಜ್ಞ ॥ ೨೫೧ ॥

ಎಲ್ಲರೂ ಶಿವನೆಂದ । ರಿಲ್ಲಿಯೇ ಹಾಳಕ್ಕು ।
ಎಲ್ಲರೂ ಶಿವನ ಮರೆದರೆ, ಕೈಲಾಸ ।
ದಲ್ಲಿ ಹಾಳಕ್ಕು ಸರ್ವಜ್ಞ ॥ ೨೫೨ ॥

ಆವಕಾಲವು ವನದಿ । ಜೀವ ಕಾಲವ ಕಳೆದು ।
ಜೀವಚಯದಲ್ಲಿ ದಯವಿಲ್ಲದಿರುವವನ ।
ಕಾವನೇ ಶಿವನು ? ಸರ್ವಜ್ಞ ॥ ೨೫೩ ॥

ಅಡವಿಯಲಿ ಮೌನದಲಿ । ದೃಢತಪದೊಳಿದ್ದರೂ ।
ನಡೆಯಲ್ಲಿ ಶಿವನ ಮರೆದಡೆ ಗುಡವಿಲ್ಲ ।
ದಡಿಗೆಯುಂಡಂತೆ ಸರ್ವಜ್ಞ ॥ ೨೫೪ ॥

ಕಡುಭಕ್ತನಾದರೂ । ಜಡೆಧಾರಿಯಾದರೂ ।
ನಡೆವ ವೃತ್ತಿಯಲಿ ನಡೆಯದಿರಲಾಭಕ್ತಿ ।
ಹೊಡೆವ ಶಂಖೆಂದ ಸರ್ವಜ್ಞ ॥ ೨೫೫ ॥

ವ್ಯರ್ಥ

,ರಾರನೆನೆದೇನು ? ।

ಅದು ತಾನು ।

ವಜ್ಞ ॥ ೨೫೬ ॥

ು । ಸುತ್ತಿದಡೆ ಫಲವೇನು ।

ು ಹೊತ್ತು ತಾ ನಿತ್ಯದಿ ।

,ಂ ತೆ ಸರ್ವಜ್ಞ ॥ ೨೫೭ ॥

ಅಂತರಂಗ ಭಕ್ತಿ ಶ್ರೇಷ್ಠ

ುನದಲ್ಲಿ ನೆನೆವಂಗೆ । ಮನೆಯೇನು ಮರವೇನು ।
ಮನದಲ್ಲಿ ನೆನೆಯದಿರುವವನು ದೇಗುಲದ ।
ಕೊನೆಯಲಿದ್ದೇನು ಸರ್ವಜ್ಞ ೨೫೮

ಮನೆಯೇನು ವನವೇನು । ನೆನಹು ಇದ್ದರೆ ಸಾಕು
ಮನಮುಟ್ಟಿ ಶಿವನ ನೆನೆಯದನು ಬೆಟ್ಟದ ।
ಕೊನೆಯಲ್ಲಿದ್ದೇನು ? ಸರ್ವಜ್ಞ । ೨೫೯ ॥

ಮನದಲ್ಲಿ ನೆನವಿರಲು । ತನುವೊಂದು ಮರವಕ್ಕು
ಮನಹೋಗಿ ಹಲವ ನೆನೆದಿಹರೆ ಅದು ಹಾಳು ।
ಮನೆಯು ತಾನೆಂದ ! ಸರ್ವಜ್ಞ ೨೬೦

ದೇಹ ದೇವಾಲಯವು । ಜೀವವೇ ಶಿವಲಿಂಗ ।
ಬಾಹ್ಯಂಗಳಳಿದು ಭಜಿಪಂಗೆ ಮುಕ್ತಿ ಸಂ ।
ದೇಹವಿಲ್ಲೆಂದ ಸರ್ವಜ್ಞ ॥ ೨೬೧

ಸಹಜ ಮಾಟಸ್ಥಳ

ಸೋಪಾಧಿಕ ಮಾಟ

ಅರಿತು ಮಾಡುವ ದಾನ । ತೆರೆದು ನೋಡುವ ಕಣ್ಣು
ತಿರುಗಿ ಬಯಸುವನ ಶಿವಪೂಜೆ ಮದದಾನೆ ।
ಜರಿದು ಬಿದ್ದಂತೆ ಸರ್ವಜ್ಞ ॥ ೨೬೨ ॥

ನಿರುಪಾಧಿಕ ಮಾಟ

ಅರಿಯದೀಯದ ದಾನ । ತೆರೆದು ನೋಡದ ಕಣ್ಣು ।
ತಿರುಗಿ ಬಯಸದನ ಶಿವಪೂಜೆ ಶಿವನಿಂದ ।
ಹಿರಿದೆಂದು ಅರಿಗು ಸರ್ವಜ್ಞ ॥ ೨೬೩ ॥

ಭಕ್ತಲಕ್ಷಣ

ಜಂಗಮಕೆ ವಂಚಿಸನು । ಹಿಂಗಿರನು ಲಿಂಗವನು ।
ಸಂಗ ಭಕ್ತರೊಳು, ಪರಸತಿಗೆ ಒಲಿಯದಗೆ ।
ಭಂಗವೇ ಇಲ್ಲ ಸರ್ವಜ್ಞ ॥ ೨೬೪ ॥

ಕಾಚು ವೀಳೆಯಕಿಂಬು । ಲೋಚನಾಂಜನಕಿಂಬು ।
ಕೂಚುಗಳು ಇಂಬು ಮಾಳಿಗೆಗೆ, ಭಕ್ತಗಯ್ಯಾ ।
ದಾಚಾರವಿಂಬು ಸರ್ವಜ್ಞ ॥ ೨೬೫ ॥

ಇಂದುವಿನೊಳುರಿಯುಂಟೆ ? । ಸಿಂಧುವಿನೊಳರಬುಂಟೆ ? ।
ಸಂದ ವೀರನೊಳು ಭಯವುಂಟೆ ? ಭಕ್ತಗೆ ।
ಸಂದೇಹವುಂಟೆ? ಸರ್ವಜ್ಞ ॥ ೨೬೬ ॥

ಆಹಾರವುಳ್ಳಲ್ಲಿ । ಬೇಹಾರ ಘನವಕ್ಕು ।
ಆಹಾರದೊಳಗನರಿದಿಪ್ಪ ಸೆಟ್ಟಿಗೆ ।
ಬೇಹಾರವಕ್ಕು ಸರ್ವಜ್ಞ ॥ ೨೬೭ ॥

ಕಾಯಕದ ಭಕ್ತನ । ಆಯತವ ನೋಡಿರೋ ।
ಕಾಯಕವ ಬಿಟ್ಟ ಮರುದಿನ ಕಪ್ಪರದ ।
ಕಾಯಕವೆ ಬಕ್ಕು ಸರ್ವಜ್ಞ ॥ ೨೬೮ ॥

ತನುವನ್ನು ಗುರುವಿಂಗೆ । ಮನವನ್ನು ಲಿಂಗಕ್ಕೆ ।
ಧನವ ಜಂಗಮಕೆ ವಂಚಿಸದ ಭಕ್ತಂಗೆ ।
ಅನಘ ಪದವಹುದು ಸರ್ವಜ್ಞ ॥ ೨೬೯ ॥

ಭಕ್ತನ ಮನೆಯಲ್ಲಿ । ಭಕ್ತಿಯಿಂದಿರಬೇಕು ।
ಭಕ್ತರು ಒಕ್ಕು ಮಿಕ್ಕುದನು ಕೊಂಬುವಗೆ ।
ಮುಕ್ತಿಯಹುದೆಂದ ಸರ್ವಜ್ಞ ॥ ೨೭೦ ॥

## ಜಂಗಮ ಭಕ್ತನ ಲಕ್ಷಣ

ಜಂಗಮನು ಭಕ್ತ, ತಾ । ಲಿಂಗದಂತಿರಬೇಕು ।
ಭಂಗಿಸಿ ಪರರನಳಿವ ಜಂಗಮನೊಂದು ।
ಮಂಗನೆಂದರಿಗು ಸರ್ವಜ್ಞ ॥ ೨೭೧ ॥

ಮೀರಿದ ಸ್ಥಲದವರು । ಮೂರ ಮೀರಿರಬೇಕು ।
ನಾರಿ, ಭೂ, ಕನಕ, ಸೋಂಕಿದರೆ ಶಿವನು ತಾ ।
ದೂರ ನಾರಿಹನು ಸರ್ವಜ್ಞ ॥ ೨೭೨ ॥

ಶಕ್ತಿಯನು ತೊರೆದಿಹರೆ । ಭಕ್ತಿಯಿಂದಿರಬೇಕು ।
ಭಕ್ತಿಯನು ತೊರೆದ ಜಂಗಮಕೆ ಇಹಪರದಿ ।
ಮುಕ್ತಿಯಿಲ್ಲೆಂದ ಸರ್ವಜ್ಞ ॥ ೨೭೩ ॥

ಸಾಲು ವೇದವನೋದಿ । ಶೀಲದಲಿ ಶುಚಿಯಾಗಿ ।
ಶೂಲಿಯ ಪದವನರಿಯದೊಡೆ ಗಿಳಿಯೋದಿ ।
ಹೇಲ ತಿಂದಂತೆ ಸರ್ವಜ್ಞ ॥ ೨೭೪ ॥

ಈಶಭಕ್ತನು ಆಗಿ । ವೇಶಿಯನು ಸಾರಿಹರೆ ।
ಮೊಸಲಾಗಿರ್ದ ಬೋನವನು ಹಂದಿಯು ।
ಮೂಸಿ ಹೋದಂತೆ ಸರ್ವಜ್ಞ ॥ ೨೭೫ ॥

ಹಲವು ಸಂಗದ ತಾಯಿ । ಹೊಲಸು ನಾರುವ ಬಾಯಿ ।
ಸಲೆ ಸ್ಮರಹರನ ನೆನೆಯದಾಬಾಯಿ, ನಾಯ್
ಮಲವ ಮೆದ್ದಂತೆ ಸರ್ವಜ್ಞ ॥ ೨೭೬ ॥

ಪರುಷ ಕಬ್ಬುನದೆಸೆವ । ಕರಡಿಗೆಯೊಳಡಗಿಹುದೆ ।
ಹರಭಕ್ತಿಯುಳ್ಳ ಮಹಿಮ ಸಂಸಾರದೊಳು ।
ಚಿರಕಾಲವಿಹನೆ ಸರ್ವಜ್ಞ ॥ ೨೭೭ ॥

ತೆಪ್ಪವನು ನಂಬಿದಡೆ । ತಪ್ಪದಲೆ ತಡಿಗಹುದು ।
ಸರ್ಪಭೂಷಣನ ನಂಬಿದಡೆ ಭವಪಾಶ ।
ತಪ್ಪಿಹೋಗುವದು ಸರ್ವಜ್ಞ ॥ ೨೭೮ ॥

ಶಿವಭಕ್ತಿಯುಳ್ಳಾತ । ಭವ ಮುಕ್ತನಾದಾತ ।
ಶಿವಭಕ್ತಿಯುಳಿದ ಭುಕ್ತಂಗೆ ಎಂದೆಂದು ।
ಭವಮುಕ್ತಿಯಿಲ್ಲ ಸರ್ವಜ್ಞ ॥ ೨೭೯ ॥

ಭಕ್ತರಿಗೆ ಭವಿಗಳಿಗೆ । ಯುಕ್ತಿಯಂತರವಕ್ಕು ।
ಭಕ್ತತಾ ಮುಕ್ತನಾಗಿಹರೆ, ಭವಿ ಭವವ ।
ಸುತ್ತುತ್ತಲಿಹನು ಸರ್ವಜ್ಞ ॥ ೨೮೦ ॥

ಭಕ್ತರೊಡಗೂಡುವುದು । ಭಕ್ತರೊಡನಾಡುವುದು ।
ಭಕ್ತರೊಳು ಭಕ್ತಿವೆರಸಿಪ್ಪ ಭಕ್ತ್ರನೆ ।
ಮುಕ್ತನಾಗಿಹನು ಸರ್ವಜ್ಞ ॥ ೨೮೧ ॥

ಶರಣಸಂಗವು ಶ್ರೇಷ್ಠ

ಲಿಂಗದ ಗುಡಿ ಲೇಸು । ಗಂಗೆಯ ತಡಿ ಲೇಸು ।
ಲಿಂಗ ಸಂಗಿಗಳ ನುಡಿ ಲೇಸು, ಶರಣರ ।
ಸಂಗವೇ ಲೇಸು ಸರ್ವಜ್ಞ ॥ ೨೮೨ ॥

ಲಿಂಗದ ಸ್ಥಲ ಲೇಸು । ಮಂಗಳನ ಬಲ ಲೇಸು ।
ಜಂಗಮ ಭಕ್ತನ ನಡೆ ಲೇಸು, ಶರಣರ ।
ಸಂಗವೇ ಲೇಸು ಸರ್ವಜ್ಞ ॥ ೨೮೩ ॥

ಗಾದೆ ಓದುಗಳೇಕೆ? । ವೇದ ಆಗಮವೇಕೆ? ।
ವೇದಾಂತವಾದ ತನಗೇಕೆ? ಶರಣರ ।
ಹಾದಿ ಹಿಡಿದವಗೆ ಸರ್ವಜ್ಞ ॥ ೨೮೪ ॥

ನೋಟ ಶಿವಲಿಂಗದಲಿ । ಕೂಟ ಜಂಗಮದಲ್ಲಿ ।
ನಾಟಿದ ಮನಸವು ಗುರುವಿನಲಿ, ಶರಣರ ।
ಮಾಟವನು ನೋಡ ಸರ್ವಜ್ಞ ॥ ೨೮೫ ॥

ಲಜ್ಜೆಯನು ತೊರೆದು ನೀ । ಹೆಜ್ಜೆಯನು ಸಾಧಿಪಡೆ ।
ಸಜ್ಜೆಯಲಿ ಶಿವನ ಧರಿಸಿಪ್ಪ ಶರಣರ ।
ಹೆಜ್ಜೆಯಲಿ ನಡೆಯೊ ಸರ್ವಜ್ಞ ॥ ೨೮೬ ॥

ಲಜ್ಜೆ ಸೂತಕವಳಿದು । ಗುಜ್ಜತನದಲಿ ಉಳಿದು ।
ಉಜ್ಜುಗದಿ ಶಿವನ ಅರಿದ ಶಿವಶರಣರ ।
ಹೆಜ್ಜೆಯಲಿ ಇರಿಸೊ । ಸರ್ವಜ್ಞ ॥ ೨೮೭ ॥

ಭಕ್ತಿಯ ಫಲಗಳು

ದೇವರನು ನೆನೆವಂಗೆ । ಭಾವಿವುದು ಬಂದಿಹುದು ।
ದೇವರನು ನೆನೆಯದಧಮಂಗೆ ಇಹಪರದಿ ।
ಆವುದೂ ಇಲ್ಲ ಸರ್ವಜ್ಞ ॥ ೨೮೮ ॥
ನಿತ್ಯವೂ ಶಿವನ ತಾ । ಹೊತ್ತಾರೆ ನೆನೆದಿಹರೆ ।
ಉತ್ತಮದ ಗತಿಯು ತನಗಹುದಲ್ಲದಡೆ ।
ಮೃತ್ಯು ಕಾಣಯ್ಯ ಸರ್ವಜ್ಞ ॥ ೨೮೯ ॥
ಎರೆಯನ್ನು ಉಳುವಂಗೆ । ಧೊರೆಯನ್ನು ಪಿಡಿದಂಗೆ ।
ಉರಗಭೂಷಣನ ನೆನೆವಂಗೆ ಭಾಗ್ಯವು ।
ಅರಿದಲ್ಲವೆಂದ ಸರ್ವಜ್ಞ ॥ ೨೯೦ ॥
ಹಾಸಂಗಿ ಹರಿಯುವಡೆ । ದಾಸಿಯರು ದೊರೆಯುವಡೆ ।
ವೀಸಕ್ಕೆ ವೀಸ ಕೂಡುವಡೆ ಅದು ತನಗೆ ।
ಈಶನ ಒಲುಮೆ ಸರ್ವಜ್ಞ ॥ ೨೯೧ ॥
ಇಪ್ಪೊತ್ತು ದೇವರನು । ತಪ್ಪದಲೆ ನೆನೆದಿಹರೆ ।
ತುಪ್ಪ ಓಗರವು ಉಣಲುಂಟು ತನಗೊಬ್ಬ ।
ಅಪ್ಪವವಳುಂಟು ಸರ್ವಜ್ಞ ॥ ೨೯೨ ॥
ಕೂಡಲೊಬ್ಬಳು ಸತಿಯು । ನೋಡಲೊಬ್ಬನು ನೆಂಟ ।
ಬೇಡಿದನು ಕೊಡುವ ನೃಪತಿಯು ಭಕ್ತಿಯು ।
ಮಾಡಿದರಿಗುಂಟು ಸರ್ವಜ್ಞ ॥ ೨೯೩ ॥
ಬಸವನೆಂದರೆ ಪಾಪ । ದೆಸೆಗೆಟ್ಟು ಹೋಗುವದು ।
ಬಿಸಿಲಿಂಗೆ ಹಸುರೊಳೆಸೆದಿರ್ಪ ಹನಿಯಾರಿ ।
ಹುಸಿದು ಹೋದಂತೆ ಸರ್ವಜ್ಞ ॥ ೨೯೪ ॥

ಸಾರವನು ಬಯಸುವಡೆ । ಕ್ಷಾರವನು ಬೆರಸುವದು ।
ಮಾರಸಂಹರನ ನೆನೆದಿಹರೆ ಮೃತ್ಯು ತಾ ।
ದೂರಕ್ಕೆದೂರ ಸರ್ವಜ್ಞ ॥ ೧೯೫ ॥

ಈಶ್ವರನು ಭಕ್ತಕಿಂಕರ

ಕೋಳಿಕೂಗದ ಮುನ್ನ । ಏಳುವದು ನಿತ್ಯದಲಿ ।
ಭಾಳಲೋಚನನ ಭಕ್ತಿಯಿಂ ನೆನೆದರೆ ।
ಆಳಿನಾಳಯ್ಯ ಸರ್ವಜ್ಞ ॥ ೧೯೬ ॥

ಎಡೆಬಿಡದೆ ಭಜಿಸು

ಎಂಜಲವಶೌಚವು । ನಂಜೆಯೆಂದೆನಬೇಡ ।
ಕುಂಜರವು ವನವ ನೆನೆವಂತೆ ಬಿಡದೆ ನಿ ।
ರಂಜನನ ನೆನೆಯೊ ಸರ್ವಜ್ಞ ॥ ೧೯೭ ॥

ಬಾಲ್ಯ ಯೌವನದೊಳಗೆ । ಲೋಲುಪ್ತನಾಗಿ ನೀ ।
ನೇಳುತಲೆ ಮದಿಸುತಿರಬೇಡ, ಅನುದಿನದಿ ।
ಶೂಲಿಯನು ನೆನೆಯೊ ಸರ್ವಜ್ಞ ॥ ೧೯೮ ॥

ಮಾಯ ಮೋಹವ ಮೆಚ್ಚಿ । ಕಾಯವನು ಕೊರಗಿಸುತ ।
ಆಯಾಸಗೊಂಡು ಬಳಲದೋನ್ನಮಶ್ಶಿ ।
ವಾಯವೆಂದೆನ್ನು ಸರ್ವಜ್ಞ ॥ ೧೯೯ ॥

ಒಡಲ ಹಿಡಿದಾಡದಿರು । ನುಡಿಯ ಹೋಗಾಡದಿರು ।
ನಡೆಯೊಳೆಚ್ಚರವ ಬಿಡದಿರು ಪರವಶದಿ ।
ದೃಢವನಗಲದಿರು ಸರ್ವಜ್ಞ ॥ ೨೦೦ ॥

ಕಣ್ಣುನಾಲಿಗೆ ಮನವ । ಪನ್ನಗಧರಕೊಟ್ಟು ।
ಚೆನ್ನಾಗಿ ಮನವ ತೆರೆದು ನೀ ಬಿಡದೆ ಶ್ರೀ ।
ಚೆನ್ನನ ನೆನೆಯೊ ಸರ್ವಜ್ಞ ॥ ೨೦೧ ॥

ಪ್ರಬೋಧ

ಕಿವಿಗೆ ಗಾನವು ಲೇಸು । ಕವಿಗೆ ನವರಸ ಲೇಸು ।
ಭವಬಂಧ ಕಳೆವ ಗುರುಲೇಸು, ಮುಕ್ತಿಗೆ ।
ಶಿವಮಂತ್ರ ಲೇಸು ಸರ್ವಜ್ಞ ॥ ೩೦೨ ॥

ಸತಿಯರಿರ್ದ್ದಡದೇನು ? । ಸುತರಾಗಿ ಫಲವೇನು ? ।
ಶತಕೋಟಿ ಧನವ ಘಳಿಸೇನು ? ಭಕ್ತಿಯ ।
ಸ್ಥಿತಿಯಿಲ್ಲದನಕ ! ಸರ್ವಜ್ಞ ॥ ೩೦೩ ॥

ಎಲ್ಲವೂ ಶಿವನೆಂದ । ರೆಲ್ಲಿಹುದು ಭಯವಯ್ಯ ? ।
ಎಲ್ಲರೂ ಶಿವನ ನೆನೆದಿಹರೆ ಕೈಲಾಸ ।
ವಿಲ್ಲಿಯೇ ನೋಡ ! ಸರ್ವಜ್ಞ ॥ ೩೦೪ ॥

ಭಕ್ತಿಗೆರಡಕ್ಕರವು । ಮುಕ್ತಿಗೆರಡಕ್ಕರವು ।
ಭಕ್ತಿಯಿಂ ಮುಕ್ತಿಪಡೆಯುವರೆ ಬಿಡದ ಆ ।
ರಕ್ಕರವರ ಹೇಳು ಸರ್ವಜ್ಞ ॥ ೩೦೫ ॥

## ೭. ಮಹೇಶ್ವರ ಪದ್ಧತಿ

### ಜಿತೇಂದ್ರಿಯನೆ ಈಶ್ವರನು

ಐವರಟ್ಟಾಳುಗಳ । ಯೌವನದ ಹಿಂಡುಗಳ ।
ತವಕದಿ ಹೊಯ್ದು ನಿಂದಾತ ಜಗದೊಳಗೆ ।
ದೈವ ತಾನಕ್ಕು ಸರ್ವಜ್ಞ ॥ ೩೦೬ ॥

ಯೌವ್ವನದ ಹಿಂಡುಗಳು ! । ಅಯ್ವರಟ್ಟಾಳುಗಳು ! ।
ಅಯ್ವರನು ವಶಕೆ ತಂದಾತ, ಲೋಕಕ್ಕೆ ।
ದೈವಜ್ಞನಕ್ಕು ಸರ್ವಜ್ಞ ॥ ೩೦೭ ॥

ಆರರಟ್ಟುಳಿಗಳನು । ಮೂರು ಕಂಟಕರನ್ನು ।
ಏರು ಜವ್ವನವ ತಡೆದಿಹರೆ ಶಿವ ತಾನು ।
ಬೇರೆ ಇಲ್ಲೆಂದ ಸರ್ವಜ್ಞ ॥ ೩೦೮ ॥

ವಿಷಯದ ಬೇರನ್ನು | ಬಿಸಿಮಾಡಿ ಕುಡಿದಾತ |
ಪಶುಪತಿಯಕ್ಕು ಸಸಿನಕ್ಕು, ಮೆಯ್ಬಣ್ಣ |
ವಿಸುನಿಯಂತಕ್ಕು ಸರ್ವಜ್ಞ || ೩೦೯ ||

ಕಚ್ಚೆ ಕೈ ಬಾಯಿಗಳು | ಇಚ್ಛೆಯಲಿ ಇದ್ದಿಹರೆ |
ಅಚ್ಯುತನಪ್ಪ ಅಜನಪ್ಪ, ಲೋಕದಲಿ |
ನಿಶ್ಚಿಂತನಪ್ಪ ಸರ್ವಜ್ಞ || ೩೧೦ ||

ಹರಿವ ಹಕ್ಕಿಯ ನುಂಗಿ | ನೊರೆವಾಲ ಕುಡಿದಾತ |
ಹರಿ ಹರನಕ್ಕು ಅಜನಕ್ಕು, ಲೋಕಕ್ಕೆ |
ಅರಿವು ತಾನಕ್ಕು ಸರ್ವಜ್ಞ || ೩೧೧ ||

ಪಾಪರಹಿತನೆ ಪರಮಾತ್ಮನು

ರುದ್ರನಕ್ಷಿಯ ಮಣಿಯ | ಭದ್ರದಲಿ ಧರಿಸಿದಗೆ |
ಹೊದ್ದಿರ್ದ ಪಾಪ ಹೋಗಲವ ಸಾಕ್ಷಾತು |
ರುದ್ರನೇ ಅಕ್ಕು ಸರ್ವಜ್ಞ || ೩೧೨ ||

ಅಣುರೇಣು ವಂದ್ಯದ | ಪ್ರಣವದ ಬೀಜವನು |
ಅಣುವಿನೊಳಗಣುವೆಂದರಿದ ಮಹಾತ್ಮನು |
ತ್ರಿಣಯ ತಾನಕ್ಕು ಸರ್ವಜ್ಞ || ೩೧೩ ||

ಆಸನವು ದೃಢವಾಗಿ | ನಾಸಿಕಾಗ್ರದಿ ದಿಟ್ಟಿ |
ಸೂಸುವ ಮನವ ಘನದಲಿರಿಸಿದನು ಜಗ |
ದೀಶನಾಗಿಕ್ಕು ಸರ್ವಜ್ಞ || ೩೧೪ ||

ಪವನ ಪರಿಯರಿದಂಗೆ | ಶಿವನು ಸಾಧಿಸಲಕ್ಕು |
ಭವಮಾಲೆ ಹರಿದು ಸುಖಿಸುವೊಡೆ ಅವ ಸದಾ |
ಶಿವನು ತಾನಕ್ಕು ಸರ್ವಜ್ಞ || ೩೧೫ ||

ಮೆಟ್ಟಿಪ್ಪುದಾನೆಯನು | ಕಟ್ಟಿಪ್ಪುದಿಂದ್ರಿಯವ |
ತೊಟ್ಟಿಪ್ಪುದುಳ್ಳ ಸಮತೆಯನು ಶಿವಪದವು |
ಮುಟ್ಟಿಪ್ಪುದಯ್ಯ ಸರ್ವಜ್ಞ || ೩೧೬ ||

# ೮ ಜ್ಞಾನ ಪದ್ಧತಿ

## ಜ್ಞಾನ ಪ್ರಶಂಸೆ

### ಜ್ಞಾನವೆ ಉತ್ತಮ

ಜ್ಞಾನದಿಂ ಮೇಲಿಲ್ಲ। ಶ್ವಾನನಿಂ ಕೀಳಿಲ್ಲ।
ಭಾನುವಿಂದಧಿಕ ಬೆಳಗಿಲ್ಲ, ಜಗದೊಳಗೆ
ಜ್ಞಾನವೇ ಮಿಗಿಲು! ಸರ್ವಜ್ಞ ॥ ೩೧೭ ॥

ಜ್ಞಾನದಿಂದಲಿ ಇಹವು। ಜ್ಞಾನದಿಂದಲಿ ಪರವು।
ಜ್ಞಾನವಿಲ್ಲದಿರೆ ಸಕಲವೂ ತನಗಿದ್ದು।
ಹಾನಿ ಕಾಣಯ್ಯ ಸರ್ವಜ್ಞ ॥ ೩೧೮ ॥

ಅರಿವಿನ ಅರಿವು ತಾ। ಧರೆಯೊಳಗೆ ಮೆರೆದಿಹುದು।
ಅರಿವಿನ ಅರಿವ ಹರಿ ಹರ ಬೊಮ್ಮರೂ।
ಅರಿಯರೈ ಕಾಣ! ಸರ್ವಜ್ಞ ॥ ೩೧೯ ॥

ಎತ್ತ ಹೋದರು ಮನವ। ಹತ್ತಿಕೊಂಡೇ ಬಹದು।
ಮತ್ತೊಬ್ಬ ಮುನಿದು ಕೊಳಲರಿಯ ಜ್ಞಾನದ।
ಬಿತ್ತು ಲೇಸೆಂದ ಸರ್ವಜ್ಞ ॥ ೩೨೦ ॥

### ಭಕ್ತಿ ಕೂಡಿದ ಜ್ಞಾನವೇ ಸರ್ವೋತ್ತಮ

ತತ್ವದ ಜ್ಞಾನ ತಾ। ನುತ್ತಮವೆನಬೇಕು।
ಮತ್ತೆ ಶಿವಧ್ಯಾನ ಬೆರೆದರದು ಶಿವನಿಂದ।
ಅತ್ತಲೆನಬೇಕು! ಸರ್ವಜ್ಞ ॥ ೩೨೧ ॥

ನಾಟ ರಾಗವು ಲೇಸು। ತೋಟ ಮಲ್ಲಿಗೆ ಲೇಸು।
ಕೂಟವದು ಲೇಸು ಹಿರಿಯರೊಳು, ಶಿವನ ಅರಿ।
ದಾಟವೇ ಲೇಸು ಸರ್ವಜ್ಞ ॥ ೩೨೨ ॥

### ಸೃಷ್ಟಿ ವಿವೇಕ

ಒಂದರ ಮೊದಲೊಳಗೆ। ಬಂದಿಹುದು ಜಗವೆಲ್ಲ।
ಒಂದರ ಮೊದಲನರಿದರೆ ಜಗ ಕಣ್ಣ।
ಮುಂದೆ ಬಂದಿಹುದು ಸರ್ವಜ್ಞ ॥ ೩೨೩ ॥

ವನಧಿಯೊಳಡಗಿ ತೆರೆ । ವನಧಿಯೊಳಗೆನೆವಂತೆ ।
ಚಿನುಮಯನಿಪ್ಪ ನಿಜದೊಳಗೆ ತ್ರೈಜಗದ ।
ಜನನ ತಾನೆಂದ ಸರ್ವಜ್ಞ ॥ ೩೨೪ ॥

ಕನಕ ತಾ ಕಂಕಣದ । ಜನಕನೆಂದೆನಿಸಿಹುದು ।
ಕ್ಷಣಿಕವದು ರೂಪು ಎಂದರಿಯದಾಮನುಜ ।
ಶುನಕನಲೆದಂತೆ ಸರ್ವಜ್ಞ ॥ ೩೨೫ ॥

ಭಿತ್ತಿಯ ಚಿತ್ರದಲಿ । ತತ್ವ ತಾ ನೆರೆದಿಹುದೆ? ।
ಚಿತ್ರತ್ವ ತನ್ನ ನಿಜದೊಳಗೆ, ತ್ರೈಜಗದ ।
ತತ್ವ ತಾನೆಂದ ಸರ್ವಜ್ಞ ॥ ೩೨೬ ॥

## ಈಶ್ವರ ವಿವೇಕ

### ಆತ್ಮಸ್ವರೂಪ

ಓಕಾರ ಮುಖವಲ್ಲ । ಆಕಾರವದಕಿಲ್ಲ ।
ಆಕಾಶದಂತೆ ಅಡಗಿಹುದು ಪರಬೊಮ್ಮ ।
ತಾ ಕಾಣದಯ್ಯ ಸರ್ವಜ್ಞ ॥ ೩೨೭ ॥

ಕ್ಷೀರದಲಿ ಘೃತ, ವಿಮಲ । ನೀರಿನೊಳು ಶಿಖಿಯಿರ್ದು ।
ಆರಿಗೂ ತೋರದದರಂತೆ ಎನ್ನೊಳಗೆ ।
ಸಾರಿಹನು ಶಿವನು ಸರ್ವಜ್ಞ ॥ ೩೨೮ ॥

### ಜಗಚ್ಚರಿತ

ಕಲ್ಲು ಕಾಷ್ಟದೊಳಿರುವ । ಮುಳ್ಳು ಮೊನೆಯಲ್ಲಿರುವ ।
ಸುಳ್ಳು ಈ ಮಾತು ಎನಬೇಡ, ಪರಮಾತ್ಮ ।
ನೆಲ್ಲೆಲ್ಲು ಇರುವ ಸರ್ವಜ್ಞ ॥ ೩೨೯ ॥

ಕಲ್ಲಿನಲಿ ಮಣ್ಣಿನಲಿ । ಮುಳ್ಳಿನ ಮೊನೆಯಲ್ಲಿ ।
ಎಲ್ಲಿ ನೆನೆದಲ್ಲಿ ಶಿವನಿರ್ಪ ಅವನೀನಿ ।
ದ್ದಲ್ಲಿಯೆ ಇರುವ ಸರ್ವಜ್ಞ ॥ ೩೩೦ ॥

ಕಲ್ಲು ಕಾಷ್ಟವು ಚಿತ್ರ । ದಲ್ಲಿ ಇರುವನೆ ಶಿವನು ? ।
ಎಲ್ಲಿಯು ಮಾತು ತೆಗೆ, ಬೇಡ ! ನಿಷ್ಠೆಯಿ ।
ದ್ದಲ್ಲಿಪ್ಪನಭವ ಸರ್ವಜ್ಞ ॥ ೩೩೧ ॥

ಅಲ್ಲಿಪ್ಪನಿಲ್ಲಿಪ್ಪ । ನೆಲ್ಲಿಪ್ಪನೆನಬೇಡ ।
ಕಲ್ಲಿನಂತಿಪ್ಪ ಮಾನವನ ಮನ ಕರಗೆ ।
ಅಲ್ಲಿಪ್ಪ ನೋಡ ! ಸರ್ವಜ್ಞ ॥ ೩೩೨ ॥

ಜಗದಾತೀತ

ತಿಟ್ಟಿಯೊಳು ತೆವರದೊಳು । ಹುಟ್ಟಿಹನೆ ಪರಶಿವನು ? ।
ಹುಟ್ಟು ಸಾವುಗಳು ಅವಗಿಲ್ಲ, ಜಗವನ್ನು ।
ಬಿಟ್ಟಿಹನು ನೋಡ ! ಸರ್ವಜ್ಞ ॥ ೩೩೩ ॥

ಬಡಿಗ ಬೊಂಬೆಯು ಮಾಡಿ । ಬೆಡಗಿನ ಕೀಲಿಕ್ಕಿ ।
ಮಿಡಿಯೆ ಸೂತ್ರವನು, ನರ್ತಿಸುವ ಬೊಂಬೆಯೊಳು ।
ಬಡಿಗ ತಾನಿಹನೆ? ಸರ್ವಜ್ಞ ॥ ೩೩೪ ॥

ಎಲ್ಲವೂ ಶಿವನೆಂಬ । ಸೊಲ್ಲು ತಾ ಸರಿಯಲ್ಲ ।
ಎಲ್ಲವೂ ಶಿವನು ತಾನಾಗೆ ನಿತ್ಯತ್ವ ।
ಎಲ್ಲಕೇಕಿಲ್ಲ ? ಸರ್ವಜ್ಞ ॥ ೩೩೫ ॥

ಜಗವು ಶಿವನೊಳಗುಂಟು । ಜಗದೊಳಗೆ ಶಿವನಿಲ್ಲ ।
ಜಗವು ಶಿವನಿಂದ ಬೇರಿಲ್ಲ, ಈ ಬೆಡಗ ।
ಅಘಹರನೆ ಬಲ್ಲ ಸರ್ವಜ್ಞ ॥ ೩೩೬ ॥

ಸರ್ವಾಂತರ್ಯಾಮಿ । ಒರ್ವನೆಂಬುವ ತತ್ವ ।
ನಿರ್ದಿಷ್ಟವಾಗಿ ಇರುತಿರಲು ಮೋಕ್ಷವದು ।
ಸರ್ವರಿಗೆ ಸುಲಭ ಸರ್ವಜ್ಞ ॥ ೩೩೭ ॥

ಆತ್ಮಸ್ಥ

ಸಣ್ಣನೆಯ ಮಳಲೊಳಗೆ । ನುಣ್ಣನೆಯ ಶಿಲೆಯೊಳಗೆ ।
ಬಣ್ಣಿಸುತ ಬರೆದ ಪಟದೊಳಗೆ ಇರುವಾತ ।
ತನ್ನೊಳಗೆ ಇರನೆ ? ಸರ್ವಜ್ಞ ॥ ೩೩೮ ॥

ಆನೆ ಕನ್ನಡಿಯಲ್ಲಿ । ತಾನಡಗಿ ಇಪ್ಪಂತೆ ।
ಜ್ಞಾನವುಳ್ಳವರ ಹೃದಯದಲಿ ಪರಶಿವನು।
ತಾನಡಗಿ ಇಹನು ಸರ್ವಜ್ಞ ॥ ೩೩೩ ॥

ತ್ವಂಪದಾರ್ಥ ರಹಿತ

ನಾನು ನೀನು ಭೇದಗ । ಳೇನು ಬೊಮ್ಮಗೆ ಇಲ್ಲ ।
ತಾನೆ ತಾನಾಗಿ ಇಪ್ಪುದೆ ಬೊಮ್ಮದ
ಸ್ಥಾನವೆಂದರಿಗು ಸರ್ವಜ್ಞ ॥ ೩೪೦ ॥

ತ್ರಿಮೂರ್ತಿಗಳಿಗೆ ಮೀರಿದವ

ನೂರು ಕಂಡುಗ ಹೊಟ್ಟ । ತೂರಿದರೆ ಫಲವೇನು ।
ಮೂರರ ಮಂತ್ರದಿಂದಲಿ ಪರಬೊಮ್ಮ ।
ಮೀರಿಹುದು ನೋಡ! ಸರ್ವಜ್ಞ ॥ ೩೪೧ ॥

ಮಾಯಾವಿವೇಕ

ಕರ್ಮದಿಂದ ದೇವರು ಮರೆ

ಕಾಣಿಸಿರುವಂತವನ । ಕಾಣದೇಕಿರುವಿರೋ? ।
ಕಾಣಲು ಬಿಡಲು ಕರ್ಮಗಳು ನಿನ್ನಿರವ ।
ನಾಣೆ ಇಟ್ಟಿಹವು ಸರ್ವಜ್ಞ ॥ ೩೪೨ ॥

ಮಾಯಾಜಾಲ

ಜೊಳ್ಳು ಮನುಜರು ತಾವು । ಸುಳ್ಳು ಸಂಸಾರದೊಳು ।
ತುಳ್ಳಿಡಿದು ಮಾಯೆಯೆಂಬವಳ ಬಲೆಯೊಳಗೆ ।
ಹೊಳ್ಳಾಡುತಿಹರು ಸರ್ವಜ್ಞ ॥ ೩೪೩ ॥

ಇಲ್ಲದ ಮಾಯೆಯನು । ಇಲ್ಲೆನಲಿಕರಿಯದಲೆ ।
ಬಲ್ಲಿತ್ತು ಮಾಯೆಯೆನಬೇಡ! ತಿಳಿಯಲ್ಕೆ ।
ಎಲ್ಲಿಹುದು ಮಾಯೆ ಸರ್ವಜ್ಞ ॥ ೩೪೪ ॥

ಕಾಯವಿಂದ್ರಿಯದಿಂದ । ಜೀವ ವಾಯುವಿನಿಂದ ।
ಮಾಯವದು ಬೊಮ್ಮನಿಂದೆಂಬುವಾನಾಯ ।
ಬಾಯ ನೋಡೆಂದ ಸರ್ವಜ್ಞ || ೩೪೫ ||

ಮಾಯೆಯ ಮಿಥ್ಯಾತ್ವ

ಇಲ್ಲದನು ಇಲ್ಲೆನಲಿ । ಕಿಲ್ಲಿಯೇ ಕಲಿಯದಲೆ ।
ಇಲ್ಲದ ಮಾಯೆಯುಂಟೆಂಬ ಮೂಢಾತ್ಮ ।
ಗೆಲ್ಲಿಯದು ಮುಕ್ತಿ ? ಸರ್ವಜ್ಞ || ೩೪೬ ||

ಚಾಚಿಕೊಂಡಿಹ ಜಗವು । ಯೋಚನೆಗೆ ಬಯಲಹುದೆ ? ।
ಯಾಚಕನರನೆಂದು ಕನವರಿಸಿ ಯಾಚಿಸಲು ।
ನಾಚಿಕೊಂಡಂತೆ ಸರ್ವಜ್ಞ || ೩೪೭ ||

ಜನ್ಮಾಂತರ ವಿವೇಕ

ಅಜ್ಞಾನದಿಂದ ಪುನರ್ಜನ್ಮ ಪ್ರಾಪ್ತಿ

ಪಂಚಭೂತಂಗಳೊಳ । ಸಂಚಲವನರಿಯದಲೆ ।
ಹಂಚನೆ ಹಿಡಿದು ತಿರಿದುಂಬ ಜ್ಞಾನಿ ತಾ ।
ಹಂಚುಹರಿಯಹನು ಸರ್ವಜ್ಞ || ೩೪೮ ||

ಪಂಚವಿಂಶತಿ ತತ್ವ । ಸಂಚಯದ ದೇಹವನು ।
ಹಂಚೆಂದು ಕಾಣಲರಿಯದಿರೆ ಭವ ಮುಂದೆ ।
ಗೊಂಚಲಾಗಿಹುದು ಸರ್ವಜ್ಞ || ೩೪೯ ||

ಬೆಂದ ಆವಿಗೆ ಭಾಂಡ । ಒಂದೊಂದು ಭೋಗವನು ।
ಅಂದದಿ ಉಂಡು ಒಡೆದು ಹಂಚಾದಂತೆ ।
ಬಿಂದುವಿನ ದೇಹ ಸರ್ವಜ್ಞ || ೩೫೦ ||

ಜ್ಞಾನಿಗೆ ಜನ್ಮಾಂತರವಿಲ್ಲ

ಮತ್ತೆ ಸದ್ಗುರು ಮುಖದಿ । ತತ್ವಮಸಿಯನೆ ತಿಳಿದು ।
ಸತ್ಯವಿಂತೆಂದು ಅರಿದಿಪ್ಪ ಜ್ಞಾನಿ ತಾ ।
ಸತ್ತು ಹುಟ್ಟುವನೆ ? ಸರ್ವಜ್ಞ || ೩೫೧ ||

### ಪುನರ್ಜನ್ಮ ಮಿಥ್ಯಾತ್ವ

ಸತ್ತ ಬಳಿಕಾ ಜೀವ । ಎತ್ತ ಹೋಹುದನರಿಯ ।
ಅತ್ತ ಪರಲೋಕವೆಂಬವರ ತಲೆಯಲ್ಲಿ ।
ಪಿತ್ತವೇರಿಹುದು ಸರ್ವಜ್ಞ ॥ ೩೫೨ ॥

ಸತ್ತು ಹುಟ್ಟುವರೆಂಬ । ಮಿಥ್ಯದ ನುಡಿಯೇಕೆ? ।
ಬಿತ್ತಿದರೆ ಬೀಜ ಬೆಳೆವಂತೆ ವೃಕ್ಷ ತಾ ।
ಸತ್ತು ಹುಟ್ಟುವದೆ? ಸರ್ವಜ್ಞ ॥ ೩೫೩ ॥

## ಜ್ಞಾನಿಯು ಸ್ವರೂಪ ಲಕ್ಷಣ

### ನಿತ್ಯಾನಿತ್ಯ ವಿವೇಕ

ಆತುಮನ ಬಣ್ಣವನು । ಮಾತಿನಾಗಾಧವನು ।
ಜಾತಿಯು ನೆಲೆಯುನರಿದು ತಾ ಪರಮನಾ ।
ದಾತನೇ ಯೋಗಿ ಸರ್ವಜ್ಞ ॥ ೩೫೪ ॥

ನೆರೆಯುಂಡ ಊಟವದು । ಮರಳಿ ತಾನುಳಿವುದೇ? ।
ಸ್ಥಿರವಸ್ಥಿರಗಳ ಮಹಿಮೆಯನು ಅರಿದಾತ ।
ವರಜ್ಞಾನಿ ಕಾಣೊ ಸರ್ವಜ್ಞ ॥ ೩೫೫ ॥

### ಜ್ಞಾನಿಗೆ ಬಂಧನವಿಲ್ಲ

ತರಣಿಗಂ ತಿಮಿರದಾ । ವರಣ ತಾನಂಟುವದೆ? ।
ವರಜ್ಞಾನವುಳ್ಳ ಮನುಜಂಗೆ ಸಂಸಾರ ।
ತಿರುಗಿ ತಾನಹುದೆ? ಸರ್ವಜ್ಞ ॥ ೩೫೬ ॥

ಹುತ್ತು ನೀರೊಳು ಪುಟ್ಟಿ । ಮತ್ತೆ ನೀರಪ್ಪುದೆ? ।
ಸತ್ಯವನರಿದ ಜ್ಞಾನಿ ಸಂಸಾರವನು ।
ಹುತ್ತೆ ಹೊದ್ದುವನೆ? ಸರ್ವಜ್ಞ ॥ ೩೫೭ ॥

ತಿಳಿಯು ಕಾಸಿದ ತುಪ್ಪ । ವಳಿದು ಹಾಲಪ್ಪುದೆ? ।
ಕಳೆ ಬೆಳಗನರಿದ ಶಿವಯೋಗಿ ಸಂಸಾರ ।
ದೊಳಗೆ ಸಿಲುಕುವನೆ? ಸರ್ವಜ್ಞ ॥ ೩೫೮ ॥

ಹುಟ್ಟಿದಿಹ ತಾಯಿಯೊಳು । ಹುಟ್ಟಿದನು ಮಗನೊಬ್ಬ ।
ಹುಟ್ಟಿಸಿದ ತಾಯ ತಾ ಕೊಂದು ನೆರೆ ಸತ್ತು ।
ಹುಟ್ಟದೆ ಹೋದ ಸರ್ವಜ್ಞ ॥ ೩೫೯ ॥

ಗಗನಕ್ಕೆ ಹೊಗೆ ಹೋಗಿ । ಮಿಗೆ ಜಗಕೆ ಬಪ್ಪುದೇ ? ।
ಅಘಹರನ ಪದವ ಸವಿದವನು ಸಂಸಾರ ।
ದಘವ ಹೊದ್ದುವನೆ ? ಸರ್ವಜ್ಞ ॥ ೩೬೦ ॥

ಓಡು ಮಣ್ಣಿಲಿ ಹುಟ್ಟಿ । ಕೂಡುವದೆ ಜಾತಿಯನು ? ।
ರೂಢಿಗೀಶ್ವರನ ಬೆರೆದಿಹನು ಸಂಸಾರ ।
ಕೂಡಿ ಹೋಗುವನೆ ? ಸರ್ವಜ್ಞ ॥ ೩೬೧ ॥

ಪರುಷಕ್ಕೆ ಲೋಹಜ । ಕರಡಿಗಿಂಗು ತಾನಹುದೆ ? ।
ಹರಭಕ್ತನಾದ ಜ್ಞಾನಿ ಸಂಸಾರದಾ ।
ವರಣದೊಳಗಿಹನೆ ? ಸರ್ವಜ್ಞ ॥ ೩೬೨ ॥

ಆನೆ ಮುಕುರದೊಳಡಗಿ । ಭಾನು ಸರಸಿಯೊಳಡಗಿ ।
ಆನೆನ್ನ ಗುರುವಿನೊಳಗಡಗಿ ಸಂಸಾರ ।
ತಾನೆತ್ತಣದು ? ಸರ್ವಜ್ಞ ॥ ೩೬೩ ॥

ಇಂದ್ರಿಯವ ತೊರೆದಾತ । ವಂದ್ಯನಹ ಜಗಕೆಲ್ಲ ।
ಬಿಂದುವಿನ ಭೇದವರಿವ ಮಹಾತ್ಮನು ।
ಬೆಂದನುಲಿಯಂತೆ ಸರ್ವಜ್ಞ ॥ ೩೬೪ ॥

## ಜ್ಞಾನಿಗೆ ಮಾಯವಿಲ್ಲ

ತನ್ನ ತಾನರಿದಂಗೆ । ಉನ್ನ ಹೊದ್ದದು ಮಾಯೆ ।
ಉನ್ನತದೊಳಿಪ್ಪ ಗಗನವೇರಿ ಬಪ್ಪವನ ।
ಕುನ್ನಿ ಕಚ್ಚುವದೆ ಸರ್ವಜ್ಞ ॥ ೩೬೫ ॥

ಬೇಡನಿಕ್ಕಿದಡುಂಬ । ಕೂಡನಾ ಜಾತಿಯನು ।
ಓಡು ಮಾಣಿಕವು ಅರಿಯೆಂಬ ಜ್ಞಾನಿಯನು ।
ಕಾಡುವಳೆ ಮಾಯೆ ? ಸರ್ವಜ್ಞ ॥ ೩೬೬ ॥

ಜ್ಞಾನಿ ಸಂಸಾರದೊಳು । ತಾನಿರಲು ತಿಳಿದಿಹನು ।
ಭಾನು ಮೋಡದಲಿ ಹೊಳೆವಂತೆ ಇಹಪರದಿ ।
ತಾನು ಬೆಳಗಿಹನು ಸರ್ವಜ್ಞ ॥ ೩೬೭ ॥

ಜ್ಞಾನಿಗೆ ಪಾಪವಿಲ್ಲ

ಆತುಮನ ಜ್ಯೋತಿಯನು । ಪ್ರೀತಿಯಲಿ ಅರಿದಂಗೆ ।
ಸೂತಕವದಿಲ್ಲ ಭಯವಿಲ್ಲ, ಪಂಚಮಹ ।
ಪಾತಕಗಳಿಲ್ಲ ಸರ್ವಜ್ಞ ॥ ೩೬೮ ॥

ಜ್ಞಾನಿಗೆ ಚಿಂತೆಯಿಲ್ಲ

ಜಾತಿ ಸೂತಕವಳಿದು । ಮಾತಿನ ಗುಣ ತಿಳಿದು ।
ಆತುಮನ ನೆಲೆಯ ನಿಜವರಿದು ನಿಂದವಗೆ ।
ಏತರದು ಚಿಂತೆ? ಸರ್ವಜ್ಞ ॥ ೩೬೯ ॥

ಜ್ಞಾನಿಗೆ ಭಯವಿಲ್ಲ

ಎಂಜಲವು ಹೊಲೆಯಿಲ್ಲ । ಸಂಜ ಬೆಳಗುಗಳಿಲ್ಲ ।
ಅಂಜಿಕೆಯು ಇಲ್ಲ ಭವವಿಲ್ಲ ಜ್ಞಾನವೆಂ- ।
ಬಂಜನವಿರಲು ಸರ್ವಜ್ಞ ॥ ೩೭೦ ॥

ಆನೆ ಮೇಲಿದ್ದವನು । ಸೋನ ಕಂಡೋಡುವನೆ? ।
ಜ್ಞಾನ ಹೃದಯದಲಿ ನೆಲಸಿದ ಶಿವಯೋಗಿ ।
ಹೀನಗಂಜುವನೆ ಸರ್ವಜ್ಞ ॥ ೩೭೧ ॥

ಒಳಗಣ ಜ್ಯೋತಿಯ । ಬೆಳಗನರಿದಾತಂಗೆ ।
ಬೆಳಗಾದುದೇಳು ಬೇಹಾರಕೆಂದೆಂಬ ।
ಕಳವಳವದೇಕೆ? ಸರ್ವಜ್ಞ ॥ ೩೭೨ ॥

ಆನೆ ನೀರಾಟದಲಿ । ಮೀನ ಕಂಡಂಜುವದೆ? ।
ಹೀನ ಮಾನವರ ಬಿರುನುಡಿಗೆ ತತ್ವದ ।
ಜ್ಞಾನಿಯಂಜುವನೆ? ಸರ್ವಜ್ಞ ॥ ೩೭೩ ॥

ನಿರ್ದ್ವಂದ್ವಿ

ಯೋಗಿಗಂ ಹೊಲೆಯಿಲ್ಲ । ನಾಗರಕೆ ನೆಲೆಯಿಲ್ಲ ।
ಯೋಗವಟ್ಟಿಗೆಗೆ ಮೊಳವಿಲ್ಲ, ಜ್ಞಾನಿಗೆ ।
ಆಗು ಹೋಗಿಲ್ಲ ಸರ್ವಜ್ಞ ॥ ೩೭೪ ॥

ತೀರ್ಥಯಾತ್ರೆ ಅನವಶ್ಯ

ವಾರಣಾಸಿಗೆ ಹೋಹ । ಕಾರಣವದೇನಯ್ಯ ।
ಕಾರಣಿಕ ಪುರುಷನೊಳಗಿರಲು ಅಲೆವುದಕೆ ।
ಕಾರಣವ ಹೇಳು ಸರ್ವಜ್ಞ ॥ ೩೭೫ ॥

ದೇಹದಂಡನೆ ವ್ಯರ್ಥ

ಪಂಚಾಗ್ನಿಯಲಿ ಕುಳಿತು । ವಂಚಿಸಿದ ದೇಹಕ್ಕೆ ।
ಮುಂಚೆ ಉರಿ ನರಕವನನುಭವಿಸಿದಾಮೇಲೆ ।
ಸಂಚಿತದ ಫಲವು ಸರ್ವಜ್ಞ ॥ ೩೭೬ ॥

ಸತ್ಯವು ಸಮೀಪ

ಇಲ್ಲಿಲ್ಲವೆಂಬುದನು । ಇಲ್ಲಿಯೇ ಅರಸುವದು ।
ಇಲ್ಲಿಲ್ಲವೆಂದರಿಯಲೊಡನೆ ಜಗ ।
ವೆಲ್ಲ ಒಳಗಿಕ್ಕು ಸರ್ವಜ್ಞ ॥ ೩೭೭ ॥

ಸತ್ಯವೆಂಬುದು ತಾನು । ಹಿತ್ತಲದ ಗಿಡನೋಡ ।
ಮತ್ತಲ್ಲಿ ನೋಡಿ ಅರನದಲೆ ತಾನಿರ್ದ್ದ ।
ಹತ್ತಿಲೇ ನೋಡ ಸರ್ವಜ್ಞ ॥ ೩೭೮ ॥

ನಷ್ಟವಹ ಜಗವ ಮನ । ಮುಟ್ಟುವದು ನಿಮಿಷದಲಿ ।
ನೆಟ್ಟನೆ ಹೃದಯದೊಳಗಿಪ್ಪ ಜೀವನನು ।
ಮುಟ್ಟದೇಕೆಂದ? ಸರ್ವಜ್ಞ ॥ ೩೭೯ ॥

ಜಾಣನಾದವ ತಾನು । ಪ್ರಾಣ ತಾನೊಂದೆಂದು ।
ಪ್ರಾಣಿಕೋಟಿಯನು ಬಗೆದರೆ ಮೋಕ್ಷ ತಾ ।
ಗೇಣಿಂದ ಕಿರಿದು ಸರ್ವಜ್ಞ ॥ ೩೮೦ ॥

## ಬ್ರಹ್ಮಜ್ಞಾನ ಸ್ವರೂಪ ಲಕ್ಷಣ

### ನಿರಭಿಮಾನಿ

ಜ್ಞಾನನಾನೆಯು ಬೊಗಳ | ಶ್ವಾನನೆ ತಾ ಬೊಗಳುವದೆ? |
ಜ್ಞಾನಿ ತಾ ಶ್ವಾನನಂದದಿ ಬೊಗಳಲಥಿ |
ಮೌನವವಗಿಹುದೆ? ಸರ್ವಜ್ಞ ॥ ೩೮೧ ॥

ಬಲ್ಲೆನೆಂದೆಂಬುವವ | ರೆಲ್ಲರೂ ಹಿರಿಯರೆ? |
ಸೊಲ್ಲಿನ ಭೇದವರಿದಡೆ ಕಿರಿಯ ತಾ |
ನೆಲ್ಲರಿಗೆ ಹಿರಿಯ ಸರ್ವಜ್ಞ ॥ ೩೮೨ ॥

ಬಲ್ಲೆನೆಂಬುವ ಮಾತು | ಎಲ್ಲವೂ ಹುಸಿ ಕಾಣೊ! |
ಬಲ್ಲರೆ ಬಲ್ಲೆನೆನಬೇಡ, ಸುಮ್ಮನಿರ |
ಬಲ್ಲವನೆ ಬಲ್ಲ! ಸರ್ವಜ್ಞ ॥ ೩೮೩ ॥

### ನಿರಹಂಕಾರಿ

ಅರಿದೆನೆಂಬುವಗೊಂದು | ಕುರುಹುಂಟು, ಬೊಮ್ಮವನು |
ಅರಿದಿಹೆನೆಂಬ ಅರಿವ ತಾ ಮರಿದಡಾ |
ತೆರನಿಲ್ಲ ಬೊಮ್ಮ ಸರ್ವಜ್ಞ ॥ ೩೮೪ ॥

ಬೊಮ್ಮ ತಾನೆಂಬುವಗೆ | ಸುಮ್ಮನೇ ಬಹದಲ್ಲ |
ಹಮ್ಮಿನ ಪಥವನಳಿದರೆ ಪರಬೊಮ್ಮ |
ಗಮ್ಮನೆ ಅಕ್ಕು ಸರ್ವಜ್ಞ ॥ ೩೮೫ ॥

ಬೊಮ್ಮವನು ಅರಿದಿಹರೆ | ಸುಮ್ಮನಿದ್ದಿರಬೇಕು |
ಬೊಮ್ಮವನರಿದು ಉಸುರಿದರೆ ಕಳಹೋಗಿ |
ಕೆಮ್ಮಿ ಸತ್ತಂತೆ ಸರ್ವಜ್ಞ ॥ ೩೮೬ ॥

ಸತ್ಯವನು ಅರಿದಿಹರೆ | ಸತ್ತಹಾಗಿರಬೇಕು |
ಸತ್ಯವನು ಅರಿದು ಗಳಹಿದರೆ ಸತ್ತವರಿ |
ಗತ್ತ ಹಾಗಕ್ಕು! ಸರ್ವಜ್ಞ ॥ ೩೮೭ ॥

ತನ್ನ ನೋಡಲಿ ಎಂದು । ಕನ್ನಡಿಯು ಕರೆಯುವುದೆ? ।
ತನ್ನಲ್ಲಿ ಜ್ಞಾನವುದಿಸಿಡ ಮಹಾತ್ಮನು ।
ಕನ್ನಡಿಯು ಜಗಕೆ । ಸರ್ವಜ್ಞ ॥ ೩೮೮ ॥

ಸತ್ತಹಾಗಿರು ಎಂಬು । ದೆತ್ತಣದ ಬಯ್ಗಳವು? ।
ಕತ್ತೆ ಮಾನವರು ಅರಿಯರು, ಇದು ಮಹಾ ।
ತತ್ವದ ಮಾತು । ಸರ್ವಜ್ಞ ॥ ೩೮೯ ॥

ಹರಿಹರ ಬ್ರಹ್ಮರಿಗೂ ಅಹಂಕಾರ

ಅರಿವನರಿದಡೆ ಜೀವ । ನೆರೆ ಸದಾಶಿವನಕ್ಕು ।
ಅರುವಿನ ತೆರನ ಮರೆದಡೆ ಹರಿಬೊಮ್ಮ ।
ರಿರವಿನಂತಕ್ಕು ಸರ್ವಜ್ಞ ॥ ೩೯೦ ॥

ಅರಿವನರಿಯದೆ ಜೀವ । ಪರಬೊಮ್ಮವರಿಯದದು ।
ಅರಿವಿನ ಅರಿವ ಹರಿಹರ ಬೊಮ್ಮರೂ ।
ಅರಿಯರೈ ನೋಡ ಸರ್ವಜ್ಞ ॥ ೩೯೧ ॥

ಬ್ರಹ್ಮಜ್ಞನಿಗೆ ವಾದವಿಲ್ಲ

ವೇದಕ್ಕೆ ಬೆಲೆಯಿಲ್ಲ । ಭೇದಕ್ಕೆ ಹೊಲಬಿಲ್ಲ ।
ಸಾಧಕಗೆ ಆವ ಭಯವಿಲ್ಲ, ಜ್ಞಾನಿಗೆ ।
ವಾದವೇ ಇಲ್ಲ ಸರ್ವಜ್ಞ ॥ ೩೯೨ ॥

ಬ್ರಹ್ಮಜ್ಞನಿಗೆ ಭೇದವಿಲ್ಲ

ತಾನೊಂದನೆಯ್ದಿದನು । ಏನೊಂದ ಪಿಡಿದಿರನು ।
ತನ್ನಂತೆ ಪರರ ಕಾಂಬುವನು ಜಗವೆಲ್ಲ ।
ತಾನಾದ ಬಳಿಕ ಸರ್ವಜ್ಞ ॥ ೩೯೩ ॥

ಬ್ರಹ್ಮಜ್ಞನಿಗೆ ವಿಶ್ವದೃಷ್ಟಿ

ನಾನೊಂದು ಕೆಯ್ದುವನು । ಏನೆಂದು ಹಿಡಿದಿರಲಿ । ।
ಏನ ಬಿಟ್ಟೇನ ಇರಿಯಲಿ ಜಗವೆಲ್ಲ ।
ನಾನಾದ ಬಳಿಕ । ಸರ್ವಜ್ಞ ॥ ೩೯೪ ॥

ಅದ್ವಯಿತ ತಾನಾಗಿ । ಯುದ್ಧವಿನ್ನಾರೊಡನೆ ।
ಬುದ್ಧಿಯಿಂ ತನ್ನನರಿದಂಗೆ ಲೋಕದ ।
ಗುದ್ದಾಟವಿಲ್ಲ ಸರ್ವಜ್ಞ ॥ ೩೯೫ ॥

ಬ್ರಹ್ಮಜ್ಞನಿಗೆ ಜಾತಿಯಿಲ್ಲ

ಕೋತಿಂಗೆ ಗುಣವಿಲ್ಲ । ಮಾತಿಂಗೆ ಕೊನೆಯಿಲ್ಲ ।
ನೋತುಹೋದವಗೆ ಜಗವಿಲ್ಲ, ಅರಿದಂಗೆ ।
ಜಾತಿಯೇ ಇಲ್ಲ ಸರ್ವಜ್ಞ ॥ ೩೯೬ ॥

ಬ್ರಹ್ಮಜ್ಞನ ವರ್ತನ

ಸಂಸಾರ ಧಿಕ್ಕಾರಿ

ಜಾರೆಯು ಶಿಶುವಳಲು । ಆರೈಸಿ ಪತಿ ಕರೆಯೆ ।
ಜಾರೆಯುದ ಕಂಡು ನಗುವಂತೆ ಜ್ಞಾನಿ ಸಂ ।
ಸಾರವನು ನಗುವ ಸರ್ವಜ್ಞ ॥ ೩೯೭ ॥

ಮೂಲ ವಸ್ತುವನರಿದು । ಲೀಲೆಯೊಳು ಆಡುತಿಹ ।
ಶೂಲಿಯು ಶರಣ ಸತಿಯರನು ತಾ ತೊರೆದ ।
ಹೇಲೆಂದು ಅರಿವ ಸರ್ವಜ್ಞ ॥ ೩೯೮ ॥

ಸುಂದರಾಂಗನೆ ಬಂದು । ಮುಂದೆ ತಾ ನಿಂದಿರಲು ।
ಸಂದರಿವನರಿದ ಜ್ಞಾನಿಯು ಎಲುವಿನ ।
ಹಂದರವ ಕಾಂಬ ಸರ್ವಜ್ಞ ॥ ೩೯೯ ॥

ಹೇಲು ಮೈಮೆತ್ತಿದ । ಬಾಲನಂತಿರಬೇಕು ।
ಬಾಲೆಯರ ಜಾಲಕೊಳಬೀಳದಾಜ್ಞಾನಿ ।
ಶೂಲಿಯಂತಕ್ಕು ಸರ್ವಜ್ಞ ॥ ೪೦೦ ॥

ಖಂಡಿತವಾದಿ

ಕಪ್ಪರದಲುಂಬುವರು । ಒಪ್ಪರದಿ ನಡೆಯುವರು ।
ತಪ್ಪಿದರೆ ಹಲ್ಲ ಕಳೆವರು, ಮಹಾತ್ಮರ ।
ಒಪ್ಪವಂ ನೋಡ ಸರ್ವಜ್ಞ ॥ ೪೦೧ ॥

ಆತ್ಮತೃಪ್ತಿ

ದೊರಕಿದನು ಉಂಡುಂಡು । ದೊರಕಿದನು ಉಟ್ಟುಟ್ಟು ।
ದೊರಕಿದಲಿ ಶಯನ ವಡೆವಾತ ಲೋಕಕ್ಕೆ ।
ನಿರುತನಾಗಿಕ್ಕು ಸರ್ವಜ್ಞ ॥ ೪೦೨ ॥

ಸ್ಥಿರಚಿತ್ತಿ

ತಿರಿದಿಹರೆ ಕೂಳಕ್ಕು । ಕೆರೆದಿಹರೆ ಬೋಳಕ್ಕು ।
ಕರೆದಿಹರೆ ಆಡ್ಡ ಹೆಸರಕ್ಕು, ನಿಜವಿರಲು ।
ಸ್ಥಿರಗೊಳ್ಳಲಕ್ಕು ಸರ್ವಜ್ಞ ॥ ೪೦೩ ॥

ಸಹನಶೀಲ

ಚಂದನವ ಕರಗಿಸಲು । ಚೆಂದು ಪರಿಮಳವಕ್ಕು ।
ಸಂದರಿವನರಿದು ಸತ್ಪುರುಷರೆನಿಸಿಹರು ।
ನೊಂದು ನೈರಿವರು ಸರ್ವಜ್ಞ ॥ ೪೦೪ ॥

ಇಂದು ನಾಳಿಗೆ ಎಂದು । ತಂದು ಕೂಡಿಡಬೇಡ ।
ಬಂದುದನೆ ಉಂಡು ಸುಖಿಸುತ ಬೇನೆಯದು ।
ಬಂದಾಗ ನರಳು ಸರ್ವಜ್ಞ ॥ ೪೦೫ ॥

ಬಂದೀತು ರೋಗವೆನ । ಗೆಂದು ಅಂಜಿಕೆ ಬೇಡ ।
ಬಂದುದನು ಉಂಡು ಸುಖಿಸುತ್ತ ರೋಗ ಬಂ ।
ದಂದಿಗೆದ್ದೇಳು ಸರ್ವಜ್ಞ ॥ ೪೦೬ ॥

ಹೇಗೆ ವರ್ತಿಸಿದರೂ ಚೆಂದ

ನೆತ್ತದ ಹಾಸಂಗಿ । ಎತ್ತ ಬಿದ್ದರು ದಾಯ ।
ತತ್ವದ ನೆಲೆಯನರಿದಾತನೊಲಿದು ತಾ ।
ನತ್ತಲಿದ್ದೇನು? ಸರ್ವಜ್ಞ ॥ ೪೦೭ ॥

ಏನಾದಡೇನಯ್ಯ ತಾನಾಗದನ್ನಕ್ಕ ।
ತಾನಾಗಿ ತನ್ನನರಿದವನು ಲೋಕದಲಿ ।
ಏನಾದಡೇನು ಸರ್ವಜ್ಞ ॥ ೪೦೮ ॥

## ಆತ್ಮಜ್ಞಾನೇ ಬ್ರಹ್ಮಜ್ಞಾನ

### ಆತ್ಮಜ್ಞಾನ ಲಕ್ಷಣ

ತನ್ನ ತಾನರಿದಾತ । ತನ್ನ ಜ್ಞಾನದೊಳಡಗಿ ।
ತನ್ನ ಬಂಧುಗಳ ನೆರೆದೊರೆದು ಪರಬೊಮ್ಮ ।
ದುನ್ನತಿಯೊಳಿಹನು ಸರ್ವಜ್ಞ ॥ ೪೦೯ ॥

ತನ್ನ ತಾನರಿದಂಗೆ । ಭಿನ್ನ ಭಾವನೆಯಿಲ್ಲ ।
ತನ್ನವರು ಇಲ್ಲ, ಪರರಿಲ್ಲ, ತ್ರೈಭುವನ ।
ತನ್ನೊಳಗೆ ಇಹುದು ಸರ್ವಜ್ಞ ॥ ೪೧೦ ॥

ತನ್ನ ತಾನರಿದಿಹನು । ಸನ್ನುತನು ಆಗಿಹನು ।
ತನ್ನ ತಾನರಿಯದಿರುವವನು ಹಾಳೂರ ।
ಕುನ್ನಿಯಂತಕ್ಕು ಸರ್ವಜ್ಞ ॥ ೬೧೧ ॥

ಬಿಂದುವನು ಬಲಿದಾತ । ವಂದ್ಯನಹ ಜಗಕೆಲ್ಲ ।
ಬೆಂದ ನುಲಿದಂತೆ ಆದಾತ ಜಗದೊಳಗೆ ।
ಇಂದುಧರನಕ್ಕು ಸರ್ವಜ್ಞ ॥ ೪೧೨ ॥

### ಆತ್ಮಜ್ಞಾನೇ ಬ್ರಹ್ಮಜ್ಞಾನ

ಅರಿವಿನ ಇರವ ತಾ । ನರಿಯಲದು ಅರಿದಿಹುದು ।
ಅರಿವಿನಾ ತೆರನ ಅರಿಯುವಡೆ ತಾ ತನ್ನ ।
ಅರಿಯದದನರಿಯು ಸರ್ವಜ್ಞ ॥ ೪೧೩ ॥

ಚಿನ್ನ ತಾ ನರಿಯುವಡೆ । ಮುನ್ನ ತನ್ನರಿಯುವದು ।
ತನ್ನ ತಾನರಿವ ಪರಿಯೆಂತುಂಟೆಂದಡೆ ।
ಅನ್ಯನಿಂದರಿಗು ಸರ್ವಜ್ಞ ॥ ೪೧೪ ॥

ತನ್ನ ಮುಖ ಬೆನ್ನುಗಳು । ತನ್ನ ಕಣ್ಣಿಗೆ ಮರೆಯು ।
ತನ್ನ ಗುಣದೋಷಗಳನರಿಯೆ ಇದನರಿದ ।
ಇನ್ನೊಬ್ಬ ಬೇಕು ಸರ್ವಜ್ಞ ॥ ೪೧೫ ॥

ನಿನ್ನ ನೀನರಿಯುವರೆ | ನಿನ್ನಿಂದಲರಿಯುವದು |
ನಿನ್ನ ನೀನರಿಯದಿರುವನಕ ನಿನ್ನನೆ |
ಅನ್ಯನೆಂದರಿಗು ಸರ್ವಜ್ಞ || ೪೧೬ ||

ನೀರ ಬೊಬ್ಬುಳಿಯಂತೆ | ತೋರುತಿಹ ದೇಹದ |
ಸಾರವರಿಯದಲೆ ಸುಖಿವುದಜ್ಞಾನದ |
ದಾರಿಯುಹುದೆಂದ ಸರ್ವಜ್ಞ || ೪೧೭ ||

### ಅರಿವಿನ ಅರಿವು

ತನ್ನ ತಾನರಿಯದದು | ತನ್ನಿದಿರನರಿದಿಹುದು |
ತನ್ನನರಿಯದಗೆ ಬೋಧಿವುದು, ಬುದ್ಧಿಯದು |
ಬಿನ್ನಾಣವಲ್ಲ ಸರ್ವಜ್ಞ || ೪೧೮ ||

ತನ್ನಲಿಹ ಅರಿವಿಂದ | ಸನ್ನುತನು ತಾನಾಗಿ |
ತನ್ನ ನಿಜದಲ್ಲಿ ನಿಂದವಗೆ ಲೋಕದ |
ಉನ್ನತಿಯದೇಕೆ? ಸರ್ವಜ್ಞ || ೪೧೯ ||

ಅಟ್ಟಡಿಗೆಯ ರುಚಿಯ | ಸಟ್ಟುಗವು ಬಲ್ಲುದೇ? |
ಶ್ರೇಷ್ಠರುಗಳೆಂದು ಎನಬೇಡ, ಅರುಹಿನ |
ಬಟ್ಟೆ ಬೇರೆಂದ ಸರ್ವಜ್ಞ || ೪೨೦ ||

ಕುರಿ ಕಬ್ಬಿನೊಳು ಹೊಕ್ಕು | ಅರಿವುದೆ ತನಿರಸವ? |
ಹೊರಗಣ ಸೋಗೆಯುಗಿವಂತೆ ಜ್ಞಾನದ |
ಕುರುಹು ಬೇರೆಂದ ಸರ್ವಜ್ಞ || ೪೨೧ ||

ಅರಿನ ಅರಿವಿಂಗೆ | ಅರಿದಾದ ಕುರುಹುಂಟು |
ಅರವಟಿಗೆ ನೀರ ತಾ ಕೊಳದೆ ಲೋಕಕ್ಕೆ |
ಎರೆಯುತಿಪ್ಪಂತೆ ಸರ್ವಜ್ಞ || ೪೨೨ ||

ಹೇಳಬಲ್ಲಡೆ ಬೋಳು | ಕೇಳ ಬಲ್ಲಡೆ ಬೋಳು |
ಹೇಳಲು ಕೇಳಲರಿಯದಿರಲಾ ಬೋಳು |
ಕಾಳು ಬೋಳೆಂದ ಸರ್ವಜ್ಞ || ೪೨೩ ||

ತನ್ನ ತಾನರಿಯುವುದು । ತನ್ನ ಬಿಟ್ಟಿರುತಿಹುದು ।
ತನ್ನನೊಲ್ಲದರ ತೊರೆದಿಹುದು, ಜ್ಞಾನ ತಾ ।
ಬಿನ್ನಾಣವಲ್ಲ ಸರ್ವಜ್ಞ ॥ ೪೨೪ ॥

ಜ್ಞಾನ್ಯಜ್ಞಾನಿಗಳ ಭೇದ

ಜ್ಞಾನಿಗಜ್ಞಾನಿಗಂ । ತಾನೊಂದು ಕುರುಹುಂಟು ।
ಏನೊಂದನಾತ ನುಡಿದಿಹರೆ ಜ್ಞಾನಿ ತಾ ।
ಮೌನವಾಗಿಹನು ಸರ್ವಜ್ಞ ॥ ೪೨೫ ॥

ಕೋಡಗನು ತಾನೊಂದ । ನೇಡಿಸುವದದು ಸಹಜ ।
ಮೂಢಾತ್ಮನಾತು ನುಡಿದಿಹರೆ ಜ್ಞಾನಿ ತಾ ।
ನಾಡಿ ಮಾಡಿಹನು ಸರ್ವಜ್ಞ ॥ ೪೨೬ ॥

ಜ್ಞಾನವುಳ್ಳವನೊಡಲು । ಭಾನುಮಂಡಲದಂತೆ ।
ಜ್ಞಾನವಿಲ್ಲದನ ಬರಿಯೊಡಲು ಹಾಳೂರ ।
ಸ್ವಾನದಂತಿಕ್ಕು ಸರ್ವಜ್ಞ ॥ ೪೨೭ ॥

ಜ್ಞಾನ್ಯಜ್ಞಾನಿಗಳ ಸಂಗ

ಒಂದೊಂದು ಹನಿ ಬಿದ್ದು । ನಿಂದಲ್ಲಿ ಮಡುವಕ್ಕು ।
ಸಂದ ಸತ್ಪುರುಷರೊಡನಾಡೆ ಪರಬೊಮ್ಮ ।
ಮುಂದೆ ಬಂದಕ್ಕು ಸರ್ವಜ್ಞ ॥ ೪೨೮ ॥

ಕೋಟಿಯನು ಕೊಟ್ಟರೂ । ಕೂಟ ಕರ್ಮಿಯ ಹೊಲ್ಲ ।
ನೋಟದಲಿ ನಿಜವನರಿವ ಸುಜ್ಞಾನಿಯ ।
ಕೂಟವೇ ಲೇಸು ಸರ್ವಜ್ಞ ॥ ೪೨೯ ॥

ಬಂಧನವ ಮಾಡಿದರು । ಸಂದ ಜ್ಞಾನಿಯೆ ಲೇಸು ।
ಹೊಂದಿ ಸಾಸಿರವ ಕೊಟ್ಟರೂ ಕರ್ಮಿಯ ।
ದಂದುಗವೆ ಬೇಡ ಸರ್ವಜ್ಞ ॥ ೪೩೦ ॥

## ಮಿಥ್ಯಾ ಜ್ಞಾನಿ

ಮಾತಿನಾ ಬೊಮ್ಮವೂ । ತೂತಾದ ಮಡಿಕೆಯೂ ।
ಪಾತಕನ ನೆರೆಯು, ಇವು ಮೂರು ಲೋಕದೊಳ ।
ಗೇತಕ್ಕು ಬೇಡ ಸರ್ವಜ್ಞ ॥ ೪೩೧ ॥

ಗುರಿಯು ತಾಗದ ಬಾಣ । ನೂರಾರನೆನೆದೇನು? ।
ಬರಿ ಮಾತನಾಡಿ ಫಲವೇನು? ನಿಜಗುಣದ ।
ಅರಿವಿಲ್ಲದಿರಲು! ಸರ್ವಜ್ಞ ॥ ೪೩೨ ॥

ಕರ್ಮಿಗೆ ತತ್ವದ । ಮರ್ಮ ದೊರಕೊಂಬುದೆ? ।
ಚರ್ಮವನು ತಿಂಬ ಶುನಕಂಗೆ ಪಾಯಸದ ।
ಕೂರ್ಮೆಯೇಕಯ್ಯ ಸರ್ವಜ್ಞ ॥ ೪೩೩ ॥

ಬೊಮ್ಮವನು ಅರಿದಿದರೆ । ಬಿಮ್ಮಗಿದ್ದಿರಬೇಕು ।
ಸುಮ್ಮನೆ ಬೊಮ್ಮವ ಬೊಗಳಲು ಬರಡಾದ ।
ಎಮ್ಮೆ ಕರೆದಂತೆ ಸರ್ವಜ್ಞ ॥ ೪೩೪ ॥

ಬೊಮ್ಮವರಿದಿಹೆನೆಂದು । ಕರ್ಮವನು ಬಿಟ್ಟಿಹರೆ ।
ಹೆಮ್ಮೆಯಲಿ ಹೆರನ ಹೊಡೆಯಲ್ಕೆ ಹಿಡಿದವನು ।
ಗುಮ್ಮಿಕೊಂಡಂತೆ ಸರ್ವಜ್ಞ ॥ ೪೩೫ ॥

ನೆಟ್ಟನೇ ಅರಿದಿಹರೆ । ಬಿಟ್ಟ ಕೈ ಕೂಸಕ್ಕು ।
ಬಿಟ್ಟವರ ಕಂಡು ಬಿಟ್ಟಿಹರೆ ಎರಡರಿಂ ।
ಕೆಟ್ಟನೆಂದರಿಗು ಸರ್ವಜ್ಞ ॥ ೪೩೬ ॥

ಪ್ರಾಣಜಂಗಮನೆಂದು । ಕೋಣೆಯೊಳು ತಾನುಂಬ ।
ಜಾಣನ ಭಕ್ತಿ ತನಗೆಂಬ ಮರುಳನ ।
ಕೇಣವನು ನೋಡ ಸರ್ವಜ್ಞ ॥ ೪೩೭ ॥

ಉಡಿಗೆಯನು ಉಡಬಹುದು । ಜಡೆಯ ಕಟ್ಟಲು ಬಹುದು ।
ಬಿಡದೆ ವಿರಕ್ತಿಯಿರಬಹುದು ಬೊಮ್ಮವನು ।
ಹಿಡಿಯಲಳವಲ್ಲ ಸರ್ವಜ್ಞ ॥ ೪೩೮ ॥

ವೇದಶಾಸ್ತ್ರಾಗಮವ। ನೋದಿದಡೆ ಫಲವೇನು।
ವೇಧಿಸುವ ಚಿತ್ತ ಸಮರಸವಿಲ್ಲದಡೆ।
ಬೂದಿಯಲಿ ಹೋಮ ಸರ್ವಜ್ಞ ॥ ೪೩೯ ॥

ಕೋಟಿ ಗೀತವನೋದಿ। ಪಾರಯಿಸಿ ಫಲವೇನು।
ಕೂಟಸ್ಥನಲ್ಲದವನೋದು ಗಿಳಿ ಕಲಿತ।
ಪಾರದಂತಕ್ಕು ಸರ್ವಜ್ಞ ॥ ೪೪೦ ॥

ಪರ್ವತವನೇರಿದೊಡೆ। ಗರ್ವ ತನಗೇಕಯ್ಯ?।
ಸರ್ವಾಂತರ್ಯಾಮಿ ಶಿವನಿರಲು, ತನ್ನೊಳಗೆ।
ಪರ್ಮವಿಹುದೇಕೆ? ಸರ್ವಜ್ಞ ॥ ೪೪೧ ॥

ಪರ್ವತಕೆ ಹೋದವಗೆ। ಗರುವತನವೇಕಯ್ಯ?।
ಒರ್ವನೆ ಶಿವನು ತನ್ನೊಳಿರೆ ತಾ ಹೋದ।
ಕಾರಣವದೇನು? ಸರ್ವಜ್ಞ ॥ ೪೪೨ ॥

ಆನೆಗಂಜಿಕೆಯೇಕೆ। ಶ್ವಾನಂಗೆ ಸಭೆಯೇಕೆ?।
ದಾನಿಗೆ ದೀನತನವೇಕೆ? ಜ್ಞಾನಿಗೆ।
ಹೀನತನವೇಕೆ? ಸರ್ವಜ್ಞ ॥ ೪೪೩ ॥

ನಾಲುವೇದಗಳೇಕೆ। ಮೂಲಮಂತ್ರಗಳೇಕೆ।
ಮೇಲು ಕೀಳೆಂಬ ನುಡಿಯೇಕೆ ತತ್ವದ।
ಕೀಲನರಿದವಗೆ? ಸರ್ವಜ್ಞ ॥ ೪೪೪ ॥

ಬಿಂದುನಾದಗಳೆಂಬ। ನಂದನದ ವನವುಂಟು।
ಇಂದುಧರನೆಂಬ ಕೊಳನುಂಟು, ತಿಳಿನೀರ।
ಮಿಂದುಂಬರಿಲ್ಲ ಸರ್ವಜ್ಞ ॥ ೪೪೫ ॥

ಹೇಳಲುಂ ಕೇಳಲುಂ। ಬಾಳಲೋಚನಗಳವೆ।
ತಾಳದಂಡಿಗೆಯು ಹೊರತಾದ ಹೇಳಿಕೆಯ।
ಕೇಳುವವನೆಗ್ಗ ಸರ್ವಜ್ಞ ॥ ೪೪೬ ॥

ಒಮ್ಮನದಿ ಬಿತ್ತಕ್ಕು । ಇಮ್ಮನದಿ ಜಳ್ಳಕ್ಕು ।
ಒಮ್ಮನದಿ ಮೋಕ್ಷಪದವಕ್ಕು, ಜ್ಞಾನಿ ತಾ ।
ನಿಮ್ಮನದಿ ಕೆಡುವ ಸರ್ವಜ್ಞ ॥ ೪೪೭ ॥

ತತ್ವಮಸಿ ಎಂಬುದರ । ಅರ್ಥವನು ಅರಿಯದಲೆ ।
ತುತ್ತು ಸವಿ ಎಂದು ಉಣಗಲಿತ ಶಿವಯೋಗಿ ।
ಗೆತ್ತಣದು ಮುಕ್ತಿ ? ಸರ್ವಜ್ಞ ॥ ೪೪೮ ॥

ತೂರ ತುದಿಗೊಂಬೆಯನು । ಏರಿಪ್ಪ ಶಿವಯೋಗಿ ।
ಬೇರೊಂದ ಬಯಸಿ ಹರಿದರೆ ಬೆಳಗಾಗಿ ।
ಸೂರೆ ಹೋದಂತೆ ಸರ್ವಜ್ಞ ॥ ೪೪೯ ॥

ಅರಿವೆಂಬುದಾತ್ಮಂಗೆ । ನೆರೆನಿಜದ ಕಾಣಿಕೆಯು ।
ಅರಿದಾತನರಿವ ಮರೆದಡೆ ನಯನವ ।
ನಿರಿದುಕೊಂಡಂತೆ ಸರ್ವಜ್ಞ ॥ ೪೫೦ ॥

ಅರಿವೆಂಬ ಪರತತ್ವ । ಪರಕೊಂದು ಸಾಧನವು ।
ಅರಿದರಿವ ಮರೆದಡೆ ಕಳನೇರಿ ಕೆಯ್ಯ ತಾ ।
ಮರೆದಂತೆ ಅಕ್ಕು ಸರ್ವಜ್ಞ ॥ ೪೫೧ ॥

ಎಲ್ಲವನು ಅರಿದಿಹರೆ । ಬಲ್ಲೆನೆಂದೆನಬೇಕು ।
ಅಲ್ಲಲ್ಲಿಗೊಂದನರಿದುಲಿಯೆ ಬಲುಮೆಗೆ ।
ಕಲ್ಲು ಹೊತ್ತಂತೆ ಸರ್ವಜ್ಞ ॥ ೪೫೨ ॥

ಅದ್ವಯಿತಕೋಡಾಡಿ । ಇದ್ದುದನು ಹೋಗಾಡಿ ।
ಉದ್ದನ ಮರನ ತುದಿಗೇರಿ ತಲೆಯೂರಿ ।
ಬಿದ್ದು ಸತ್ತಂತೆ ಸರ್ವಜ್ಞ ॥ ೪೫೩ ॥

ಕಂಬಳಿಯ ಹೊದೆವ ತಂ । ನಿಂಬಿನೊಳಗಿರಬೇಕು ।
ಕಂಬಳಿಯು ಬೆನ್ನ ಬಿಡದಿರಲು ನರಕದ ।
ಕುಂಭದೊಳಗಿಹನು ಸರ್ವಜ್ಞ ॥ ೪೫೪ ॥

## ಬಂಧಮೋಕ್ಷ ವಿವೇಕ

### ಭಕ್ತಿಹೀನತ್ವದಿಂದ ಬಂಧನ

ಅಡವಿಯೊಳು ಮೌನದಲಿ । ದೃಢತಪದೊಳಿರ್ದು ಶಿವ ।
ನಡಿಯ ಪಡೆಯದಲೆ ಮಡಿದಿಹರೆ ಭವಬೆನ್ನು ।
ಬಿಡದೆ ಬಂದಿಹುದು ಸರ್ವಜ್ಞ ॥ ೪೫೫ ॥

ತನುವೆಂಬ ತನಿಯೆಣ್ಣೆ । ನೆನಹೆಂಬ ತಿಳಿದುಪ್ಪ ।
ಘನಜ್ಞಾನ ಜ್ಯೋತಿಯುರಿಯಲಜ್ಞಾನದ ।
ನೆನಹದೆತ್ತಣದು ? ಸರ್ವಜ್ಞ ॥ ೪೫೬ ॥

### ಜ್ಞಾನದಿಂದ ಅಜ್ಞಾನ ನಾಶ

ಧ್ಯಾನದ ಹೊಸಬತ್ತಿ । ಮೌನದ ತಿಳಿದುಪ್ಪ ।
ಸ್ವಾನುಭವವೆಂಬ ಬೆಳಗಿನ ಜ್ಯೋತಿಯು ।
ಜ್ಞಾನವನು ಸುಡುಗು ಸರ್ವಜ್ಞ ॥ ೪೫೭ ॥

ಗೊಬ್ಬರದೊಳಿಹ ಕಿಡಿಯು । ಒಬ್ಬರರಿಯದೆ ಹೊತ್ತಿ ।
ಗೊಬ್ಬರವು ಬೂದಿಯಪ್ಪಂದ ಜ್ಞಾನದಿಂ ।
ಮೊಬ್ಬೆಲ್ಲ ಕೆಡುಗು ಸರ್ವಜ್ಞ ॥ ೪೫೮ ॥

ಅರಿವ ಬೆರೆಯಿತು ಪ್ರಾಣ । ಕುರುಹು ದೊರೆಯಿತು ಜಾಣ ।
ಹೆರುವಾಗಿ ಹೋಯ್ತು ಭವಮಾಲೆ, ಮುಕ್ತಿಯು ।
ಇರವು ನಿರ್ಭಯವು ಸರ್ವಜ್ಞ ॥ ೪೫೯

ಆತ್ಮಗಂಗೆಯ ಮಿಂದು । ಜೋತಿಲಿಂಗವನರಿಯೆ ।
ಪಾತಕವು ಕೋಟಿ ಸರಿಯಲ್ಕೆ ಪರಿಶುದ್ಧ ।
ಆತುಮನೆ ಅಕ್ಕು ಸರ್ವಜ್ಞ ॥ ೪೬೦ ॥

ಅಕ್ಕರವು ಲೇಖಕ್ಕೆ । ತರ್ಕ ತಾ ವಾದಕ್ಕೆ ।
ಮಿಕ್ಕ ಓದುಗಳು ತಿರುಪೆಗೆ, ಮೋಕ್ಷಕೆರ ।
ಡಕ್ಕರವೆ ಸಾಕು ಸರ್ವಜ್ಞ ॥ ೪೬೧ ॥

ಮಾನವದು ಮನುಜಂಗೆ। ಮೌನ ಶಿವಯೋಗಿಗೆ।
ಜ್ಞಾನವದು ಬೇಕು ಹಿರಿಯರಿಗೆ, ಮೋಕ್ಷಕ್ಕೆ।
ಧ್ಯಾನವೆ ಬೇಕು ಸರ್ವಜ್ಞ ॥ ೪೬೨ ॥

ಪ್ರಬೋಧ

ಎಣ್ಣೆಬೆಣ್ಣೆಯ ರಿಣವು। ಅನ್ನವಸ್ತ್ರದ ರಿಣವು।
ಹೊನ್ನುಹಣ್ಣಿನ ರಿಣ ತೀರಿದಾಕ್ಷಣದಿ।
ಮಣ್ಣುಪಾಲೆಂದ ಸರ್ವಜ್ಞ ॥ ೪೬೩ ॥

ಸತ್ತುಹೋದರೆ ನಿನಗ। ದೆತ್ತಣದು ಮೋಕ್ಷವೈ।
ಸತ್ತುಹೋಗದತಿ ಜೀವಿರಲು ಮೋಕ್ಷದ।
ಗೊತ್ತು ತಿಳಿಯೆಂದ ಸರ್ವಜ್ಞ ॥ ೪೬೪ ॥

## ೯. ಯೋಗ ಪದ್ಧತಿ

### ಯೋಗಮಹತ್ವ

ಕತ್ತಲೆಯ ರಾವಿಂಗೆ। ಉತ್ತಮವು ಜ್ಯೋತಿ ತಾ।
ಮತ್ತೆ ಪ್ರಜ್ವಲಿಸುವಾ ರಾವು ಬೆಳಗಲ।
ತ್ಯುತ್ತಮವದಕ್ಕು ಸರ್ವಜ್ಞ ॥ ೪೬೫ ॥

ಯೋನಿಜರು ಯೋಗಿಯನು। ಹೀನವೆನ್ನುವದೇನು ?।
ಆನಂದ ತಾಣದೊಳಗಿರಲು ಯೋಗಿಯ।
ಮಾನ ಘನವಹುದು! ಸರ್ವಜ್ಞ ॥ ೪೬೬ ॥

ನಿಜ ವಿಜಯ ಬಿಂದುವಿನ। ಧ್ವಜ ಪತಾಕೆಯ ಬಿರುದ।
ಅಜ ಹರಿಯು ನುತಿಸಲರಿಯದಾಮಂತ್ರವನು।
ನಿಜಯೋಗಿ ಬಲ್ಲ ಸರ್ವಜ್ಞ ॥ ೪೬೭ ॥

### ಯೋಗನಿರೂಪಣೆ

ಯೋಗವನು ಮನಮುಟ್ಟಿ। ಭೋಗವನು ತೊರೆದಿಹರೆ।
ಮಾಗಿಯ ಮಳೆಯು ಸುರಿದಂತೆ ಆ ಯೋಗ।
ಸಾಗುತ್ತಲಿಹುದು ಸರ್ವಜ್ಞ ॥ ೪೬೮ ॥

ದಾಸಿಯು ಕೊಡದಂತೆ । ಸೂಸದಿಪ್ಪುದೆ ಯೋಗ ।
ದಾಸಿ ಸಾಸಿರದ ನುಡಿ ಹಾಡುತಾಕೊಡನೊ ।
ಘಾಸಿ ಇಪ್ಪಂತೆ ಸರ್ವಜ್ಞ ॥ ೪೬೯ ॥

ಲೇಸಪ್ಪುದದು ಯೋಗ । ದಾಸಿಯು ಕೊಡದಂತೆ ।
ದಾಸಿ ಪರಪುರುಷನಾಶಿಸಿ ನೋಡಲದು ।
ಬೀಸಿ ಬಿದ್ದಂತೆ ಸರ್ವಜ್ಞ ॥ ೪೭೦ ॥

ಯೋಗವಿದ್ಯೆ

ಅಷ್ಟದಳ ಕಮಲದಲಿ । ಕಟ್ಟಿ ತಿರುಗುವ ಹಂಸ ।
ಮೆಟ್ಟುವ ದಳದ ನಡುವಿನಲಿ ಇರುವದನು ।
ಮುಟ್ಟುವನೆ ಯೋಗಿ ಸರ್ವಜ್ಞ ॥ ೪೭೧ ॥

ಅಷ್ಟದಳ ಕಮಲವನು । ಮೆಟ್ಟಿಪ್ಪ ಹಂಸ ತಾ ।
ಮುಟ್ಟಿಪ್ಪ ಗತಿಯನರಿಯದ ಯೋಗಿಯು ।
ಕೆಟ್ಟನೆಂದರಿಗು ಸರ್ವಜ್ಞ ॥ ೪೭೨ ॥

ಕಟ್ಟಿ ಜಾಡನ ಉಂಕೆ । ಮುಟ್ಟುವದು ಮೂರೂರ ।
ಬಟ್ಟೆಯು ನಾಲ್ಕು, ಪದ ಮೂರು, ಅವನೂರು ।
ಬೆಟ್ಟದ ಮೇಲೆ ಸರ್ವಜ್ಞ ॥ ೪೭೩ ॥

ಕುಂಡಲಿಯ ಭೇದದ । ಕಂದನಾಡಿಯ ನಡುವೆ ।
ಮಂಡಿಸುತಿರ್ಪ ಹಂಸನ ಹತ್ತಿರವೆ ।
ಕಂಡಿಹುದು ಸುಳುವು ಸರ್ವಜ್ಞ ॥ ೪೭೪ ॥

ಬೆರಳು ನಾಲ್ಕರ ನಡುವೆ । ವಿರಳವಾಡುವ ಹಂಸ ।
ಕೊರಳ ನಾಳದಲಿ ಕಾಣುವದೆ ಯೋಗದ ।
ತಿರುಳು ನೋಡೆಂದ ಪರಮಾರ್ಥ ಸರ್ವಜ್ಞ ॥ ೪೭೫ ॥

ತನ್ನ ನಾಭಿಯ ಒಳಗೆ । ವಹ್ನಿ ಮಂಡಲವುಂಟು ।
ವಹ್ನಿ ಮಂಡಲದ ಒಳಗಣ ನಾಡಿಯಲಿ ।
ತನ್ನ ಕಾಣೆಂದ! ಸರ್ವಜ್ಞ ॥ ೪೭೬ ॥

ನಾದದ ಬಳಿವಿಡಿದು । ಅಯ್ದುಸುವ ಪರಮನ ।
ಹಾದಿಯನು ಅರಿದು ಸುಖಿಯಾಗು ಜನುಮದ ।
ಹಾದಿಗೊಳಬೇಡ ಸರ್ವಜ್ಞ ॥ ೪೭೭ ॥

## ಯೋಗ್ಯ ಯೋಗಿಯ ಲಕ್ಷಣ

### ಪಾಪರಹಿತನು

ಕೋಪಕ್ಕೆ ಯಮರಾಜ । ಪಾಪಕ್ಕೆ ಜವರಾಜ ।
ಕೋಪ ಪಾಪಗಳ ಅಳಿದಂಗೆ ಯಮನು ತಾ ।
ಕೊಪನಾಗಿಹನು ಸರ್ವಜ್ಞ ॥ ೪೭೮ ॥

### ಸಮಸುಖಶಾಂತಿ

ಕೋಪವೆಂಬುದು ತಾನು । ಪಾಪದ ನೆಲಗಟ್ಟು ।
ಆಪತ್ತು ಸುಖವು ಸರಿಯೆಂದು ಪೋಪಗೆ ।
ಪಾಪವೆಲ್ಲಿಹುದು ಸರ್ವಜ್ಞ ॥ ೪೭೯ ॥

### ಕ್ರೋಧ ಭೇದಗಳನ್ನಳಿದವನು

ಕ್ರೋಧದಿಂದಲೆ ಯೋಗಿ । ಬಾಧೆಗೊಳಗಾಗಿಹನು ।
ಸಾಧಿಸುತ ವ್ರತವ ಪಿಡಿದಿಹರೆ ನಿಜವರಿದು ।
ಭೇದ ಗುಣವಳಿವ ಸರ್ವಜ್ಞ ॥ ೪೮೦ ॥

### ಕುಲವಿಲ್ಲದವನು

ಮೊಲೆಯಿಲ್ಲದಾ ಆವು । ತಲೆಯಲ್ಲಿ ಕರೆದಿಹುದು ।
ಸಲೆನೆಲೆಯನರಿದು ಕರೆದುಂಬ ಯೋಗಿಯು ।
ಕುಲನಾಶವೆಂದ ಸರ್ವಜ್ಞ ॥ ೪೮೧ ॥

### ಕುಲಹೊಲೆಯಿಲ್ಲದವನು

ಹೊಲೆಯಿಲ್ಲ ಅರಿದಂಗೆ । ಒಲವಿಲ್ಲ ಒಡವಂಗೆ ।
ಕೊಲೆ ಕಂಬವಿಲ್ಲ ಗಗನಕ್ಕೆ, ಯೋಗಿಗೆ ।
ಕುಲವೆಂಬುದಿಲ್ಲ ಸರ್ವಜ್ಞ ॥ ೪೮೨ ॥

ಮುಟ್ಟಿನ ಹೊಲೆಯೊಳಗೆ । ಹುಟ್ಟಿಹನು ಶಿವಯೋಗಿ ।
ಮುಟ್ಟಿದದು ಮಲಿನ ವಾರಿಯನು, ಆ ಹೊಲೆಯ ।
ಸುಟ್ಟೊರಸಿ ಕಳೆದ ಸರ್ವಜ್ಞ ॥ ೪೮೩ ॥

ಆಶಾರಹಿತ

ಆನೆಯ ಬಾವುಗನ । ರೋಷದುರಗನ ಕಳೆದು ।
ಮಾಸಿದುದ ಮಡಿಯ ಮಾಡಿದ ಶಿವಯೋಗಿ ।
ಶಾಶ್ವತನಕ್ಕು ಸರ್ವಜ್ಞ ॥ ೪೮೪ ॥

ಹಂಜರದೊಳು ತೇಜಃ । ಪುಂಜ ರಂಜಿಸುತಿರಲು ।
ಅಂಜನ ಸಿದ್ಧ ಶಿವಯೋಗಿ ತಾ ಕುಟಿಲ ।
ಮಂಜರೆಯ ಕಾದ ಸರ್ವಜ್ಞ ॥ ೪೮೫ ॥

ರಾಗವಿದ್ದರೆ ಭೋಗ । ಭೋಗವಿದ್ದರೆ ರಾಗ ।
ರಾಗದಿ ಸಕಲ ಸಂಪದವು, ಜಗದಿ ವಿ ।
ರಾಗವೇ ಯೋಗ ಸರ್ವಜ್ಞ ॥ ೪೮೬ ॥

ಅಹಂಕಾರ ಬಿಟ್ಟವನು

ಹಮ್ಮು ಎಂಬುವ ಕಿಚ್ಚು । ಒಮ್ಮೆಲೇ ನಂದುವದೆ? ।
ಬೊಮ್ಮ ಹರಿ ಬೆಂದು ಜಗ ಬೆಂದುದಾಕಿಚ್ಚ ।
ಗುಮ್ಮಿಹನೆ ಯೋಗಿ ಸರ್ವಜ್ಞ ॥ ೪೮೭ ॥

ರಾಗದ್ವೇಷಗಳಿಲ್ಲದವನು

ಆಗು ಹೋಗುಗಳಿಲ್ಲ । ಮೇಗು ಕೀಳುಗಳಿಲ್ಲ ।
ಭೋಗಗಳು ಅಲ್ಲಿ ಮೊದಲಿಲ್ಲ, ಯೋಗಿಗೆ ।
ರಾಗವೇ ಇಲ್ಲ ಸರ್ವಜ್ಞ ॥ ೪೮೮ ॥

ಕಿಚ್ಚಿಂಗೆ ತಣಿವಿಲ್ಲ । ಮೊಚ್ಚೆಗೆ ಹೊಲೆಯಿಲ್ಲ ।
ಚುಚ್ಚಿ ಕೊಡುವಂಗೆ ಗತಿಯಿಲ್ಲ, ಯೋಗಿಗೆ ।
ಇಚ್ಛೆಗಳಿಲ್ಲ ಸರ್ವಜ್ಞ ॥ ೪೮೯ ॥

ಹಸಿವು ಕೊಂದವನು

ಹಸಿವು ಕೊಂದಾಯೋಗಿ । ವಸುಧೆಗೀಶ್ವರನಕ್ಕು ।
ಪಶುಪತಿಯುಕ್ಕು ಕೈಲಾಸವಾತಂಗೆ ।
ವಶವರ್ತ್ತಿಯಕ್ಕು ಸರ್ವಜ್ಞ ॥ ೪೯೦ ॥

ಕೊಲೆ, ಸುಳ್ಳು, ಕಳ್ಳತನ, ಕಾಮ ಬಿಟ್ಟವನು

ಹಸಿವ ಕೊಂದಾತಂಗೆ । ಪಶುವಧೆಯ ಮಾಡದಗೆ ।
ಹುಸಿ, ಕರ್ಮ, ಕಾಮುವಳಿದಂಗೆ ಇಹಪರದಿ ।
ಶಶಿಧರನೊಲಿವ ಸರ್ವಜ್ಞ ॥ ೪೯೧ ॥

ಸ್ತುತಿ ನಿಂದೆಗಳನ್ನಳಿದವನು

ಯತಿಗೇಕೆ ಕೋಪ? ದು । ರ್ಮತಿಗೇಕೆ ಪರತತ್ವ? ।
ಪತಿವ್ರತೆಗೇಕೆ ಪರನೋಟ? ಯೋಗಿಗೆ ।
ಸ್ತುತಿನಿಂದೆಯೇಕೆ? ಸರ್ವಜ್ಞ ॥ ೪೯೨ ॥

ವೇದ ಹ್ಯಾಸಯುಜ್ಞ

ವೇದವೇ ಮೊಲೆ ನಾಲ್ಕು । ನಾದವೇ ನೊರೆವಾಲು ।
ನಾಧಿಸಿ ಉಂಬ ಶಿವಯೋಗಿಗಲ್ಲದೆ ।
ವಾದಿಗಳಿಗುಂಟೆ? ಸರ್ವಜ್ಞ ॥ ೪೯೩ ॥

ಜಿತೇಂದ್ರಿಯನು

ಓದಿ ಬೂದಿಯ ಪೂಸಿ । ತೇದು ಕಾವಿಯ ಹೊದೆದು ।
ಹೋದಾದ ಯೋಗಿಯೆನಬೇಡ, ಇಂದ್ರಿಯವ ।
ಕಾದಾತ ಯೋಗಿ ಸರ್ವಜ್ಞ ॥ ೪೯೪ ॥

ಅಂಬರದೊಳಾ ಬಾವಿ । ತುಂಬಿ ತುಳುಕುತಲಿಹುದು ।
ಉಂಬುವರೆ ದಾರಿ ಸರಲವಿಂದ್ರಿಯವರಿದು ।
ಉಂಬುವನೆ ಯೋಗಿ ಸರ್ವಜ್ಞ ॥ ೪೯೫ ॥

ಮೂರನ್ನು ಆರನ್ನು । ಬೇರಿರ್ದ್ದ ಏಳನ್ನು ।
ತೋರಿರ್ದ್ದ ಎಂಟ ಹರಿದಡೆ ಶಿವಲೋಕ ।
ಸೂರೆ ಕಾಣಯ್ಯ ಸರ್ವಜ್ಞ ॥ ೪೯೬ ॥

ಮಾಳಿಗೆಯ ಮನೆಯಾಗಿ । ಮೇಳದ ಸತಿಯಾಗಿ ।
ಹೋಳಿಗೆ ತುಪ್ಪ ಉಣಲಾಗಿ ಇಂದ್ರಿಯವ ।
ತಾಳಿದವ ಯೋಗಿ ಸರ್ವಜ್ಞ ॥ ೪೯೭ ॥

ಸಮತೆಯುಳ್ಳವನು

ಒಡಲು ತಾನಳಿವಲ್ಲಿ । ಮಡದಿಯರು ಮಡಿವಲ್ಲಿ ।
ತಡೆಯೆಡರು ನಿಂದೆ ಬರುವಲ್ಲಿ ಸಮತೆಯನು ।
ಬಿಡದಿಹನೆ ಯೋಗಿ ಸರ್ವಜ್ಞ ॥ ೪೯೮ ॥

ಬ್ರಹ್ಮಾನುಭಾವಿ

ವೇದ ಕರ್ಪ್ಪುರ ಬೂದಿ । ಓದೊಂದು ಲೇಪನವು ।
ವಾದ ವಿವಾದದಿರಬೇಡ ಪರಮನನು ।
ಸ್ವಾದಿಪನೆ ಯೋಗಿ ಸರ್ವಜ್ಞ ॥ ೪೯೯ ॥

ಅಂಬುಜದ ನವರಸವ । ನಿಂಬಿನಲಿ ತಾನರಿದು ।
ನಂಬುಗೆಯ ಕೂಡಿ ಶಂಭುವನು ನೆರೆ ಸವಿದು ।
ಉಂಬುವನೆ ಯೋಗಿ ಸರ್ವಜ್ಞ ॥ ೫೦೦ ॥

ಆತುಮದ ನೆಲೆಯನ್ನು । ಚೇತನದ ಬೊಮ್ಮವನು ।
ಜ್ಯೋತಿಯಿದ್ದೆಡೆಯ ನೀತಿಯಲಿ ನೆರ ಬಲ್ಲ ।
ಡಾತನೇ ಯೋಗಿ ಸರ್ವಜ್ಞ ॥ ೫೦೧ ॥

ಇಪ್ಪತ್ತು ಐದುಗಳ । ತಪ್ಪದಲೆ ತಿಳಿದು ತಾ ।
ಬಪ್ಪ ಕರ್ಮಗಳ ಬದಿಗೊತ್ತಿ ಬೊಮ್ಮನೊಳ ।
ಗಿಪ್ಪವನೆ ಯೋಗಿ ಸರ್ವಜ್ಞ ॥ ೫೦೨ ॥

ಆತುಮದ ಬಣ್ಣವನು । ಮಾತಿನೊಳಗರಿವನ್ನು ।
ಆತುಕೊಂಡರಿತು ಜ್ಯೋತಿಯೊಳು ನೆರೆಬೆರೆದ ।
ಡಾತನೇ ಯೋಗಿ ಸರ್ವಜ್ಞ ॥ ೫೦೩ ॥

ಹೊಂದಿದಂದಿಗೆ ಕೋಟಿ । ಸಂದಿತೆಂದೆನಬೇಕು ।
ಕೊಂದು ಷಡ್ರಿಪುವ ತಾನುಂಡು ನೆರೆನಿಜದಿ ।
ನಿಂದಾತ ಯೋಗಿ ಸರ್ವಜ್ಞ ॥ ೫೦೪ ॥

ಕಾಶಿಯು ನುಡಿ ಬೇಡ । ಕ್ಲೇಶದಲಿ ಕೆಡಬೇಡ ।
ಸಾಸಿರದ ಜಡೆಯು ಹೊರಬೇಡ, ಸಮತೆಯ ।
ಭ್ಯಾಸದೊಳಗಿರಲು ಸರ್ವಜ್ಞ ॥ ೫೯ ॥

ಒಡಲೆಂಬ ಹುತ್ತಕ್ಕೆ । ನುಡಿವ ನಾಲಿಗೆ ಸರ್ಪ ।
ಕಡುರೋಷವೆಂಬ ವಿಷವೇರೆ ಸಮತೆ ಗಾ ।
ರುಡಿಗನಂತಕ್ಕು ಸರ್ವಜ್ಞ ॥ ೫೧೪ ॥

## ೧೦. ಶಿವಯೋಗ ಪದ್ಧತಿ

### ಶಿವಯೋಗಿಯ ಲಕ್ಷಣ

ಕುಂಡಲಿಯು ಕಂಡಾತ । ಹೆಂಡತಿಗೆ ಒಲಿಯುವನೆ ? ।
ಕಂಡಿತದೊಳಿಪ್ಪ ಶಿವಯೋಗಿ ಮಾಂಸದ ।
ಪಿಂಡಕೊಲಿಯುವನೆ ? ಸರ್ವಜ್ಞ ॥ ೫೧೫ ॥

ಕುಂಡಲಿಯನರಿದಾತ । ಮಿಂಡೆಯರಿಗೊಲಿಯುವನೆ ? ।
ಖಂಡ ಸಕ್ಕರೆಯ ಮೆಲುವಾತ ಮುಗ್ಗಿನ ।
ಹಿಂಡಿಗೆರಗುವನೆ ? ಸರ್ವಜ್ಞ ॥ ೫೧೬ ॥

ಉಂಡುಂಡು ದೇವರನು । ಕಂಡವರು ತಾನುಂಟೆ ? ।
ಉಂಡು ಉಪವಾಸಿಯಾಗಿಪ್ಪ ಶಿವಯೋಗಿ ।
ಕಂಡಿಹುದೆ ನಿಜವು ಸರ್ವಜ್ಞ ॥ ೫೧೭ ॥

ಆಶೆ ರೋಷವ ಬಿಟ್ಟು । ಈಶ ಧ್ಯಾನದೊಳಿರಲು ।
ಮೋಸವನು ಮಾಡಿ ಸತಿ ಬಂದು ಪಿಡಿಯಲ್ಕೆ ।
ಹೇಸಿ ತೊಲಗುವದು । ಸರ್ವಜ್ಞ ॥ ೫೧೮ ॥

ಎಲೆಯ ಮೆಲುವನೆ ಲೋಭಿ ? । ಕೊಲ್ಲುವನೆ ಧರ್ಮಿಷ್ಠ ? ।
ಸಲಹುವನೆ ಮನೆಯ ತುರುಗಾಹಿ ? ಸ್ತ್ರೀಯರಿಗೆ ।
ಒಲಿಯುವನೆ ಯೋಗಿ ? ಸರ್ವಜ್ಞ ॥ ೫೧೯ ॥

ಸಂಗವನು ತೊರೆದಂಗೆ । ಅಂಗನೆಯರಿರಲೇಕೆ ? ।
ಬಂಗಾರವೇಕೆ ? ಬಲವೇಕೆ ? ಲೋಕದ ।
ಶೃಂಗಾರವೇಕೆ ? ಸರ್ವಜ್ಞ ॥ ೫೨೦ ॥

ನಿಜಯೋಗಿ

ಮುಂಡೆ ಬೋಳಿಸಿಕೊಂಡು | ತುಂಡುಗಂಬಳಿ ಹೊದೆದು |
ಹಿಂಡನಗಲಿದ ಗಜದಂತ ಇಪ್ಪವರ |
ಕಂಡು ನಂಬುವದು ಸರ್ವಜ್ಞ || ೫೦೫ ||

ಭಿಕ್ಷುಕ

ಪಕ್ಷಿಗೆ ಸ್ವರ ಚೆಂದ | ಕುಕ್ಷಿಗಶನವು ಚೆಂದ |
ನಕ್ಷತ್ರ ಚೆಂದ ಗಗನಕ್ಕೆ, ಯೋಗಿಗೆ |
ಭಿಕ್ಷವೇ ಚೆಂದ ಸರ್ವಜ್ಞ || ೫೦೬ ||

ಬೇಡುವದು ಭಿಕ್ಷವನು | ಮಾಡುವದು ತಪವನ್ನು |
ಕಾಡದೆ ಪರರ ನೋಡುವನು ಶಿವನೊಳಗೆ |
ಕೂಡಬಹುದೆಂದ ಸರ್ವಜ್ಞ || ೫೦೭ ||

ಭಿಕ್ಷದ ಅನ್ನವದು | ಮೋಕ್ಷಕ್ಕೆ ಸಾಧನವು |
ಕುಕ್ಷಿಗೆ ನರರ ತಾ ಕಾಡಿ ಬೇಡುವನು |
ಮೋಕ್ಷಕ್ಕೆ ದೂರ ಸರ್ವಜ್ಞ || ೫೦೮ ||

ತಿರುಕರಿಲ್ಲದ ಊರು | ನರಕ ಭಾಜನಮಕ್ಕು |
ತಿರುಕರೆ ಗತಿಯು ಮೋಕ್ಷಕ್ಕೆ, ಶಿವನೆಂಬ |
ತಿರುಕ ತಾ ದೈವ ಸರ್ವಜ್ಞ || ೫೦೯ ||

ಕರದಿ ಕಪ್ಪರವುಂಟು | ಹಿರಿದೊಂದು ನಾಡುಂಟು |
ಹರನೆಂಬ ದೈವ ನಮಗುಂಟು ತಿರಿವರಿಂ |
ಸಿರಿವಂತರಾರು ? ಸರ್ವಜ್ಞ || ೫೧೦ ||

ಸಮತ್ವ ವಿಮರ್ಶೆ

ಸಾವಿಂಗೆ ಸಮತಿಂಗೆ | ಆವುದಂತರವಯ್ಯ |
ಸಾವು ತಾ ಸಮತೆಗಳವಲ್ಲ, ಕೋಪವನು |
ತಾವುದೇ ಸಮತೆ ಸರ್ವಜ್ಞ || ೫೧೧ ||

ವ್ಯಾಪಾರವಳಿದಲ್ಲ | ದಾಪರವು ಕಾಣಿಸದು |
ಪಾಪಕರ್ಮಗಳ ನತಿಗಳೆದು ನಿಂದವಗೆ |
ಕೋಪವೆಲ್ಲಿಯದು ? ಸರ್ವಜ್ಞ || ೫೧೨ ||

ಶಿವಯೋಗಿ ಹೇಗಿದ್ದರೂ ಚಂದ

ಕಲ್ಲಿನೊಳಗಣ ಕಪ್ಪೆ । ಗೆಲ್ಲಿಹರು ತಾಯ್ತಂದೆ? ।
ಅಲ್ಲಿಯೆ ಮರಣ ಪಡೆವಂದ ಹಂಸ ತಾ ।
ನೆಲ್ಲಿರ್ದಡೇನು ಸರ್ವಜ್ಞ ॥ ೫೨೧ ॥

ಅಂತ್ಯ ಜಾತಿಯೊಳಿರ್ಪ । ಮುಂತೆ ತೀರ್ಥದೊಳಿರ್ಪ ।
ದಂತಿಯೇರಿರ್ಪ ತಿರಿದುಂಬ, ಶಿವಯೋಗಿ ।
ಎಂತಿರ್ದಡೇನು? ಸರ್ವಜ್ಞ ॥ ೫೨೨ ॥

ಅಂತಿರ್ದ ಇಂತಿರ್ದ । ಎಂತಿರ್ದನೆನಬೇಡ ।
ಕಂತೆಯೆನು ಹೊದ್ದು ತಿರಿದುಂಬ ಶಿವಯೋಗಿ ।
ಎಂತಿರ್ದಡೇನು ಸರ್ವಜ್ಞ ॥ ೫೨೩ ॥

ಅತ್ತಿತ್ತ ಹೋದೊಡಂ । ಮತ್ತೆತ್ತಲಿರ್ದೊಡಂ ।
ಸುತ್ತುವ ಮನವ ಕಟ್ಟಿದ ಶಿವಯೋಗಿ ।
ಎತ್ತಲಿದ್ದೇನು? ಸರ್ವಜ್ಞ ॥ ೫೨೪ ॥

ಯೋಗಿಯು ನಿಂದೆ ತರವಲ್ಲ

ಜೋಗಯ್ಯನೆನಬೇಡ । ತ್ಯಾಗಿ ನಿಂದಿಸಬೇಡ ।
ನಾಗಭೂಷಣನ ಹಳಿದ ದಕ್ಷನ ತಲೆಯು ।
ಹೋಗಿಹುದು ನೋಡ ಸರ್ವಜ್ಞ ॥ ೫೨೫ ॥

ಜಡೆಯುಳ್ಳ ಹಿರಿಯರಿಗೆ । ಹೆಡೆಯುಳ್ಳ ಸರ್ಪನಿಗೆ ।
ನಡುಗುತ್ತ ನಮಿಸಿ ನಯದಿಂದ ಎಚ್ಚರನು ।
ಬಿಡದೆ ಕೊಡೆ, ಭಕ್ತಿ! ಸರ್ವಜ್ಞ ॥ ೫೨೬ ॥

ಜರಿವ ಜಲ ತಡೆದಿರ್ದ । ಗಿರಿಯನೇ ಕೊರೆಯಿತ್ತು ।
ಹಿರಿಯರ ಮುನಿಸು ಗರುವರರ ಗರುವವನು ।
ಹರಿಸಿತ್ತು ನೋಡ! ಸರ್ವಜ್ಞ ॥ ೫೨೭ ॥

ಹರಿವ ಜಲ ತಾ ಶೈತ್ಯ । ಧರೆಯಾನೆ ಕೊಲ್ಲುವದು ।
ಹಿರಿಯರ ಕ್ಷಮೆಗೆ ಮುನಿಸಾರೆ ರಿಪುವನು ।
ಇರಿಯದೆ ಬಿಡದು ಸರ್ವಜ್ಞ ॥ ೫೨೮ ॥

## ಯೋಗ ವಿಘ್ನಗಳು

ಕೋಪವೆಂಬುದು ಕೇಳಿ। ಪಾಪದ ನೆಲೆಗಟ್ಟು।
ಕೂಪದೊಳು ನೇಣು ಹರಿದಂತೆ ನರಕದೊಳು।
ಕೋಪಿ ತಾನಿಳಿವ ಸರ್ವಜ್ಞ ॥ ೫೨೯ ॥

ಜಡೆಯ ಕಟ್ಟಲುಬಹುದು। ಕಡವಸವನುಡಬಹುದು।
ಬಿಡದೆ ದೇಗುಲದೊಳಿರಬಹುದು, ಕರಣಗಳ।
ತಡೆಯುವದೆ ಕಷ್ಟ ಸರ್ವಜ್ಞ ॥ ೫೩೦ ॥

ಅಡವಿಯನು ಹೊಗಬಹುದು। ಮಡದಿಯನು ಬಿಡಬಹುದು।
ಬಿಡದೆ ಧ್ಯಾನದೊಳಿರಬಹುದು, ವಾಸನೆಯು।
ಕೊಡಹಲಳವಲ್ಲ ಸರ್ವಜ್ಞ ॥ ೫೩೧ ॥

ತಪವ ಮಾಡುವೆನೆಂದು। ಗೊಪೆಯ ಹೊಕ್ಕಿರಬೇಡ।
ತಪದಲ್ಲಿ ಕುಪಿತ ಬಿಡದಿರಲು ಆ ತಪವು।
ತಪ ತಾಪ ಕಂಡ್ಯೆ ಸರ್ವಜ್ಞ ॥ ೫೩೨ ॥

ಕಣ್ಣೀರು ಬಪ್ಪುದದು। ಹಣ್ಣಿದ್ದ ಮನೆಯಲ್ಲಿ।
ತಣ್ಣಗೆ ಧ್ಯಾನದಿರುತಿಪ್ಪ ಶಿವಯೋಗಿ।
ಮಣ್ಣಾಗಿ ಹೋಹ ಸರ್ವಜ್ಞ ॥ ೫೩೩ ॥

ಬೆಣ್ಣೆ ಬೆಂಕಿಯ ನಡುವೆ। ತಣ್ಣಗಿರಬಲ್ಲುದೇ?।
ಹೆಣ್ಣಿರ್ದ ಮನೆಗೆ ಎಡತಾಕಿ ಶಿವಯೋಗಿ।
ಮಣ್ಣು ಮಸಿಯಾದ ಸರ್ವಜ್ಞ ॥ ೫೩೪ ॥

ಚಿತ್ತವೆರಡಾಗದಲೆ। ಉತ್ತಮದೊಳಿರಬೇಕು।
ಚಿತ್ತ, ವದನೆಯರ ಸುಳಿದಿರಲು ಅವರ ಮ।
ಹತ್ವವೆತ್ತಣದು ಸರ್ವಜ್ಞ ॥ ೫೩೫ ॥

ಕೊಟ್ಟದ್ದು ಉಳಿಯುವದೆ?। ಕಟ್ಟಿದ್ದು ನಿಲ್ಲುವದೆ?।
ಕೆಟ್ಟ ವಿಷಯವನು, ಹೆಂಗಳನು, ಬಿಡದಿರೆ।
ಕೆಟ್ಟಹುದು ತಪವು! ಸರ್ವಜ್ಞ ॥ ೫೩೬ ॥

## ಶಿವಯೋಗಿಯ ಸ್ಥಿತಿ

### ತಾದಾತ್ಮ್ಯ

ಒಂದು ಕಂಬದೊಳಯ್ದು । ಗಂಧ ಹಂಸನ ಕಟ್ಟಿ ।
ಒಂದರೊಳು ಮನವು ಬೆರೆದಿಹರೆ ಪರಬೊಮ್ಮ ।
ವಂದು ತಾನಿರುವ ಸರ್ವಜ್ಞ ॥ ೫೩೭ ॥

ಬಿಂದುವೂ ಮೂತ್ರವೂ । ಒಂದೆ ನಾಳದಿ ಬಕ್ಕು ।
ಒಂದ ಬಿಟ್ಟೊಂದ ತಡೆದಿಹರೆ ಪರಬೊಮ್ಮ ।
ವಂದು ತಾನಕ್ಕು ಸರ್ವಜ್ಞ ॥ ೫೩೮ ॥

ಬ್ರಹ್ಮರಂಧ್ರದ ಗೊತ್ತು । ಒಮ್ಮೆಲೇ ತಿಳಿವುದೇ ? ।
ಹಮ್ಮಿನ ಹೊಲೆಯು ಕಳೆದೊಗೆದ ಶಿವಯೋಗಿ ।
ಬೊಮ್ಮ ತಾನಕ್ಕು ಸರ್ವಜ್ಞ ॥ ೫೩೯ ॥

ಜ್ಯೋತಿ ಕತ್ತಲೆಯಲ್ಲಿ । ಭಾತಿಯಿಂದುರಿವಂತೆ ।
ಪ್ರೀತಿಯಿಂದೆಸೆವ ಶಿವಯೋಗಿ ಜಗಕೆಲ್ಲ ।
ಜ್ಯೋತಿ ತಾನಕ್ಕು ಸರ್ವಜ್ಞ ॥ ೫೪೦ ॥

ಬಿಂದು ನಾದವ ನುಂಗಿ । ಇಂದು ರವಿಯನು ನುಂಗಿ ।
ಸಂದಿರ್ದ ಮನವ ನಿಜನುಂಗಿದಾಯೋಗಿ ।
ಇಂದುಧರನಕ್ಕು ಸರ್ವಜ್ಞ ॥ ೫೪೧ ॥

ಆಸನದಿ ದೃಢನಾಗಿ । ವಾಸನೆಯು ತಾ ಕಳೆದು ।
ಸೂಸುವ ಮನವ ಬಿಗಿದಿಪ್ಪ ಶಿವಯೋಗಿ ।
ಶಾಶ್ವತನಕ್ಕು ಸರ್ವಜ್ಞ ॥ ೫೪೨ ॥

ಇಂದ್ರಿಯದ ಆಶೆಗಳ । ಬಂಧಿಸದೆ ಕೊಂದವನು ।
ಸುಂದರನು ಅಕ್ಕು ಸುಖಿಯುಕ್ಕು, ಲೋಕಕ್ಕೆ ।
ಚೆಂದಿರನು ಅಕ್ಕು ಸರ್ವಜ್ಞ ॥ ೫೪೩ ॥

ನಿಟಿಲ ಭ್ರೂಮಧ್ಯದಲಿ । ನಿಟಿಲಾಕ್ಷ ಮನೆಮಾಡಿ ।
ಕುಟಿಲ ಕುಂದಕವ ಕೆದರಿದ ಶಿವಯೋಗಿ ।
ನಿಟಿಲಾಕ್ಷನಕ್ಕು ಸರ್ವಜ್ಞ ॥ ೫೪೪ ॥

ಸೂಸುವ ಮನವನ್ನು । ಹೇಸದಲೆ ಹರಿದೊಗೆದು ।
ಲೇಸಾಗಿ ಇಪ್ಪ ಶಿವಯೋಗಿ, ಗುರುವಿನ ।
ಕೂಸು ತಾನಿರುವ ಸರ್ವಜ್ಞ ॥ ೫೪೫ ॥

ಖೇಚರದ ಮುದ್ರೆಯನು । ಆಚರಿಸಲರಿದಿಹರೆ ।
ಲೋಚನವು ಮೂರು ತನಗಕ್ಕು, ಭೂಚರನು ।
ಖೇಚರನಕ್ಕು ಸರ್ವಜ್ಞ ॥ ೫೪೬ ॥

ಚೆನ್ನನಳಿಯರಿದಂಗೆ । ಮನ್ನಣೆಯು ಪಿರಿದಕ್ಕು ।
ಉನ್ನತವಕ್ಕು, ಸಿರಿಯುಕ್ಕು, ಶಂಕರನ ।
ಸನ್ನಿಧಿಯು ಅಕ್ಕು ಸರ್ವಜ್ಞ ॥ ೫೪೭ ॥

ಸುಧಿಯು ಸುಧೆಯನು ಸವಿದು । ಮುದದಿ ಮಂತ್ರವ ನೆನೆದು ।
ಉದಯರಾಗದೊಳು ನಿಂದಿರ್ದ್ದ ಶಿವಯೋಗಿ ।
ನಿಧಿಪುರುಷ ಕಾಣೊ ! ಸರ್ವಜ್ಞ ॥ ೫೪೮ ॥

ನವ ದ್ವಾರಗಳ ಮುಚ್ಚಿ । ಶಿವ ಧ್ಯಾನದೊಳಗಿರಲು ।
ನವಖಂಡ ಪೃಥ್ವಿಯೊಳಗಣ ಮಾತಲ್ಲ ।
ಕಿವಿಯೊಳಗೆ ಇಹುದು ಸರ್ವಜ್ಞ ॥ ೫೪೯ ॥

ಎತ್ತಿ ತಾ ಪ್ರಾಣವನು । ನೆತ್ತಿಯ ಕೊನೆವರೆಗೆ ।
ಚಿತ್ತದ ಮರ್ಮವರಿದಿಪ್ಪ ಶಿವಯೋಗಿ ।
ಗೆತ್ತಣದು ಕೇಡು ಸರ್ವಜ್ಞ ॥ ೫೫೦ ॥

ಅತ್ತಿಗೆ ಹೂವಿಲ್ಲ । ಕತ್ತೆಗೆ ಹೊಲೆಯಿಲ್ಲ ।
ಬತ್ತಲಿದ್ದವಗೆ ಭಯವಿಲ್ಲ, ಯೋಗಿಗೆ ।
ಕತ್ತಲೆಯೆ ಇಲ್ಲ ಸರ್ವಜ್ಞ ॥ ೫೫೧ ॥

### ಶಿವಯೋಗಿಗೆ ಚಾಪಲ್ಯವಿಲ್ಲ

ಕಿಚ್ಚಿನಲಿ ತಣುವಿಲ್ಲ । ನಿಚ್ಚಟಿಕೆ ಸಟೆಯಿಲ್ಲ ।
ಮುಚ್ಚಳವು ಇಲ್ಲ ಆಗಸಕೆ, ಶಿವಯೋಗಿ ।
ಗಚ್ಚಿಗವೆ ಇಲ್ಲ ಸರ್ವಜ್ಞ ॥ ೫೫೨ ॥

ಸಾವಿಲ್ಲ

ಉತ್ತುಂಗ ಮಾಣಿಕದ । ಬಿತ್ತು ಮಂಟಪದೊಳಗೆ ।
ನಿತ್ಯ ನಿರ್ಮಲದ ನಿಜಗಂಡ ಶಿವಯೋಗಿ ।
ಗೆತ್ತಣದು ಸಾವು ? ಸರ್ವಜ್ಞ ॥ ೫೫೩ ॥

ಆವರೋಮದಲೊಂದು । ಆವು ಗಣ್ಣಿಯ ಮಾಡಿ ।
ಆವು ಮಾಯೆಯ ಕರಕಟ್ಟಿದಾ ಯೋಗಿ ।
ಸಾವ ಮಾರಿಹನು ಸರ್ವಜ್ಞ ॥ ೫೫೪ ॥

ಕುಂಡಲಿಯ ಸರ್ಪವನು । ಅಂಡಲೆಯ ಅರಿದಿಹರೆ ।
ಮಂಡಲವು ಮೂರು ವಶವಾಗಿ ತಾ ಜವನ ।
ಗಂಡನಾಗಿಕ್ಕು ಸರ್ವಜ್ಞ ॥ ೫೫೫ ॥

ಪುನರ್ಜನ್ಮವಿಲ್ಲ

ವೈರಾಗ್ಯ ಬಲದಿ ಸಂ । ಸಾರ ಸಾಗರದೊಳಗೆ ।
ಆರಾರು ಧೀರರೀಜುವರೊ ಅವರೆಲ್ಲ ।
ಪಾರಾಗಿ ಸಿಗರು ಸರ್ವಜ್ಞ ॥ ೫೫೬ ॥

ಬಿಂದು ನಾದಗಳರಿತು । ಇಂದ್ರಿಯವನುಡುಗಿಸುತ ।
ನಿಂದಿರದ ಮನದ ನಿಜಗಂಡ ಶಿವಯೋಗಿ ।
ಮುಂದೆ ಹುಟ್ಟುವನ ? ಸರ್ವಜ್ಞ ॥ ೫೫೭ ॥

ಬಿಂದು ನಾದಗಳಳಿದು । ಒಂದಾಗಿ ಶಿವನಲ್ಲಿ ।
ಬಂಧುರದ ಬೆಳಗ ಕಂಡ ಶಿವಯೋಗಿಗೆ ।
ಬಂಧನವು ಬಯಲು ಸರಜ್ಞ ॥ ೫೫೮ ॥

ಯೋಗಭೇದ

ಪ್ರಾರಬ್ಧ ಕರ್ಮಕ್ಕೆ । ಆರಯಿಕೆ ಮುನ್ನಿಲ್ಲ ।
ಹಾರಯಿಸಿ ಬಯಸಿ ಬಂದುದಕೆ ತಾನಳುಕ ।
ನಾರೂಢಯೋಗಿ ಸರ್ವಜ್ಞ ॥ ೫೫೯ ॥

ಹರನಿಷ್ಠೆ ಇಲ್ಲದ । ಪರಮರ್ಷಿ ಮುಖ್ಯನೆ ? ।
ಹರನಿಷ್ಠೆಯುಳ್ಳ ಶ್ವಪಚನಾದಡೆ ಆತ ।
ಪರಮರ್ಷಿ ಕಾಣೊ ಸರ್ವಜ್ಞ ॥ ೫೬೦ ॥

ಯೋಗಿಯ ಮನದಳವ । ಯೋಗಿಯೇ ತಾ ಬಲ್ಲ ।
ಯೋಗಿ ಯೋಗದಲಿ ಬೆರೆದಿಹರೆ ಅವನೆ ನಿಜ ।
ಯೋಗಿಯೆಂದರಿಗು ಸರ್ವಜ್ಞ ॥ ೫೬೧ ॥

ಸಿದ್ಧಾಂತ ಯೋಗದ । ಸುದ್ದಿಯನು ತಿಳುಹುವೆನು ।
ನಿದ್ರೆ, ವಾಸನೆಯ, ಹುಸಿಗಳನು ತೊರೆದಿಹನೆ ।
ಸಿದ್ಧಾಂತ ಯೋಗಿ ಸರ್ವಜ್ಞ ॥ ೫೬೨ ॥

ಕುಟಿಲ ಕುಯುಕ್ತಿಗಳ । ಸಟೆ, ಸಿಡುಕು, ನಟನೆಗಳ ।
ದಿಟವಾಗಿ ಅಳಿದು ತಪದೊಳಗೆ ಇರುವಾತ ।
ಹರಯೋಗಿ ಕಾಣೊ ಸರ್ವಜ್ಞ ॥ ೫೬೩ ॥

ಅರವಟಿಗೆಯುದಕವನು । ಪರರ ಕೈಯನ್ನವನು ।
ಪರನಿಂದೆ ಹಿಂಸೆ, ಸ್ತ್ರೀಯರನು ಬಿಟ್ಟಾತ ।
ವರಯೋಗಿ ಕಾಣೊ ಸರ್ವಜ್ಞ ॥ ೫೬೪ ॥

ಎಣ್ಣೆ ಬತ್ತಿಯನೇರಿ । ಸುಣ್ಬೆಳಗನೀವಂತೆ ।
ಸಣ್ಣಾಗಿ ಸುಟ್ಟು ಬೆಳಗೀವ ಶಿವಯೋಗಿ ।
ನಣ್ಣಾತನೇನು? ಸರ್ವಜ್ಞ ॥ ೫೬೫ ॥

ಮಿಥ್ಯಾಶಿವಯೋಗಿ

ಅಸಮ ಪಂಚಾಕ್ಷರಿಯ । ಉಸಿರ ಕೊನೆಯಲ್ಲಿರಿಸಿ ।
ಸಸಿನೆ ಕುಳ್ಳಿರ್ದು ಜಪಿಸದಾ ಶಿವಯೋಗಿ ।
ಕಿನವಾಯಿಯಕ್ಕು ಸರ್ವಜ್ಞ ॥ ೫೬೬ ॥

ಅಹಂಕಾರಿ

ಬ್ರಹ್ಮನಾಳದ ಗೊತ್ತು । ಒಮ್ಮೆಲೇ ದೊರೆಯುವದೆ? ।
ಹಮ್ಮಿನ ಹೊಗೆಯು ತುಂಬಿರ್ದ ಶಿವಯೋಗಿ ।
ಬೊಮ್ಮನಾಗುವನೆ? ಸರ್ವಜ್ಞ ॥ ೫೬೭ ॥

ಎಲ್ಲವೂ ತಾನಾಗ । ಬಲ್ಲಡದು ಶಿವಯೋಗ ।
ಅಲ್ಲಲ್ಲಿಗಲ್ಲಿ ಕೃತಕವಾಗಲು ಅವನಿ ।
ಗೆಲ್ಲಿಯದು ಯೋಗ? ಸರ್ವಜ್ಞ ॥ ೫೬೮ ॥

ಅಜ್ಞಾನಿ

ಹಂಸನ ದಳದವರ । ವಂಶವನು ಅರಿಯದಲೆ ।
ಹಂಸ ತಾನೆಂದು ತಿರುಗುವ ಯೋಗಿಯು ।
ವಂಶವೇ ಮರುಳು ಸರ್ವಜ್ಞ ॥ ೫೬೯ ॥
ಹಾಲುಂಬ ಹಂಸವನು । ಹೋಲಬಲ್ಲರೆ ಯೋಗಿ ।
ಮೇಲಣ ಪದವನರಿಯದಿರೆ ಗಿಳಿಯೋದಿ ।
ಕಾಳುಗೆಟ್ಟಂತೆ ಸರ್ವಜ್ಞ ॥ ೫೭೦ ॥
ಸನ್ಯಾಸ ತನಗೆಂಬ । ಅನ್ಯಾಯ ನುಡಿಯೇಕೆ ।
ಉನ್ನತದೇವರಿರವರಿಯದವನೊಡಲ- ।
ದನ್ಯಾಯದಿರವು ಸರ್ವಜ್ಞ ॥ ೫೭೧ ॥

ಆಶಾಬಂಧಿ

ವೇಷಗಳ ಧರಿಸೇನು ? । ದೇಶಗಳ ತಿರುಗೇನು ? ।
ದೋಷಗಳ ಹೇಳಿ ಫಲವೇನು ? ಮನಸಿನ ।
ಆಶೆ ಬಿಡದನಕ । ಸರ್ವಜ್ಞ ॥ ೫೭೨ ॥
ಕಾಶಿ ಕಂಚಡಿಯೇಕೆ ? । ಆಸುರದ ಜಡೆಯೇಕೆ? ।
ಕೇಶವನು ಕಿತ್ತಿಕೊಳಲೇಕೆ ? ತ್ರೈಮಲದ ।
ಆಶೆಬಿಡದನಕ । ಸರ್ವಜ್ಞ ॥ ೫೭೩ ॥

ವೇಷಧಾರಿ

ಆಯದಲಿ ನಿಜದಿ ನಿಂ । ದಾಯುವನು ಅರಿಯದಲೆ ।
ವಾಯುಕ್ಕೆ ಜಪವ ಜಪಿಸುವ ಯೋಗಿಯ ।
ಬಾಯ ನೋಡೆಂದ । ಸರ್ವಜ್ಞ ॥ ೫೭೪ ॥
ಕತ್ತೆ ಬೂದಿಲಿ ಹೊರಳಿ । ಮತ್ತ ಯತಿಯಪ್ಪುದೇ ।
ತತ್ವವರಿಯದಲೆ ಭಸಿತವಿಟ್ಟವ ಶುದ್ಧ ।
ಕತ್ತೆಯಂತೆಂದ । ಸರ್ವಜ್ಞ ॥ ೫೭೫ ॥
ಅತ್ತಿ ಮರ ತಾ ಕಾಯ । ಹೂತ್ತಿರ್ದ ತೆರನಂತೆ ।
ತತ್ವಭೇದವನು ಅರಿಯದಲೆ ರುದ್ರಾಕ್ಷಿ ।
ಹೊತ್ತು ಫಲವೇನು । ಸರ್ವಜ್ಞ ॥ ೫೭೬ ॥

ಜಡೆಯು ಕಟ್ಟಿದ ಮುನ್ನ । ಒಡನೆ ಬಂದುದು ಮಾರಿ ।
ಗುಡುಗುಡಿಸಿ ಹೇನು ಹರಿವಾಗ ಬೋಳಯ್ಯ ।
ಕಡು ನಗುವನಯ್ಯ! ಸರ್ವಜ್ಞ || ೫೭೭ ||

ಚಿತ್ತಿಯು ಮಳೆ ಹೊಯಿದು । ಮುತ್ತಾಗಬಲ್ಲುದೇ ? ।
ಚಿತ್ತವಿಲ್ಲದಲೆ ಬೋಳಾದಡಾಯೋಗ ।
ಕತ್ತೆಯಿಂದತ್ತ ಸರ್ವಜ್ಞ || ೫೭೮ ||

ವಿಷಯಾಸಕ್ತ

ತೋರುವ ಕುಲಗಿರಿಯು । ನೇರಿ ತಪದೊಳಗಿರ್ದು ।
ಬೇರೊಂದ ಮನವು ನೆನೆದಿಹರೆ ಬೆಳೆದ ಹೊಲ ।
ಸೂರೆ ಹೋದಂತೆ ಸರ್ವಜ್ಞ || ೫೭೯ ||

ದಂಡಕೋಲಿನ ತುದಿಗೆ । ಹಿಂಡು ಕೌಪವ ಕಟ್ಟಿ ।
ಮುಂಡೆಯರ ಕಂಡು ಮಿಡುಕುವ ಯೋಗಿಯು ।
ಮುಂಡೆ ಬೋಳೇಕೆ ? ಸರ್ವಜ್ಞ || ೫೮೦ ||

ಸಾಧು ಸಿದ್ಧರು ಎಂದು । ತೋದ ಕಾವಿಯು ಹೊದೆದು ।
ಮೇದಿನಿಯು ಮೇಲೆ ವಿಷಯಕ್ಕೆ ತಿರುಗುವರು ।
ಮಾದಿಗರು ನೋಡ! ಸರ್ವಜ್ಞ || ೫೮೧ ||

ಆಲದ ಬಿಳಲಂತೆ। ಜೋಲು ಜಡೆಗಳ ಬಿಟ್ಟು ।
ನಾಲಿಗೆ ಕೌಪ ಶುದ್ಧಿಲ್ಲ, ಮರಿನಾಯು ।
ಬಾಲದಂತಕ್ಕು! ಸರ್ವಜ್ಞ || ೫೮೨ ||

ಈಶತ್ವವುಳ್ಳನಕ । ಈಶ್ವರನು ತಾನಕ್ಕು ।
ಈಶತ್ವ ಹೋಗೆ ದಾರವಡು ಹರಿದು ಮಣಿ ।
ಸೂಸಿದಂತಕ್ಕು ಸರ್ವಜ್ಞ || ೫೮೩ ||

ನಾಯುಕನು ಎನಿಪ ತ । ನ್ನಾಯುವನು ಅರಿಯುವದು ।
ಕಾಯುಕದಿ ಇಪ್ಪ ನಾಯುಕನ ಇಂದ್ರಿಯವು ।
ಸಾಯುದಿರುವನಕ ಸರ್ವಜ್ಞ || ೫೮೪ ||

ಒಡಲ ದಂಡಿಸಿ ಮುಕ್ತಿ । ಪಡೆವೆನೆಂಬುವ ನೆಗ್ಗ ।
ಬಡಿಗೆಯಲಿ ಹುತ್ತ ಹೊಡೆಯಲಡಗಿಹ ಸರ್ಪ ।
ಮಡಿದಿಹುದೆ ಹೇಳು ಸರ್ವಜ್ಞ ॥ ೫೮೫ ॥

ಹಾಳು ಗುಡಿಯಲಿ ಕುಳಿತು । ಜಾಳು ಮಾತುಗಳಾಡಿ ।
ಮೇಳಗಳ ಬಿಡದ ಶಿವಯೋಗಿ, ಶಿವನಾಗಿ ।
ಬಾಳುವನೆ ಹೇಳು ! ಸರ್ವಜ್ಞ ॥ ೫೮೬ ॥

ಜಂಗಮಕೆ ತಡೆ ಬೇಡ

ಒಡೆಯರೆಂದೆನಲೇಕೆ? । ತಡೆಯು ಬಾಗಿಲಲೇಕೆ ? ।
ಮೃಡರೂಪನೆನಿಸಿಕೊಳಲೇಕೆ ? ಜಂಗಮಕೆ ।
ತಡೆಯಿಲ್ಲದುದಕೆ ! ಸರ್ವಜ್ಞ ॥ ೫೮೭ ॥

ದುರ್ಮತಿ

ಹೊಲೆಗಲಸದ ಯೋಗಿ । ಹೊಲೆಗಲಸದುಳಿವನೇ? ।
ಹೊಲೆಗಲಸದಿಪ್ಪ ಕಡುಮೂರ್ಖ ಶಿವಯೋಗಿ ।
ಹೊಲೆಗಲಿಸಿ ಹೋಹ ಸರ್ವಜ್ಞ ॥ ೫೮೮ ॥

ಏಕಾಂತದಿ ಕುಳಿತು ಪಿ । ನಾಕಿಯನು ನೆನೆನೆನೆದು ।
ಲೋಕದ ನಡೆಯ ನಡೆವಾತ ಭವ ಭವದಿ ।
ಸಾಕಾಗಿ ಹೋಹ ಸರ್ವಜ್ಞ ॥ ೫೮೯ ॥

ನೆತ್ತಿಯಲಿ ಅಮೃತವ । ಹೊತ್ತಿಹುದು ಜಗವೆಲ್ಲ ।
ಎತ್ತನೇರೆತ್ತನರಸುವ ಶಿವಯೋಗಿ ।
ಗೆತ್ತಣದು ಮುಕ್ತಿ ? ಸರ್ವಜ್ಞ ॥ ೫೯೦ ॥

ಗುಣವಿದ್ದರೆ ವನ ಬೇಡ

ನೆನಹ ಮನದಲಿ ಕಟ್ಟಿ । ಮನವ ಘನದಲಿ ಕಟ್ಟಿ ।
ಮನವನ್ನವಾನ ಕೆಳಸದ ಯೋಗಿಗೆ ।
ವನವಾಸವೇಕೆ ? ಸರ್ವಜ್ಞ ॥ ೫೯೧ ॥

ನಿತ್ಯ ನೇಮಗಳೇಕೆ? । ಮತ್ತೆ ಪೂಜೆಗಳೇಕೆ ? ।
ನೆತ್ತಿ ಬೋಳೇಕೆ ? ಜಡೆಯೇಕೆ ? ಅರಿದು ನೆರೆ ।
ಸತ್ಯವುಳ್ಳರಿಗೆ? ಸರ್ವಜ್ಞ ॥ ೫೯೨ ॥

ಪ್ರಬೋಧ

ಮಂಡೆ ಬೋಳಾದವರ' ಕಂಡು ನಂಬಲುಬೇಡ ।
ಕಂಡಿತಮುಪ್ಪ ಪರತತ್ವ ವಿಷಯುವನು ।
ಕಂಡು ನಂಬುವದು ! ಸರ್ವಜ್ಞ ॥ ೫೯೩ ॥

ಎಲ್ಲ ಆಶೆಯು ಬಿಟ್ಟ । ರಿಲ್ಲಿಯೇ ಕೈಲಾಸ ।
ಎಲ್ಲವನು ಬಯಸಿ ಭ್ರಮಿಸಿದಡೆ ನರಕ ತಾ ।
ನಿಲ್ಲಿಯೇ ನೋಡ ! ಸರ್ವಜ್ಞ ॥ ೫೯೪ ॥

ಆಶೆ ತನಗಿರುವನಕ । ದಾಸನಾಗಿರುತಿಕ್ಕು ।
ಆಶೆ ವಾಸನೆಗಳಳಿದಿಹರೆ ಕೈಲಾಸ ।
ಕೀಶನಾಗಿಕ್ಕು ! ಸರ್ವಜ್ಞ ॥ ೫೯೫ ॥

ಆಶೆ ಎಲ್ಲವ ಬಿಟ್ಟು । ರಾಶಿ ಕರ್ಮವ ಸುಟ್ಟು ।
ದೋಷವನು ಕಳೆದು ನಿಂದವನು ಆವಗಂ ।
ಲೇಸಾಗಿ ಇರುವ ! ಸರ್ವಜ್ಞ ॥ ೫೯೬ ॥

## ೧೧. ದಾನಪದ್ಧತಿ

### ೧ ದಾನದ ವಿಷಯು

ದಾನಿಯೇ ಶ್ರೇಷ್ಠ

ಗಾನ ವಿದ್ಯವು ಲೇಸು । ಮಾನವತಿ ಸತಿ ಲೇಸು ।
ಸ್ವಾನುಭಾವಿಗಳ ಕೆಳೆ ಲೇಸು, ಎಲ್ಲಕು ।
ದಾನಿಯೇ ಲೇಸು ಸರ್ವಜ್ಞ ॥ ೫೯೭ ॥

ಈವಂಗೆ ದೇವಂಗೆ । ಆವುದಂತರವಯ್ಯ ? ।
ದೇವನು ಜಗಕೆ ಕೊಡುತಿಹನು, ಕೃಯ್ಯಾರೆ ।
ಈವನೇ ದೇವ ! ಸರ್ವಜ್ಞ ॥ ೫೯೮ ॥

ದಾನಿಗೂ ದೀನಗೂ । ಜ್ಞಾನಿಗಜ್ಞಾನಿಗೂ ।
ಮಾನಿಗೂ ಮಾನಹೀನನಿಗು ಸಿಂಹಕು ।
ಶ್ವಾನಗಂತರವು ಸರ್ವಜ್ಞ ॥ ೫೯೯ ॥

ದಾನಿಯು ಈ ಲೋಕದವನಲ್ಲ

ಇಕ್ಕುವವನೂರಿಗೊಂ। ದೊಕ್ಕಲೆಂದೆನಬೇಡ।
ಅಕ್ಷಯ ಪದವ ಪಡೆದು ಕೈಲಾಸದಿಂ।
ದೊಕ್ಕಲಿರ ಬಂದ ಸರ್ವಜ್ಞ ॥ ೬೦೦ ॥

ಇಕ್ಕುವವನೆಂದಿಗೊಂ। ದೊಕ್ಕಲೆಂದೆನಬೇಡ।
ಇಕ್ಕಿ ಮೆರೆಯುವನು ಇಲ್ಲಿರದೆ ಸ್ವರ್ಗಕೆ।
ಒಕ್ಕಲಿರ ಹೋಹ ಸರ್ವಜ್ಞ ॥ ೬೦೧ ॥

ಪರರಿಗುಪಕಾರಗಳ। ನೆರೆಮಾಳ್ಪ ಮಾನವನ।
ಪರಶಿವನು ಕಳುಹಲವ ಬಂದು ಧರೆಯೊಳಗೆ।
ಪರವೀವುತಿಹನು ಸರ್ವಜ್ಞ ॥ ೬೦೨ ॥

ದಾನದ ಪ್ರತಿಫಲ

ಅನ್ನವನು ಇಕ್ಕುವದು। ನನ್ನಿಯನು ನುಡಿಯುವದು।
ತನ್ನಂತೆ ಪರರ ಬಗೆದಡೆ ಕೈಲಾಸ।
ಬಿನ್ನಾಣವಕ್ಕು ಸರ್ವಜ್ಞ ॥ ೬೦೩ ॥

ದಾನದ ಫಲದಿಂದ। ಭೂನಾಥನಾಗುವನು।
ಭಾನುಮಂಡಲವನೊಡೆದಮಳ ಸ್ವರ್ಗಕ್ಕೆ।
ತಾನೊಡೆಯನಹನು ಸರ್ವಜ್ಞ ॥ ೬೦೪ ॥

ಹರಕೊಟ್ಟ ಕಾಲಕ್ಕೆ। ಹರನರೂಪಿಗೆ ನೀಡು।
ಹರದೆಯರು ಸುತರು ನೆರೆಸವಿದು ಸುಖಿಸುತಲಿ।
ಹರನ ಹರಸುವರು ಸರ್ವಜ್ಞ ॥ ೬೦೫ ॥

ಸಿರಿಬಂದ ಕಾಲಕ್ಕೆ। ಕರೆದು ದಾನವ ಮಾಡು।
ಪರಿಣಾಮವಕ್ಕು, ಪದವಕ್ಕು, ಕೈಲಾಸ।
ನೆರೆಮನೆಯು ಅಕ್ಕು ಸರ್ವಜ್ಞ ॥ ೬೦೬ ॥

ಸ್ವಾತಿಯ ಹನಿ ಬಿದ್ದು। ಜಾತಿ ಮುತ್ತಾದಂತೆ।
ಸಾತ್ವಿಕನು ಅಪ್ಪ ಯತಿಗಿಕ್ಕೆ ಪಂಚಮಾ।
ಪಾತಕವು ಕೆಡಗು ಸರ್ವಜ್ಞ ॥ ೬೦೭ ॥

ಸತ್ತಿಗೆಯ ನೆಳಲಡಿಯ | ಸುತ್ತಿ ಬರುವನ ಕಂಡು |
ಎತ್ತಣದು ಪುಣ್ಯವೆನಬೇಡ ಅದು ಮುನ್ನಿ |
ನುತ್ತಮದ ಫಲವು ಸರ್ವಜ್ಞ ॥ ೬೦೮ ॥

ದಾನಿಯ ಲಕ್ಷಣ

ಹುಟ್ಟುವಾಗಲೆ ಧನವ | ಮೊಟ್ಟೆಗಟ್ಟಿಳಿದಿಹನೆ ? |
ಕಟ್ಟಿ ಕಡೆಯಲ್ಲಿ ಕೊಂಡೊಯ್ಯನಿದನರಿದು |
ಕೊಟ್ಟುಂಬ ದಾನಿ ಸರ್ವಜ್ಞ ॥ ೬೦೯ ॥

ಬೆಂದುದನು ಬಿತ್ತಿ ಬೆಳೆ | ವಂದಿರನು ನಾ ಕಾಣೆ |
ಬೆಂದುದನು ಬಿತ್ತಿ ಬೆಳೆದುಂಬ ದಾಸೋಹಿ |
ಇಂದುಧರನಕ್ಕು ಸರ್ವಜ್ಞ ॥ ೬೧೦ ॥

ಅವರೆ ತಂದವರಟ್ಟು | ಅವರಿಕ್ಕಿ ಇವರುಣಲು |
ಅವರೆ ತಿಳಿದುಪ್ಪವೆರೆದಿಹರೆ ಇವರಿಂಗೆ |
ಅವರೆ ತಾಯ್ತಂದೆ ಸರ್ವಜ್ಞ ॥ ೬೧೧ ॥

ದಾನಿಯನ್ನೇ ಬೇಡು

ನೋಡಿದರೆ ನಾಡೊಳಗೆ | ಬೇಡುವದು ಕಡುಪಾಪ |
ಬೇಡಿದಡೆ ಈಯದದು ಪಾಪ, ಕೊಡುವವರ |
ತಡೆವುದೇ ಪಾಪ ಸರ್ವಜ್ಞ ॥ ೬೧೨ ॥

ಬೇಡುವಾತನ ಮೋರೆ | ಕಾಡಿಗೆಯು ಬಡಿದಿಕ್ಕು |
ಬೇಡಲೀಯದನ ಮೋರೆ ಉರಿ ಕೆಂಡವನು |
ನೋಡಿದಂತಕ್ಕು ಸರ್ವಜ್ಞ ॥ ೬೧೩ ॥

ಏನಬೇಡಿದಡೊಬ್ಬ | ದಾನಿಯನು ಬೇಡುವದು |
ಹೇನನ್ನು ತಿಂಬ ಹೀನನ ಬೇಡಲವ |
ನೇನ ತಾ ಕೊಡುವ ? ಸರ್ವಜ್ಞ ॥ ೬೧೪ ॥

ಬೇಡಿದರೆ ಬೇಡುವದು | ಮಾಡುವ ಧರ್ಮಿಯನು |
ಮೂಢ ಮೂರ್ಖರನು, ಪಿಸುಣಿಗಳ ಪೀಡಿಸಿ |
ಬೇಡಬೇಡೆಂದ ಸರ್ವಜ್ಞ ॥ ೬೧೫ ॥

# ದಾನ ಪದ್ಧತಿ

## ಏಕೆ ದಾನ ಮಾಡಬೇಕು

ಮರಣವೆಂಬುದು ಸತ್ಯ । ಹರನಾಣೆ ಹುಸಿಯಲ್ಲ ! ।
ತರುಣಿಯರಿಗಿರಿಸೆ ಪರರುಂಬರದರಿಂದೆ ।
ವರದಾನವೀಯೊ ! ಸರ್ವಜ್ಞ ॥ ೬೧೬ ॥

ಕೊಟ್ಟದ್ದು ತನಗೆ ಬೈ । ಚಿಟ್ಟದ್ದು ಪರರಿಂಗೆ ।
ಕೊಟ್ಟದ್ದು ಕೆಟ್ಟಿತೆನಬೇಡ ! ಮುಂದಕ್ಕೆ ।
ಕಟ್ಟಿಹುದು ಬುತ್ತಿ ! ಸರ್ವಜ್ಞ ! ॥ ೬೧೭ ॥

ಕೊಟ್ಟು ಕುದಿಯಲಿ ಬೇಡ । ಕೊಟ್ಟಾಡಿಕೊಳಬೇಡ ।
ಕೊಟ್ಟು ನಾ ಕೆಟ್ಟೆನೆನಬೇಡ ! ಶಿವನಲ್ಲಿ ।
ಕಟ್ಟಿಹುದು ಬುತ್ತಿ ! ಸರ್ವಜ್ಞ ॥ ೬೧೮ ॥

ಕೊಡುವಾತನೇ ಹರನು ! । ಪಡೆವಾತನೇ ನರನು ! ।
ಒಡಲ ಒಡವೆಗಳು ಕೆಡೆದು ಹೋಗದ ಮುನ್ನ ।
ಕೊಡು ಪಾತ್ರವರಿದು ! ಸರ್ವಜ್ಞ ॥ ೬೧೯ ॥

ಇಕ್ಕಿದಾತನು ಉಂಡು । ನಕ್ಕು ಸ್ವರ್ಗಕೆ ಹೋಹ ।
ಇಕ್ಕದನು ಹೋಹ ನರಕಕ್ಕೆ, ಲೋಕದೊಳ ।
ಗಿಕ್ಕಲೇಬೇಕು ಸರ್ವಜ್ಞ ॥ ೬೨೦ ॥

## ಹೇಗೆ ದಾನ ಮಾಡಬೇಕು

ಯೋಗಿಗಂ ಕುಲವಿಲ್ಲ । ನಾಗರಕೆ ನೆಲೆಯಿಲ್ಲ ।
ಯೋಗವಟ್ಟಿಗಗ ನೆರಗಿಲ್ಲ, ಧರ್ಮಕೆ ।
ಆಗುಹೋಗಿಲ್ಲ ಸರ್ವಜ್ಞ ॥ ೬೨೧ ॥

ಆಗ ಬಾ ! ಈಗ ಬಾ !। ಹೋಗಿ ಬಾ ! ಎನ್ನದಲೆ ।
ಆಗಲೇ ಕರೆದು ಕೊಡುವವನ ಧರ್ಮ ಹೂ- ।
ಣ್ಣಾಗದೆ ಬಿಡದು ! ಸರ್ವಜ್ಞ ॥ ೬೨೨ ॥

ಕಡೆಯೇನು ಮೊದಲೇನು । ಕೊಡುವವನ ಧರ್ಮಕ್ಕೆ ।
ಎಡೆಯನಾಡಿಸುತ ಕೊಡದೆ ಹೋಹುದರಿಂದ ।
ಕೊಡದಿಹುದೆ ಲೇಸು ಸರ್ವಜ್ಞ ॥ ೬೨೩ ॥

ಕೊಡುವವನ ಧರ್ಮಕ್ಕೆ । ಕಡೆಯೇನು ಮೊದಲೇನು ।
ಎಡತಾಕಿಸುತ್ತ ಕೊಡುವವನ ಧರ್ಮವದು ।
ಹುಡಿಯು ಮಣ್ಣಿಂದ ಸರ್ವಜ್ಞ || ೬೨೪ ||

ಮೇಲು ಕೀಳೆನಬೇಡ ! । ಶೀಲವನು ಬಿಡಬೇಡ ! ।
ಕಾಲವಕಾಲವೆನಬೇಡ ಧರ್ಮದ ।
ಕೀಲುಬೇರೆಂದ ! ಸರ್ವಜ್ಞ || ೬೨೫ ||

## ದಾನಭೇದ

### ವಿವಿಧ ದಾನಗಳು

ತುಯ್ಯಲೂಟಕೆ ಲೇಸು । ಬಯ್ಯದ ನೊಸೆ ಲೇಸು ।
ಅಯ್ಯ ಬಾರೆಂಬ ಮಗ ಲೇಸು, ಧರ್ಮವದು ।
ಕೈಯ್ಯಾರೆ ಲೇಸು ! ಸರ್ವಜ್ಞ || ೬೨೬ ||

ತಿರಿದು ತಂದಾದರೂ । ಕರೆದು ಜಂಗಮಗಿಕ್ಕು ।
ಪರಿಣಾಮವಕ್ಕು ಪದವಕ್ಕು, ಕೈಲಾಸ ।
ನೆರೆಮನೆಯುಕ್ಕು ಸರ್ವಜ್ಞ || ೬೨೭ ||

ತಿರಿದು ಹರಿದೂ ಕೊರೆದು । ಕರೆದು ದಾನವ ಮಾಡು ।
ಪರಮನ ಕೃಪೆಯು ನಿನಗಕ್ಕು, ಸ್ವರ್ಗವದು ।
ನೆರೆಮನೆಯುಕ್ಕು ಸರ್ವಜ್ಞ || ೬೨೮ ||

ಬೇಡಿ, ಕಷ್ಟವ ಮಾಡಿ । ಕೂಡಿಸಿದರರ್ಥವನು ।
ರೂಢಿಗೀಶ್ವರನ ಶರಣರ್ಗೆ ನೀಡಿದರೆ ।
ಮಾಡಿದನು ಪುಣ್ಯ ಸರ್ವಜ್ಞ || ೬೨೯ ||

ಸೂಕ್ಷ್ಮವಾದರು ಒಂದು । ಭಿಕ್ಷವೀಯಲೆ ಬೇಕು ।
ಆಕ್ಷಯಪಾತ್ರೆ ತನಗಕ್ಕು, ಮೋಕ್ಷವದು ।
ತಕ್ಷಣದೊಳಕ್ಕು ಸರ್ವಜ್ಞ || ೬೩೦ ||

ಭಟ್ಟ, ಡೊಂಬರಿಗಿತ್ತು । ಕೆಟ್ಟು ಹೋಗಲಿ ಬೇಡ ।
ಸೃಷ್ಟಿಗೀಶ್ವರನ ಶರಣರಿಗೆ ಕೊಟ್ಟಹರೆ ।
ಶ್ರೇಷ್ಠ ಪದವಕ್ಕು ಸರ್ವಜ್ಞ || ೬೩೧ ||

ಬೀಗರುಂಬುವ ದಿನದಿ । ಯೋಗಿ ಭಿಕ್ಷಕೆ ಬರಲು ।
ಬೀಗರಿಗೆ ನೀಡಿ ಯೋಗಿಗಿಲ್ಲೆಂದವಗ ।
ಕಾಗೆಯ ಜನುಮ ಸರ್ವಜ್ಞ ॥ ೬೩೨ ॥

ಅಡುವುದವರಕ್ಕಿಯನು । ಕೊಡುವುದು ಬಿಡಾರವನು ।
ಕುಡಿಯುವರೆ ನೀರ ನೆರೆವುದು ಇವು ಮೂರು ।
ಬಡವರ ದಾನ ಸರ್ವಜ್ಞ ॥ ೬೩೩ ॥

ಉತ್ತಮದ ದೇವಾಂಗ। ವಸ್ತ್ರವನು ಧರಿಸುವಡೆ।
ಮುತ್ತು ಮಾಣಿಕವ ತೊಡುವರೆ ಮಾಡುವುದು ।
ನಿತ್ಯ ದಾನವನು ಸರ್ವಜ್ಞ ॥ ೬೩೪ ॥

ಆಡದೆ ಕೊಡುವವನು । ರೂಢಿಯೊಳಗುತ್ತಮನು ।
ಆಡಿ ಕೊಡುವವನು ಮಧ್ಯಮನಧಮ ತಾ ।
ನಾಡಿ ಕೊಡದವನು ಸರ್ವಜ್ಞ ॥ ೬೩೫ ॥

ಬೇಡುವ ಮುನ್ನೀವ । ನಾಡಿನೊಳಗುತ್ತಮನು ।
ಬೇಡಿದಡೆ ಈವ ಮಧ್ಯಮನಧಮ ತಾ ।
ಬೇಡಲೀಯದನು ಸರ್ವಜ್ಞ ॥ ೬೩೬ ॥

ಸೊಡರೆಣ್ಣೆ ತೀರಿದರೆ । ಕೊಡನೆತ್ತಿ ಸುರಿದಿಹರೆ ? ।
ಕೊಡಬೇಡ, ಕೊಡದೆ ಇರಬೇಡ, ದಾನವನು ।
ಬಿಡಬೇಡವೆಂದ ಸರ್ವಜ್ಞ ॥ ೬೩೭ ॥

ನುಡದುಪ್ಪವೆರೆದಿಹರೆ । ಕೊಡನೆತ್ತಿ ಹೊಯ್ಯುವರೆ ? ।
ಬಡವ ನಾನೆಂದು ಎನಬೇಡ, ಇರವರಿದು ।
ಕೊಡುವದೇ ಲೇಸು! ಸರ್ವಜ್ಞ ॥ ೬೩೮ ॥

## ಸಮಯೋಚಿತ ದಾನ

ಇಚ್ಛೆಯನು ಅರಿದಿತ್ತ । ನುಚ್ಚೊಂದು ಮಾಣಿಕವು ।
ಇಚ್ಛೆಯದು ತೀರ್ದ ಬಳಿಕಿತ್ತ ಮಾಣಿಕವು ।
ನುಚ್ಚಿಗು ಕಷ್ಟ ಸರ್ವಜ್ಞ ॥ ೬೩೯ ॥

ಪ್ರಸ್ತಾವವರಿದಿತ್ತ । ಎತ್ತೊಂದು ಮದಕರಿಯು ।
ಪ್ರಸ್ತಾವ ತೀರ್ದ್ದ ಬಳಿಕಿತ್ತ ಮದಕರಿಯು ।
ಕತ್ತೆಗು ಕಷ್ಟ ಸರ್ವಜ್ಞ ॥ ೬೪೦ ॥

ಆನೆಯನು ಅರಿದಿತ್ತ । ಮೀನವದು ಸವಲಕ್ಷ ।
ಆನೆ ತಾ ತೀರ್ದ್ದ ಬಳಿಕಿತ್ತ ಲಕ್ಷವದು ।
ಮೀಸದಿಂ ಕಷ್ಟ ಸರ್ವಜ್ಞ ॥ ೬೪೧ ॥

### ಸೋಪಾಧಿಕ ದಾನ

ಹಸನಾಗಿ ಬದುಕುವಡೆ । ಕುಶಲನೆಂದೆನಿಸುವಡೆ ।
ಪಶುಪತಿಯ ಪದವ ಪಡೆಯುವಡೆ ಹಸಿದರಿಗೆ ।
ಅಸನವನು ಇಕ್ಕು ಸರ್ವಜ್ಞ ॥ ೬೪೨ ॥

ನಲ್ಲಳನು ಬಯಸುವಡೆ । ಬಲ್ಲಿದನು ಎನಿಸುವಡೆ ।
ನಿಲ್ಲದೆ ಶಿವನ ಒಲಿಸುವಡೆ ಹಸಿದರಿಗೆ ।
ಇಲ್ಲೆನ್ನದಿಕ್ಕು ಸರ್ವಜ್ಞ ॥ ೬೪೩ ॥

ಆನೆಯನು ಏರುವಡೆ । ದಾನವನು ಮಾಡುವುದು ।
ಭಾನುಮಂಡಲವನಡರುವಡೆ ಹಸಿದರಿಗ ।
ನೀನೊಲಿದು ಇಕ್ಕು ಸರ್ವಜ್ಞ ॥ ೬೪೪ ॥

ಅಂದಳವನೇರುವರೆ । ಅಂದದಲಿ ಸುಖಿಸುವರೆ ।
ಮುಂದಗಮನೆ, ಸಿರಿ, ದೊರೆಯುವರೆ ಹಸಿದರಿಗೆ ।
ಚೆಂದದಿಂದಿಕ್ಕು ಸರ್ವಜ್ಞ ॥ ೬೪೫ ॥

ಮಂದಿಯನು ಆಳುವಡೆ । ಅಂದಳವನೇರುವಡೆ ।
ಸಂದಿಸಿದ ಭೋಗ ಪಡೆಯುವಡೆ ದಾನವನು ।
ಕುಂದದಲೆ ಮಾಡು ಸರ್ವಜ್ಞ ॥ ೬೪೬ ॥

ದೇಶವನು ಆಳುವರೆ । ಹಾಸಿಗೆಯಲೊರಗುವರೆ ।
ಈಶನ ಒಲುಮೆ ಪಡೆಯುವರೆ ದಾನವನು ।
ತೋಷದಿಂ ಮಾಡು ಸರ್ವಜ್ಞ ॥ ೬೪೭ ॥

ದೇಶಾಧಿಪತಿಯಹರೆ । ಭೂಷಣಗಳಿಡುತಿಹರೆ ।
ಸಾಸಿರಬಲೆಯರ ನೆರೆಯುವಡೆ ಹಸಿದರಿಗೆ ।
ಬೇಸರಿಯದಿಕ್ಕು ಸರ್ವಜ್ಞ ॥ ೬೪೮ ॥

ಪಾತಕವ ನೂಕುವಡೆ । ಸೂತಕವ ಕಳೆಯುವಡೆ ।
ಭೂತೇಶನೊಲುಮೆ ಪಡೆಯುವಡೆ ಹಸಿದರಿಗೆ ।
ಕಾತರಿಸದಿಕ್ಕು ಸರ್ವಜ್ಞ ॥ ೬೪೯ ॥

ಎತ್ತಣಾ ಹನಿಬಿದ್ದು । ಮುತ್ತಾದ ತೆರನಂತೆ ।
ಉತ್ತಮದ ಗತಿಯ ಪಡೆಯುವಡೆ ಯತಿಗೊಂದು ।
ತುತ್ತನಿಕ್ಕೆಂದ ಸರ್ವಜ್ಞ ॥ ೬೫೦ ॥

ಸೀಗುರಿಯು, ಚಾಮರದ । ಮೇಗಪ್ಪ ಬೆಳ್ಗೊಡೆಯು ।
ಭೋಗ ಹಡಪಿಗರ ಪಡೆಯುವಡೆ ದಾನವನು ।
ಬೇಗ ಮಾಡುವದು ಸರ್ವಜ್ಞ ॥ ೬೫೧ ॥

## ದಾನದ ರಹಸ್ಯ

ಧರ್ಮದ ಕರ್ಮದ । ಮರ್ಮವನು ಆನೊರೆವೆ ।
ಧರ್ಮಿಯಂದಳದಿ ಬರುತಿರಲು ಅದ ಹೊತ್ತು ।
ಕರ್ಮಿ ಬರುತಿಪ್ಪ ಸರ್ವಜ್ಞ ॥ ೬೫೨ ॥

ಪಾಪ ಪುಣ್ಯಗಳೆರಡು । ವ್ಯಾಪಿಸುತ ಬೆಂಬಿಡಿದು ।
ಪಾಪ ಮಾಡಿದನ ಹೆಗಲೇರಿ ರಾಜಕುಲ ।
ದೀಪ ಬರುತಿಹನು ಸರ್ವಜ್ಞ ॥ ೬೫೩ ॥

ಅನ್ನವನು ಇಕ್ಕುವ । ಅನ್ಯ ಜಾತನೆ ಕುಲಜ ।
ಅನ್ನವನು ಇಕ್ಕದುಣುತಿಪ್ಪ ಕುಲಜಾತ ।
ಅನ್ಯನೆಂದರಿಗು ಸರ್ವಜ್ಞ ॥ ೬೫೪ ॥

ಅನ್ನವನು ಇಕ್ಕಿ ನೀ । ಖಿನ್ನವನು ಪಡಬೇಡ ।
ಭಿನ್ನ ಭೇದಗಳು ಇಲ್ಲದೆ ಶಿವ ಜಗವ ।
ನಿನ್ನ ಸಲಹಿಹನು ಸರ್ವಜ್ಞ ॥ ೬೫೫ ॥

ಅರಿತು ಕರ್ಮವ ಬಿಟ್ಟು | ಮರೆತು ಧರ್ಮವ ಮಾಡು |
ಪರಮ ಪದವಕ್ಕು, ಶಿವನೊಲಿವ, ಧರೆಯೆಲ್ಲ |
ಎರಗಿರುವದಕ್ಕು ಸರ್ವಜ್ಞ ॥ ೬೫೬ ॥

## ೨. ಲೋಭತ್ವದ ವಿಷಯ

### ಲೋಭಿ ಕನಿಷ್ಠ

ಉಣ್ಣದೊಡವೆಯ ಗಳಿಸಿ | ಮಣ್ಣಿನೊಳು ತಾನಿರಿಸಿ |
ಸಣ್ಣಿಸಿ ನೆಲನ ಸಾರಿದನ ಬಾಯೊಳಗೆ |
ಮಣ್ಣು ಕಾಣಯ್ಯ ! ಸರ್ವಜ್ಞ ॥ ೬೫೭ ॥

ಇದ್ದುದನು ಬಿಟ್ಟು ಹೊರ | ಗಿದ್ದುದನು ಬಯಸುತಲಿ |
ಇದ್ದು ಉಣದಿಪ್ಪ ಬಾಯೊಳಗೆ ಕತ್ತೆಯ |
ಲದ್ದಿಯೇ ಬೀಳ್ಗು ಸರ್ವಜ್ಞ ॥ ೬೫೮ ॥

ಅನ್ನವನು ಇಕ್ಕಿದನು | ಉನ್ನತವ ಪಡೆಯುವನು |
ಉನ್ನತನಪ್ಪ ಯತಿಗಿಕ್ಕದಾ ಲೋಭಿ |
ಕುನ್ನಿಗು ಕಷ್ಟ ಸರ್ವಜ್ಞ ॥ ೬೫೯ ॥

ಉಣ್ಣೆ ಕೆಚ್ಚಲೊಳಿರ್ದು | ಉಣ್ಣದದು ನೊರೆವಾಲ |
ಪುಣ್ಯವ ಮಾಡಿ ಉಣಲೊಲ್ಲದವನಿರವು |
ಉಣ್ಣೆಗು ಕಷ್ಟ ಸರ್ವಜ್ಞ ॥ ೬೬೦ ॥

ವಿನಯವಿದ್ದಧಿಕರನು | ತನುಗೆಟ್ಟ ಬಡವರನು |
ಘನ ಹೀನವಳಿದು ಕರೆದುಣ್ಣದವನೂಟ |
ಶುನಕ ತಿಂದಂತೆ ಸರ್ವಜ್ಞ ॥ ೬೬೧ ॥

ಹೊತ್ತಾರೆ ಬಯ್ಗಿಂಗೆ | ಮತ್ತೆ ಬಾ ಎಂದೆನುತ |
ಹೊತ್ತನೆ ಕೊಂದು ಹುಸಿಯುವನಿಗಿಂದಲು |
ಸತ್ತಾತ ಲೇಸು ಸರ್ವಜ್ಞ ॥ ೬೬೨ ॥

### ಲೋಭತ್ವದ ಫಲ

ಸಂಚಯಿಸಿದ ಧನವು । ಕಂಚು ಕಬ್ಬುವನಕ್ಕು ।
ಹಂಚಕ್ಕು, ಹೆರರಿಗುಣಲಕ್ಕು, ದಾನದ ।
ಸಂಚು ಲೇಸೆಂದ ಸರ್ವಜ್ಞ ॥ ೬೬೩ ॥

ಭಿಕ್ಷವೆಂದವರಿಗೆ । ಭಿಕ್ಷವನು ನೀಡಿದರೆ ।
ಅಕ್ಷಯಪದವು ತನಗಕ್ಕು, ಇಲ್ಲವೆನೆ ।
ಭಿಕ್ಷುಕನಕ್ಕು ಸರ್ವಜ್ಞ ॥ ೬೬೪ ॥

ತಿರಿದುಂಬುತೊಬ್ಬರನು । ಕರೆದುಂಬುದತಿಹಿತವು ।
ಕರೆಯದೊಬ್ಬರನು ಉಣುತಿಪ್ಪನೂಟವದು ।
ನರಕದ ಊಟ ಸರ್ವಜ್ಞ ॥ ೬೬೫ ॥

ಕಾಗೆಯಗುಳನು ಕಂಡು । ಕೂಗುವದು ಬಳಗವನು ।
ಕಾಗೆ ಕೋಳಿಗಳ ತೆರದುಣ್ಣದವನಿರವು ।
ಕಾಗೆಗು ಕಷ್ಟ ಸರ್ವಜ್ಞ ॥ ೬೬೬ ॥

ಕಟ್ಟೆಯನು ಕಟ್ಟಿದರೆ । ಬಿಟ್ಟಿಹರು ಕೋಡಿಯನು ।
ಕೆಟ್ಟ ಕಕುಲತೆಯ ಮಾಡಿದರೆ ಆ ಕಟ್ಟೆ ।
ಕೆಟ್ಟುಹೋಗಿಹುದು ಸರ್ವಜ್ಞ ॥ ೬೬೭ ॥

ಹೆಂಡತಿ ಮಕ್ಕಳಿಗೆಂದು । ದಂಡಿಸದಿರು ದೇಹವ ।
ಕಂಡ ವಸ್ತುವನು ಕೊಡದುಣದೆ ಬೈಚಿಡಲು ।
ಕಂಡವರಿಗಹುದು ಸರ್ವಜ್ಞ ॥ ೬೬೮ ॥

ಬಿದಿರೆ ಅಂದಣವಕ್ಕು । ಬಿದಿರೆ ನತ್ತಿಗೆಯಕ್ಕು ।
ಬಿದಿರಿಂದ ಸಕಲ ವದವಕ್ಕು, ಲೋಕದೊಳು ।
ಬಿದಿರದವ ಕೆಟ್ಟ ಸರ್ವಜ್ಞ ॥ ೬೬೯ ॥

### ಲೋಭಿಯ ಲಕ್ಷಣ

ಮಾನವರ ದುರ್ಗುಣವ । ನೇನೆಂದು ಬಣ್ಣಿಪೆನು ।
ದಾನಗೆಯ್ಯೆನಲು ಕನಲುವರು, ದಂಡವನು ।
ಮೌನದೀಯುವರು ಸರ್ವಜ್ಞ ॥ ೬೭೦ ॥

ಕೊಡುವರೆ ಗಂಟೆರ್ದು। ಎಡೆನೂರು ಗಾವುದವೆ ? ।
ತಡೆಯದಿನ್ನೊಮ್ಮೆ ಬಾರೆಂಬ ಲೋಭಿ ತಾ ।
ಕೊಡುವದೆ ಹುಸಿಯು ಸರ್ವಜ್ಞ ॥ ೬೭೧ ॥

ದಾನವೆಂದರ ತಲೆಯ । ಚಾನದಲಿ ಕಡಿದಂತೆ ।
ತಾನೊಂದು ತಪ್ಪಮಾಡಿ ನೂರಾರನು ।
ಮೌನದಿಂ ಕೊಡುವ ಸರ್ವಜ್ಞ ॥ ೬೭೨ ॥

ಕಳ್ಳರಿಗೆ ಸುಳ್ಳರಿಗೆ । ಡೊಳ್ಳರಿಗೆ ಡೊಂಬರಿಗೆ ।
ಸುಳ್ಳುಗೊರವರಿಗೆ ಕೊಡುವವರು ಧರ್ಮಕ್ಕೆ ।
ಎಳ್ಳಷ್ಟು ಕೊಡರು ಸರ್ವಜ್ಞ ॥ ೬೭೩ ॥

ಲೋಭಿಯೇ ಕೊಲೆಪಾತಕಿ

ಎರೆಯಲೊಲ್ಲದ ಲೋಭಿ । ಕರೆಯಲೊಲ್ಲದ ಆವು ।
ಬರೆಗಾಲ ಪಯಣ, ಇವು ಮೂರು, ತನ್ನ ತಾ ।
ನಿರಿದುಕೊಂಡಂತೆ ಸರ್ವಜ್ಞ ॥ ೬೭೪ ॥

ನರಘಾತಿ

ಇಲ್ಲವೆಂದರೆ ಆತ । ಬಲ್ಲ ರಾವಿಗೆ ಹೋಹ ।
ಇಲ್ಲವೆನಲೊಲ್ಲ, ಕೊಡಲೊಲ್ಲ, ಆ ಪಾಪಿ ।
ಕೊಲ್ಲದೆ ಕೊಂದ ಸರ್ವಜ್ಞ ॥ ೬೭೫ ॥

ಕಟ್ಟಿದಂತಾಯುಧವು । ಅಟ್ಟಬಂದಿರಿಯುವುದೆ ? ।
ಕೊಟ್ಟೆಹೆನೆಂದು ಕೂಡಲೊಲ್ಲದನ ಮಾತು ।
ಅಟ್ಟೆ ಇರಿದಂತೆ ಸರ್ವಜ್ಞ ॥ ೬೭೬ ॥

ಕೊಡುವರೆ ಕೃಪಾಳೆ ? । ಎಡೆಯೇನು ದೂರವೇ ? ।
ಎಡೆಯಾಡಿಸುತ್ತ ಕೊಡದ ಲೋಭಿಯ ಮಾತು ।
ಕೊಡಲಿಯ ಗಾಯ ! ಸರ್ವಜ್ಞ ॥ ೬೭೭ ॥

ನಿಂದಿರಿದ ಕರಿಸತ್ತು । ಹಂದಿತಾನುಳಿವುದೆ ? ।
ತಂದೀವ ದಾನಿ ಬಡವಾಗಿ ಲೋಭಿಯು ।
ಇಂದುಧರನಹನೆ ? ಸರ್ವಜ್ಞ ॥ ೬೭೮ ॥

ನಿಂದಿರಿದ ಕಲಿಸತ್ತು । ಹಂದೆ ತಾನುಳಿಯುವನೆ? ।
ಸಂದಿರ್ದ್ದ ದಾನಿ ಬಡವಾಗಿ ಲೋಭಿಗೆ ।
ಇಂದ್ರ ಪದವಹುದೆ? ಸರ್ವಜ್ಞ ॥ ೬೭೯ ॥

ಲೋಭಿಗೆ ದುರ್ಗತಿ

ನೀಡುವರೆ ತುಂಬಿರಲು । ನೋಡಿ ಹೋಹನು ಕೆಟ್ಟ ।
ಬೇಡೆ, ಕೊಡದವನು ಕಡುಕೆಟ್ಟ, ಧರ್ಮವನು ।
ಮಾಡದವ ಕೆಟ್ಟ ಸರ್ವಜ್ಞ ॥ ೬೮೦ ॥

ಅಟ್ಟುಂಬ ಕಾಲದಲಿ । ಕೊಟ್ಟುಂಬುದೊಬ್ಬರಿಗೆ ।
ಕೊಟ್ಟುಂಬುದರಿಯದಧಮಂಗೆ ಹಲತೆರದ ।
ಮುಟ್ಟಿಡೆಗಳಕ್ಕು ಸರ್ವಜ್ಞ ॥ ೬೮೧ ॥

ಕಂಡವರ ದಂಡಿಸುತ । ಕೊಂಡವರ ಒಡವೆಗಳ ।
ನುಂಡುಂಡು ಮಲಗಿ ಮಡಿದ ಮೇಲವಗೆ ಯಮ ।
ದಂಡ ತಪ್ಪುವದೆ? ಸರ್ವಜ್ಞ ॥ ೬೮೨ ॥

ಪಾಪಿ ಗಳಿಸಿದ್ದು ಪರರ ಪಾಲು

ಉಳ್ಳಲ್ಲಿ ಉಣಲಿಲ್ಲ । ಉಳ್ಳಲ್ಲಿ ಉಡಲಿಲ್ಲ ।
ಉಳ್ಳಲ್ಲಿ ದಾನ ಕೊಡಲೊಲ್ಲದವನೊಡವೆ ।
ಕಳ್ಳಗೆ ನೃಪಗೆ ಸರ್ವಜ್ಞ ॥ ೬೮೩ ॥

ಬೇವು ಫಲವಾಗಲದು । ಸೇವಿಸಲು ಯೋಗ್ಯವೇ? ।
ಗಾವಿಲನ ಧನವು ಘನವಾಗಿ ಬಯ್ಚಿಟ್ಟ ।
ರಾವಿಲೇ ವೋಕು! ಸರ್ವಜ್ಞ ॥ ೬೮೪ ॥

ಕೊಟ್ಟುಂಬ ಕಾಲದಲಿ । ಕೊಟ್ಟುಣಲಿಕರಿಯದೆ ।
ಹುಟ್ಟಿಯು ಒಳಗೆ ಜೇನಿಕ್ಕಿ ಪರರಿಂಗೆ ।
ಬಿಟ್ಟು ಹೋದಂತೆ ಸರ್ವಜ್ಞ ॥ ೬೮೫ ॥

ಒಡಲಿಡಿದು ಗಳಿಸಿದ । ಒಡವೆಗಳು ಒಡನಿರಲು ।
ಕೊಡದುಣ್ಣದಿಟ್ಟು ಮಡಿದರೆ ಒಡವೆಯು ।
ನೊಡನೆ ಹೂಳುವರೆ? ಸರ್ವಜ್ಞ ॥ ೬೮೬ ॥

ಆರಿಗಾದರು ಒಂದು । ತಾರವನು ಕೊಡ ಲೋಭಿ ! ।
ಮಾರಿ ಬಂದೆಳೆದು ಕೊಲುವಾಗ ಗಳಿಸಿದುದು ।
ಆರಿಗಾಗುವದು ? ಸರ್ವಜ್ಞ ॥ ೬೮೭ ॥

ದಾನ ದಮೆಗಳಿಲ್ಲದೆ ಸ್ವರ್ಗವಿಲ್ಲ

ಖಂಡಿಸದೆ ಕರಣವನು । ದಂಡಿಸದೆ ದೇಹವನು ।
ಉಂಡುಂಡು ಸ್ವರ್ಗಕೆಯ್ದಲ್ಕೆ ಅದನೇನು ।
ರಂಡೆಯಾಳುವಳೆ ? ಸರ್ವಜ್ಞ ॥ ೬೮೮ ॥

ಕಯ್ಯೆತ್ತಿ ಕೊಡಲಿಲ್ಲ । ಮೆಯ್ಯ ದಂಡಿಸಲಿಲ್ಲ ।
ಅಯ್ಯಗಳಿಲ್ಲ ಹರಿಯಲ್ಕೆ ಕೈಲಾಸ ।
ಕೆಯ್ಯ ಮಂಚಿಕೆಯೆ ? ಸರ್ವಜ್ಞ ॥ ೬೮೯ ॥

ದಂಡಿಸಿದ ತನುವಿಲ್ಲ । ಕೊಂಡ ಸುವ್ರತವಿಲ್ಲ ।
ಕಂಡ ಕಂಡವರು ಏರಲ್ಕೆ, ಕೈಲಾಸ ।
ರಂಡೆಯ ಹೊರಸೆ? ಸರ್ವಜ್ಞ ॥ ೬೯೦ ॥

ಈಶನ ನೆನಹಿಲ್ಲ । ಮಿಾಸಲಿನ ತನುವಿಲ್ಲ ।
ಲೇಸಪ್ಪುದೊಂದು ನುಡಿಯಿಲ್ಲ, ಕೈಲಾಸ ।
ವೇಶಿಯ ಮನೆಯೆ ? ಸರ್ವಜ್ಞ ॥ ೬೯೧ ॥

ಕಂಡು ಕೊಟ್ಟುದು ಇಲ್ಲ । ದಂಡನೆಯು ಮುನ್ನಿಲ್ಲ ।
ಖಂಡಿತವು ಪುಣ್ಯ ತನಗೆನಲು ಸ್ವರ್ಗವನು ।
ಷಂಡನಾಳುವನೆ ? ಸರ್ವಜ್ಞ ॥ ೬೯೨ ॥

ಕೊಟ್ಟದ್ದು ಮುನ್ನಿಲ್ಲ । ಮುಟ್ಟದರಿವುಗಳಿಲ್ಲ ।
ಕೆಟ್ಟ ವಿಷಯಗಳ ಬಿಡಲಿಲ್ಲ, ಸ್ವರ್ಗದ ।
ಬಟ್ಟೆ ಬೇರೆಂದ ! ಸರ್ವಜ್ಞ ॥ ೬೯೩ ॥

ಪ್ರಬೋಧ

ಕಾಣಿಯನು ಗಳಿಸದ್ದ । ಕಾಣಿಯನು ಈಯುವದು ! ।
ಕೇಣದಿಂ ಗಳಿಸಿ ಕಡೆಯಲಿ ಕೊಡುವೆನೆನೆ ।
ಪ್ರಾಣ ಶಾಶ್ವತವೆ ? ಸರ್ವಜ್ಞ ॥ ೬೯೪ ॥

ಇದ್ದಾಗ ಉಣ್ಣದವ । ನೆದ್ದಾಗ ಉಣ್ಣುವನೆ ? ।
ಬಿದ್ದ ದೇಹವನು ಗುದ್ದಿನೊಳಗಿಡುವಾಗ ।
ಬುದ್ಧಿ ಬಂದವುದೆ ? ಸರ್ವಜ್ಞ ॥ ೬೯೫ ॥

ಸಿರಿಯುಭರವುಳ್ಳಾಗ । ಮರೆಯದಿರುವವ ಜಾಣ ।
ಕೊರತೆಯಾದಾಗ ಕೊಡಲು ತನಗಿಲ್ಲೆಂದು ।
ಮರುಗುವವನೆಗ್ಗ ಸರ್ವಜ್ಞ ॥ ೬೯೬ ॥

ಅನ್ನದಾನಗಳಿಂದ । ಮುನ್ನ ದಾನಗಳಿಲ್ಲ ।
ಅನ್ನಕ್ಕೆ ಮಿಗಿಲು ಇನ್ನಿಲ್ಲ, ಜಗದೊಳಗೆ ।
ಅನ್ನವೇ ಪ್ರಾಣ ! ಸರ್ವಜ್ಞ ॥ ೬೯೭ ॥

## ೧೨. ರಾಜನೀತಿ ಪದ್ಧತಿ

### ಬಂಧನ ಹೊಲ್ಲ

ಒಂದೆಲಗ ಮೆಲಹೊಲ್ಲ । ಹಂದೆ ರಣದಲಿ ಹೊಲ್ಲ ।
ತಂದೆಯನು ಜರಿವ ಮಗಹೊಲ್ಲ, ಲೋಕಕ್ಕೆ ।
ಬಂಧನವೆ ಹೊಲ್ಲ ಸರ್ವಜ್ಞ ॥ ೬೯೮ ॥

ಅಂದಗೇಡಿಯು ಹೊಲ್ಲ । ಮಂದಮತಿ ಸುತ ಹೊಲ್ಲ ।
ಹಂದೆಯನು ನಂಬಿ ಹೊಗ ಹೊಲ್ಲ, ಬಾಳುವಗೆ ।
ಬಂಧನವೆ ಹೊಲ್ಲ ಸರ್ವಜ್ಞ ॥ ೬೯೯ ॥

### ಸ್ವಾತಂತ್ರ್ಯವೇ ಶ್ರೇಷ್ಠ

ತಂತ್ರಿ ವಾದ್ಯವು ಲೇಸು । ಮಂತ್ರಿಯು ಕೆಳೆ ಲೇಸು ।
ಯಂತ್ರವಾಹಕನ ದಯೆ ಲೇಸು, ಜಗದಿ ಸ್ವಾ ।
ತಂತ್ರ್ಯವೇ ಲೇಸು ಸರ್ವಜ್ಞ ॥ ೭೦೦ ॥

### ಒಡೆಯನಿಲ್ಲದಿದ್ದರೆ ಕೇಡು

ಗುರುವು ಇಲ್ಲದ ಮಠವು । ಹಿರಿಯರಿಲ್ಲದ ಮನೆಯು ।
ಅರಸಿಲ್ಲದೂರು ಇವು ಮೂರು ನುಲಿಹರಿದ ।
ಹೊರಸಿನಂತಕ್ಕು ಸರ್ವಜ್ಞ ॥ ೭೦೧ ॥

ಹಿರಿಯರಿಲ್ಲದ ಮನೆಯು । ಗುರುವು ಇಲ್ಲದ ಮಠವು ।
ಅರಸುತನವಳಿದ ಅರಮನೆಯು ಹಣ ಹೋದ ।
ಹರದನಂತಕ್ಕು ಸರ್ವಜ್ಞ ॥ ೭೦೨ ॥

ನಾಡೆಂಬ ದೇಹಕ್ಕೆ । ರೂಢಿಪತಿಯೇ ಪ್ರಾಣ ।
ನಾಡಳಿಯೆ ರೂಢಿಪತಿ ಕೆಡಗು, ಅರಸಳಿಯೆ ।
ನಾಡೆಲ್ಲ ಕೆಡಗು ಸರ್ವಜ್ಞ ॥ ೭೦೩ ॥

ಗುಣವಿದ್ದರೆ ರಾಜ

ಕೇಣವನು ಕಳೆಯುವದು । ತ್ರಾಣಿಯೆಂದೆನಿಸುವದು ।
ಕ್ಷೋಣಿ ಮಾರ್ಬಲವ ಗೆಲ್ಲುವುದು ಪುಣ್ಯದ ।
ತ್ರಾಣ ಕಾಣಯ್ಯ ಸರ್ವಜ್ಞ ॥ ೭೦೪ ॥

ರಾಜಾ ಪ್ರತ್ಯಕ್ಷ ದೇವತಾ

ದೊರೆತನವ ಮಾಡುವರು । ಕರೆದನ್ನ ನೀಡುವರು ।
ಉರಗಭೂಷಣನ ನೆನೆವವರು, ಧರೆಯೊಳಗೆ ।
ನರರಲ್ಲ ನೋಡ ಸರ್ವಜ್ಞ ॥ ೭೦೫ ॥

ಮಂತ್ರಿ ಇಲ್ಲದಿದ್ದರೆ ಅತಂತ್ರ

ಮಂತ್ರಿಯುಳ್ಳಾ ರಾಜ್ಯ । ಮೆಂತಿರಿಸಿದಂತಕ್ಕು ।
ಮಂತ್ರಿಯಿಲ್ಲದನ ಸಾಮ್ರಾಜ್ಯ ಕೀಲ್ಗಳೆದ ।
ಜಂತ್ರದಂತಕ್ಕು ಸರ್ವಜ್ಞ ॥ ೭೦೬ ॥

ಪ್ರಜೆಯಿದ್ದರ ಅರಸು

ಮಂದಿಯಿಲ್ಲದ ರಾಜ್ಯ । ಕಂದನಿಲ್ಲದ ಭಾಗ್ಯ ।
ಬಂಧುವಿಲ್ಲದ ಬಾಳುವೆಯು, ಜಗದೊಳಗೆ ।
ಚೆಂದವಲ್ಲೆಂದ ಸರ್ವಜ್ಞ ॥ ೭೦೭ ॥

## ಯೋಗ್ಯ-ರಾಜಲಕ್ಷಣ

ರಣಧೀರ

ಊರಿಂಗೆ ದೊರೆ ರೂಪು । ನಾರಿಂಗೆ ಗುಣ ರೂಪು ।
ಚಾರು ಕೋಕಿಲೆಗೆ ಸ್ವರ ರೂಪು, ರಾಜಂಗೆ ।
ಧೀರತ್ವ ರೂಪು ಸರ್ವಜ್ಞ ॥ ೭೦೮ ॥

ಕಟುಗಗಂಜಿಕೆಯೇಕೆ? | ದಿಟಕೆ ಮೂದಲಿಯೇಕೆ? |
ಮರಗಂಡ ನತಿಯು ಗೊಡವೇಕೆ? ಕಲಿಗೆ ನಂ |
ಕಟಗಳಿರಲೇಕೆ? ಸರ್ವಜ್ಞ || ೭೦೯ ||

ಹರಗೆ ನಂದಿಯು ಲೇಸು | ಮರಣ ಭೂತಕೆ ಲೇಸು |
ವರಯುದ್ಧ ಲೇಸು ಸುಭಟಂಗೆ, ರಾಜಂಗೆ |
ಕರಧೈರ್ಯ ಲೇಸು ಸರ್ವಜ್ಞ || ೭೧೦ ||

ಬಿದಿರ ಮೆಳೆಗಳು ಲೇಸು | ಕುದುರು ಮುಂಡಿಗೆ ಲೇಸು |
ಅದುರುಗಳು ಲೇಸು ಕಬ್ಬುನಕೆ, ಸುಭಟಂಗೆ |
ಕುದುರೆ ಲೇಸೆಂದ ಸರ್ವಜ್ಞ || ೭೧೧ ||

ಸಾವಿಗೆ ಅಂಜದವ

ಜಾತಿವೀರರು ಸಾವ | ಭೀತಿಗಂಜುಳಿವರೇ? |
'ಜಾಸತ್ಯಮರಣಂ ಧ್ರುವ'ವೆಂದು ಇರುತಿರಲು |
ಏತಕಂಜುವದು? ಸರ್ವಜ್ಞ || ೭೧೨ ||

ಅಮ್ಮನಾಡಿರಿಯುವದು | ಬೊಮ್ಮನಾಡದೆ ಏನು |
ಅಮ್ಮದೊಡೆ ಇರಿದು ಕೆಡಬೇಡ! ಕಲಿಗೆ ತಾ |
ನಿಮ್ಮ ಸಾವುಂಟೆ? ಸರ್ವಜ್ಞ || ೭೧೩ ||

ಬಲೆಯು ಹರಿದರೆ ಹೊಲ್ಲ | ಮೊಲೆಯು ಬಿದ್ದರೆ ಹೊಲ್ಲ |
ತಲೆಹೊಲ್ಲ ಮೂಗು ಹರಿದರೆ, ಕಲಿಗೆ ಮಾ |
ದಲೆಯು ನುಡಿ ಹೊಲ್ಲ ಸರ್ವಜ್ಞ || ೭೧೪ ||

ಧನುರ್ವಿದ್ಯೆ ಬಲ್ಲವನು

ಕಲಿಯೊಡನೆ ಹೋರುವದು | ಗೆಲುವ ಜೂಜಾಡುವದು |
ಕೊಲುವಡೆ ಅಲಗ ಹಿರಿಯುವದು, ರಣದೊಳಗೆ |
ಸಲುವುದದು ನೋಡ! ಸರ್ವಜ್ಞ || ೭೧೫ ||

ಬಿಲ್ಲಿಲ್ಲದಾ ಕೆಯ್ದು | ಹುಲ್ಲಿಂದ ಕಡು ಕಷ್ಟ |
ಬಿಲ್ಲಿಲರ್ಜುನನು ರಘುರಾಮರೀಜಗದಿ |
ಎಲ್ಲ ಗೆಲಿದಿಹರು ಸರ್ವಜ್ಞ || ೭೧೬ ||

ಚೂರಿಯನು ಬಾಳನ್ನು । ಶೂರತ್ವದಿಂ ಪಿಡಿದು ।
ನಾರಿ ರಣದೊಳಗೆ ಸಾಗಲಾಚೂರಿಯ ।
ಸೂರೆ ನೋಡೆಂದ ಸರ್ವಜ್ಞ ॥ ೭೧೭ ॥

ಕತ್ತಿಯನು ಪಿಡಿಯುವಡೆ । ಶಕ್ತಿ ತುಂಬಿರಬೇಕು ।
ಶತ್ರು ತಾ ಸುತ್ತಮುತ್ತಿ ಬರೆ ಕತ್ತಿಯಿಂ ।
ನೆತ್ತಿ ಹೊಯ್ಯೆಂದ ಸರ್ವಜ್ಞ ॥ ೭೧೮ ॥

ಕತ್ತಿಯನು ಧರಿಸಿದಗೆ । ಯುಕ್ತಿಯೊಂದಿರಬೇಕು ।
ಕುತ್ತಗಳು ಬಿಡದೆ ಬರುತಿರಲು ಕತ್ತಿಯ ।
ನೆತ್ತಿ ಹೊಯ್ಯೆಂದ ಸರ್ವಜ್ಞ ॥ ೭೧೯ ॥

ಬೇಟೆ ಬಲ್ಲವನು

ಕೋಟೆ ಕದನಕೆ ಲೇಸು । ಬೇಟೆಯರಸಿಗೆ ಲೇಸು ।
ಸೀಟಾದ ಹಣ್ಣು ತರ ಲೇಸು, ಸುಜನರೊಡ ।
ನಾಟವೇ ಲೇಸು ಸರ್ವಜ್ಞ ॥ ೭೨೦ ॥

ತಪ್ಪಿಸಿಕೊಳ್ಳಬಲ್ಲವನು

ಓಡುವುದು ಒಡಲಿಂಗೆ । ಕೇಡಿಲ್ಲದಿರುತಿರಲು ।
ಓಡಿ ತನ್ನೊಡಲು ಕೆಡುವರೆ ರಣದಲ್ಲಿ ।
ಆಡಿ ಸಾಯುವದು ಸರ್ವಜ್ಞ ॥ ೭೨೧ ॥

ಕ್ರಮಸ್ಥ

ತೊಗರೆಯ ತೊಗೆ ಲೇಸು । ತಿಗುರಿಗೆ ಮೊಳೆ ಲೇಸು ।
ತಗರ ಹಿಂಗಾಲ ಸತು ಲೇಸು, ದೊರೆಗಳಿಗೆ ।
ಬಿಗಿಬಂದು ಲೇಸು ಸರ್ವಜ್ಞ ॥ ೭೨೨ ॥

ಸಲಿಗೆ ಕೊಡದವನು

ಅರಿವು ಇರದಿರೆ ಹೊಲ್ಲ । ಕರಿಯು ಬೆದರಲು ಹೊಲ್ಲ ।
ಅರಿಯದೂರೊಳಗೆ ಇರಹೊಲ್ಲ, ದೊರೆಗಳಿಗೆ ।
ಸರಿಮಾತು ಹೊಲ್ಲ ಸರ್ವಜ್ಞ ॥ ೭೨೩ ॥

ಮರವು ಮಗುವಿಗೆ ಹೊಲ್ಲ । ಕುರುವು ಕುಂಡೆಗೆ ಹೊಲ್ಲ ।
ಕುರುಡನ ಕೋಲು ಕಳ ಹೊಲ್ಲ, ದೊರೆಗಳಿಗೆ ।
ಸೆರೆಮಾತು ಹೊಲ್ಲ  ಸರ್ವಜ್ಞ || ೭೨೪ ||

ಸತ್ಯಸಂಧ

ನೆತ್ತವಿತ್ತಕೆ ಬಲವು । ಒತ್ತೆ ಸೂಳೆಗೆ ಬಲವು ।
ಕತ್ತಲೆಯು ಬಲವು ಕಳ್ಳಂಗೆ, ಅರಸಿಂಗೆ ।
ಸತ್ಯವೇ ಬಲವು  ಸರ್ವಜ್ಞ || ೭೨೫ ||

ಪಾಪಕ್ಕೆ ಭಯಪಡುವವನು

ಪರನಾರಿ ಸೋದರನು । ವರಶತ್ರುದಲ್ಲಣನು ।
ಕರ ಪಾಪ ಭಯವ ಹೊರೆವ ಗುಣಿಯುಹ ನೃಪಗೆ ।
ಸ್ಥಿರವಿಹಳು ಲಕ್ಷ್ಮಿ  ಸರ್ವಜ್ಞ || ೭೨೬ ||

ಒಕ್ಕಲುತನಕ್ಕೆ ಆಶ್ರಯ ಕೊಡುವವನು

ಒಕ್ಕಲನು ನಲುಗಿಸದೆ । ಲೆಕ್ಕವನು ಸಿಕ್ಕಿಸದೆ ।
ಕಕ್ಕುಲತೆಯಿಂದ ನಡೆಯಿಸುವ ಅರಸು ತಾ ।
ಚಕ್ಕಂದವಿರುವ  ಸರ್ವಜ್ಞ || ೭೨೭ ||

ಒಕ್ಕಲಿಂದ ರೊಕ್ಕ

ಬಂಡಾರ ತುಂಬಿ ನೀ । ಬಂಡಿಯಲಿ ಹೇರುವರೆ ।
ಮಂಡಲವನಾಳಿ ಮೆರೆಯುವರೆ ಒಕ್ಕಲನು ।
ಕೊಂಡಾಡಬೇಕು  ಸರ್ವಜ್ಞ || ೭೨೮ ||

## ರಾಜರಲ್ಲಿ ಹೇಗೆ ವರ್ತಿಸಬೇಕು

ಅರಸನ ಚಿತ್ತ ಚಂಚಲ

ಚಿತ್ತವರಸಿನ ಕರದ । ಬಿತ್ತ ತಾ ಮಣಿದಂತೆ ।
ಕುತ್ತ ಹೋಗುವುದು ಅರಸೊಲಿಯೆ, ಮುನಿದರೆ ।
ಕತ್ತು ಹೋಗುವುದು  ಸರ್ವಜ್ಞ || ೭೨೯ ||

ನಚ್ಚಿದಂತರಸಿನ । ಇಚ್ಛೆಯಂತಿರುವುದದು ।
ಒಚ್ಚೊತ್ತು ತಪ್ಪಿ ನಡೆದಿಹರೆ ಹೊತ್ತಾರೆ ।
ಕಿಚ್ಚು ಕಾದಂತೆ  ಸರ್ವಜ್ಞ || ೭೩೦ ||

ಚಿತ್ತವೃತ್ತಿಯನರಿದು । ಹತ್ತಿವಿಡಿದೋಲಯಿಸು ।
ಚಿತ್ತವನು ಪಡೆದು ಮದವಾಗೆ, ಮೊಲ ನಾಯ ।
ಹತ್ತಿದಂತಕ್ಕು ಸರ್ವಜ್ಞ ॥ ೭೩೧ ॥

ಅರಸು ಮೆಚ್ಚಿದರೆ ಅರ್ಧ ರಾಜ್ಯ

ಅರಸೊಲಿದು ನಡೆಸಿದರೆ । ಸಿರಿಯಕ್ಕು ಜಸವಕ್ಕು ।
ಕರಿ ತುರಗ ಬಲವು ಪಿರಿದಕ್ಕು, ಮುನಿದರೆ ।
ಕರನಾಶವಕ್ಕು ಸರ್ವಜ್ಞ ॥ ೭೩೨

ಅನವರತವಗಲದಲೆ । ಜನಪತಿಯನೋಲಯಿಸು ।
ಧನಮಕ್ಕು ತೇಜ ಪಿರಿದಕ್ಕು, ಕಡುವೈರಿ ।
ತನಗೆ ಸಖನಕ್ಕು ಸರ್ವಜ್ಞ ॥ ೭೩೩ ॥

ಮೆಚ್ಚದಿದ್ದರೆ ಮರಣ

ಅರಸು ಮುನಿದೂರೊಳಂ । ಕುರಿಸಿರುವದತಿಕಷ್ಟ ।
ಸರಸವಿಲ್ಲದ ರಾಣ್ಯದಿಂ ಬಾಣದ ।
ಬಿರುಸು ಲೇಸೆಂದ ಸರ್ವಜ್ಞ ॥ ೭೩೪ ॥

ಪಂ-ಟ್ಟರಿಗೆ ದಿನ

ಅರಗು ಕಲ್ಲೂ ಕೂಡಿ । ನೆರೆ ಉಕ್ಕ ಗೆಲುವಂದ ।
ಅರಮನೆಯು ಕಂಡ ಅಧಮರುತ್ತಮರನು ।
ನೆರೆ ಗೆಲುವರಯ್ಯ! ಸರ್ವಜ್ಞ ॥ ೭೩೫ ॥

ಎಚ್ಚರವಿಲ್ಲದಿದ್ದರೆ ಇರಬೇಡ

ಮೆಚ್ಚಿದಂತರಸಿನಲಿ । ಎಚ್ಚರಿಂದಿರಬೇಕು ।
ಎಚ್ಚರವ ತಪ್ಪಿ ನಡೆದಿಹರೆ ಆ ಮೆಚ್ಚು ।
ಕಿಚ್ಚಿನಂತಕ್ಕು ಸರ್ವಜ್ಞ ॥ ೭೩೬ ॥

ಅರಸನೋಲಯಿಸುವರೆ । ಕರಭೀತಿ ಬೇಕಯ್ಯ ।
ಅರಸು ಕರಿಯುರಗನೊಳೆಚ್ಚರವಿಲ್ಲದಿರೆ ।
ತ್ವರಿತದಿಂ ತೊಲಗು ಸರ್ವಜ್ಞ ॥ ೭೩೭ ॥

### ಮಂತ್ರಿಯಲ್ಲಿ ಹೇಗೆ ವರ್ತಿಸಬೇಕು

ಎಂತರಸು ಒಲಿದರೂ । ಮಂತ್ರಿಯು ಹಗೆ ಹೊಲ್ಲ! ।
ಎಂತಕ್ಕುಮರಸು ಮುನಿದಿಹರೆ? ಆ ಮಂತ್ರಿ ।
ಅಂತಕನಕ್ಕು! ಸರ್ವಜ್ಞ || ೭೩೮ ||

ಮಂತ್ರಿಯ ಹಗೆ, ನೃಪನ । ಕಾಂತೆಯು ಸಮಗೋಷ್ಠಿ ।
ಮಂತ್ರವಿಲ್ಲದನ ಒಡನಾಟ, ಇವು ತನ್ನ ।
ಅಂತ್ಯ ಕಾಲಕ್ಕೆ ಸರ್ವಜ್ಞ || ೭೩೯ ||

### ದೊಡ್ಡವರೊಡನೆ ಕದನ ಬೇಡ

ಬಲ್ಲವರು ಹಾವನೆಯು । ಕಲ್ಲ ತಾ ಮೆಟ್ಟುವರೆ? ।
ಬಲ್ಲಿದರೊಡನೆ ನೆಣಸಿ ಮಾತಾಡಿದ ।
ರಲ್ಲಿಯೇ ಕೇಡು! ಸರ್ವಜ್ಞ || ೭೪೦ ||

ಮೇಲರಿಯದಧಿಕರೊಳು । ಕಾಳಗವ ತೊಡಗಿದರೆ ।
ಬಾಳುವೆಯು ಕೆಟ್ಟು ಬಡವಕ್ಕು, ಜಿನಲಾದ ।
ಚೇಳಿನಂತಕ್ಕು ಸರ್ವಜ್ಞ || ೭೪೧ ||

ಅರಸನೊಡ್ಡೋಲಗದಿ । ಸರಿಸವನು ಅಗಲದಿರು ।
ಸರಸನಿಂದೆಯಲಿ ಇರದಿರು, ಆರಿಗೂ ।
ಬಿರಸು ಬೇಡೆಂದ ಸರ್ವಜ್ಞ || ೭೪೨ ||

ಅರಸನ ಸಭೆಯೊಳಗೆ । ಕುರಿತು ಆಡಲು ಬೇಡ ।
ಸರಸನಿಂದೆಯಲಿ ಇರಬೇಡ, ಒರ್ವರಲಿ ।
ಭರವಸವು ಬೇಡ ಸರ್ವಜ್ಞ || ೭೪೩ ||

ಎದ್ದು ಮಾತಾಡದಿರು । ಎದ್ದೆದ್ದು ನಿಲ್ಲದಿರು ।
ಇದ್ದ ಮಾನಿಸರ ಜರಿಯದಿರು, ಓಲಗದೊ ।
ಳಿದ್ದಾಗ ನೀನು! ಸರ್ವಜ್ಞ || ೭೪೪ ||

### ಅರಮನೆ

ಹುರಿಹುಗಿಲು ಆಗಿರ್ಪ್ಪ । ದರಮನೆಗೆ ಕೇಡಯ್ಯ ।
ಹರಿಹೊಕ್ಕು ಬಲಿಯ ಕೆಡಿಸಿಹನು, ಅರಮನೆಗೆ ।
ಹುರಿಹುಗಿಲು ಹೊಲ್ಲ ಸರ್ವಜ್ಞ ॥ ೭೪೫ ॥

ಗಣಿಕನ ನೆರೆಹೊಲ್ಲ । ಗಣಿಕೆ ಮುದಿಯಳು ಹೊಲ್ಲ ।
ಕಣುಕಟ್ಟು ಹೊಲ್ಲ ಅರಿದರಲಿ, ಅರಮನೆಗೆ ।
ಹೂಣೆಯಾಗ ಹೊಲ್ಲ ಸರ್ವಜ್ಞ ॥ ೭೪೬ ॥

ಸುಡುವರೆ ಪಂಜಿಹುದು । ಬಡಿಯೆ ಭೇರಿಯು ಇಹುದು ।
ಪೊಡವಿಯಾಳುವರ ಮದುವೆಯ ವೆಚ್ಚಕೊಂ ।
ದಡಿಕೆಲೆಯು ಬೇಡ ಸರ್ವಜ್ಞ ॥ ೭೪೭ ॥

ಹಾಡಬಲ್ಲವನೋದು । ಕೂಡಿ ತಪ್ಪದ ನಂಟು ।
ಬೇಡಿದನು ಈವ ದೊರೆಸೇವೆ, ಇವು ಮುನ್ನ ।
ಮಾಡಿದರ ಫಲವು ಸರ್ವಜ್ಞ ॥ ೭೪೮ ॥

### ಅಂತಃಪುರ

ರೊಟ್ಟಿಯಿಲ್ಲ ಊಟ । ಹೊಟ್ಟೆಗಿಲ್ಲದ ಕೂಟ ।
ಇಟ್ಟಿಯರಿಲ್ಲದರಮನೆಯು, ಚಂದನವ ।
ಕುಟ್ಟಿ ಕುಡಿದಂತೆ ಸರ್ವಜ್ಞ ॥ ೭೪೯ ॥

ಅಜ್ಜಿಯಿಲ್ಲದ ಮನೆಯು । ಮಜ್ಜಿಗಿಲ್ಲದ ಊಟ ।
ಕೊಜ್ಜೆಯರಿಲ್ಲದರಮನೆಯು, ಇವು ಮೂರು ।
ಲಜ್ಜೆಗೇಡೆಂದ ಸರ್ವಜ್ಞ ॥ ೭೫೦ ॥

### ಅಯೋಗ್ಯ ರಾಜ

ಹಿರಿತನವು ಹೇಡಿಂಗೆ । ಗುರುತನವು ಮೂಢಂಗೆ ।
ದೊರೆತನವು ನಾಡ ನೀಚಂಗೆ ದೊರೆದಿಹರೆ ।
ಧರೆಯೆಲ್ಲ ಕೆಡುಗು ಸರ್ವಜ್ಞ ॥ ೭೫೧ ॥

ಕುದುರೆಯನು ಏರದ । ಕದನವನು ಜಯಿಸದ ।
ಸುದತಿಯರ ಒಲುಮೆ ಅರಿಯದ ಅರಸು ತಾ ।
ಸಿದಿಗೆಯ ಹೆಣನು ಸರ್ವಜ್ಞ ॥ ೭೫೨ ॥

### ಅಯೋಗ್ಯ ಕುದುರೆ

ಹಸಿವಾದಡುಂಬುದು । ಬ್ಯಸ ಬಂದರೋಡುವದು ।
ಪಸರಿಸುತ ಸಿರಿಯ ಮೆರೆಯುವ ಕುದುರೆಯ ।
ನೆಸಗಿ ಕಟ್ಟೆಂದ ಸರ್ವಜ್ಞ ॥ ೭೫೩ ॥

ಬಯ್ಯೆ ಬಯಲಾಗುವದು । ಹೊಯ್ಯಲಿರದೋಡುವದು ।
ಮೊಯ್ದು ಮೆಯ್ದೆಗೆವ ಕುದುರೆಯನು ವಿಧಿ ತಾನು ।
ಒಯ್ದರೆ ಲೇಸು ಸರ್ವಜ್ಞ ॥ ೭೫೪ ॥

ಮೆಟ್ಟು ಇಲ್ಲದ ಪಾದ । ಅಟ್ಟಲೋಡದ ತುರುಗ ।
ಕುಟ್ಟಿ ಕೆಡಹದ ಕಲಿತನವು, ಚಂದನವ ।
ಸುಟ್ಟು ಬಡಿದಂತೆ ಸರ್ವಜ್ಞ ॥ ೭೫೫ ॥

### ಶಸ್ತ್ರವಿದ್ಯೆ ಅರಿಯದವನು

ಕತ್ತಿ ಖಂಡುಗ ಭಾರ । ಹೊತ್ತು ತಿರುಗಿದಡೇನು ? ।
ಹೊತ್ತು ಬಂದಾಗ ಹಿರಿಯದ ಕತ್ತಿಯನು ।
ಎತ್ತಿ ಮಾರೆಂದ ಸರ್ವಜ್ಞ ॥ ೭೫೬ ॥

ಒಲಿಯುವರಿಗೊಲಿಯುವದು ! । ಗೆಲುವ ಜೂಜಾಡುವದು ! ।
ಕೊಲುವರೆ ಅಲಗ ಹಿರಿಯುವದು, ರಣದೊಳಗೆ ।
ಸಲುವದು ನೋಡ ! ಸರ್ವಜ್ಞ ॥ ೭೫೭ ॥

ಇರಿಯಲರಿಯದೆ ಸುರಿಗೆ । ಧರಿಸಿ ಮೆರೆದಡದೇನು ।
ಅರಿಯು ಬಂದಾಗ ತರಿಯದ ಸುರಿಗೆಯನು ।
ಅರೆದು ಕುಡಿಯೆಂದ ಸರ್ವಜ್ಞ ॥ ೭೫೮ ॥

ಕರವೆತ್ತಿ ಮಸೆಯುವನು । ಹಿರಿದೊತ್ತಿ ಹಾಕುವನು ।
ಮುರಿಯು ಬಂದಾಗ ಹಿರಿಯದ ಸುರಿಗೆಯನು ।
ಹುರಿದು ಮುಕ್ಕೆಂದ ಸರ್ವಜ್ಞ ॥ ೭೫೯ ॥

ರಣಹೇಡಿ

ಆಟ್ಟೈಲೋಡದ ತೇಜಿ । ಮುಟ್ಟಲರಿಯದ ಬಂಟೆ ।
ಇಟ್ಟೆಡೆಗಿಲ್ಲದಾಳಿದ್ದರಾಕಾರ್ಯ ।
ಕೆಟ್ಟತೆಂದರಿಗು ಸರ್ವಜ್ಞ ॥ ೭೬೦ ॥

ಕೇಡು ಕೂಡಿದ ಬುದ್ಧಿ । ಓಡಲರಿಯದ ಕಲಿಯು ।
ಕೂಡುವ ಪಥದಿ ನಾಚುವ ಸತಿಯನು ।
ಕಾಡಲಿಕ್ಕೆಂದ ಸರ್ವಜ್ಞ ॥ ೭೬೧ ॥

ಬಾಗದ ಬಿಲು ಕಷ್ಟ । ಹೋಗದಳಿಯನು ಕಷ್ಟ ।
ತ್ಯಾಗವಿಲ್ಲದ ನೃಪ ಕಷ್ಟ, ರಣದೊಳಗೆ ।
ಸಾಗುವದೆ ಕಷ್ಟ ಸರ್ವಜ್ಞ ॥ ೭೬೨ ॥

ಕಾಗೆಯೆಂಜಲು ಹೊಲ್ಲ । ಸೀಗೆ ಮುಳ್ಳದು ಹೊಲ್ಲ ।
ಆಗಲು ಉಲಿವ ಸತಿ ಹೊಲ್ಲ, ಅಪಜಯದ ।
ಭೋಗವೇ ಹೊಲ್ಲ ಸರ್ವಜ್ಞ ॥ ೭೬೩ ॥

ತಾಗದ ಬಿಲು ಹೊಲ್ಲ । ಆಗದ ಮಗ ಹೊಲ್ಲ ।
ಆಗೀಗಲೆಂಬ ನುಡಿ ಹೊಲ್ಲ, ರಣಕೆ ಇದಿ ।
ರಾಗದವ ಹೊಲ್ಲ ಸರ್ವಜ್ಞ ॥ ೭೬೪ ॥

ಹುರಿಯಾದನೂಟಕ್ಕೆ । ಹೊರೆಯಾದನವ ಧರೆಗೆ ।
ಮುರಿದು ಬಂದಿರ್ದ ಕಲಿಯೊಡನೆ ಹೋರದನು ।
ಇರುವದೇಕೆಂದ? ಸರ್ವಜ್ಞ ॥ ೭೬೫ ॥

ಕಾಳಗಗಳಿಲ್ಲದಿರ । ಲಾಳಬಯಸುವರವರು ।
ಕಾಳಗವೆಂಬ ಕಾಳ್ಗಿಚ್ಚು ಭರದಿ ಬರೆ ।
ಆಳಲಂಜುವರು ಸರ್ವಜ್ಞ ॥ ೭೬೬ ॥

ಲೋಭಿ

ಮಧುರವಿಲ್ಲದ ಊಟ । ಮುದವ ಬೆಳಸದ ಬೇಟ ।
ವಿಧವರಿತು ಕೊಡದ ಅರಸು ತಾ ಮರಿಹುಲಿಯ ।
ಸದನದಂತಕ್ಕು ಸರ್ವಜ್ಞ ॥ ೭೬೭ ॥

ರಾಗವಿಲ್ಲದ ವಿದ್ಯೆ । ಭೋಗವಿಲ್ಲದ ನಿದ್ರೆ ।
ತ್ಯಾಗವಿಲ್ಲದನ ದೊರೆತನವು, ಹಾಳೂರ ।
ಗೂಗೆಯಂತಕ್ಕು ಸರ್ವಜ್ಞ ॥ ೭೬೮

ದಯವಿಲ್ಲದವ

ಅನ್ನವನು ಇಕ್ಕದಲೆ । ನನ್ನಿಯನು ನುಡಿಯದಲೆ ।
ಮನ್ನಣೆಯನೀಯದಿರುತಿಪ್ಪ ಅರಸನು ।
ಕುನ್ನಿಗು ಕಷ್ಟ ಸರ್ವಜ್ಞ ॥ ೭೬೯ ॥

ಯೋಗ್ಯತೆಯನರಿಯದವನು

ಬಂದವರ ಕರೆಯಿಸನು । ನಿಂದವರ ನುಡಿಯಿಸನು ।
ಹಂದಿಯು, ಗಜವು ಒಂದೆಂಬನೋಲಗವು ।
ಎಂದಿಗೂ ಬೇಡ ಸರ್ವಜ್ಞ ॥ ೭೭೦ ॥

ಬಂದವರ ಕೇಳಿಸನು । ನಿಂದವರ ಮನ್ನಿಸನು ।
ಕೊಂಡೆಯನು, ಕಲಿಯು ಒಂದೆಂಬ ಅರಸನ ।
ದಂದುಗವೆ ಬೇಡ ಸರ್ವಜ್ಞ ॥ ೭೭೧ ॥

ಅಂತರವನರಿವಲ್ಲಿ । ಎಂತಾದರಿರಲಕ್ಕು ।
ದಂತಿ, ಸೂಕರನು ಸರಿಯೆಂಬ ರಾವಿನಲಿ ।
ಎಂತಿರುವದಕ್ಕು । ಸರ್ವಜ್ಞ ॥ ೭೭೨ ॥

ಅಯೋಗ್ಯ ಓಲಗ

ಹೊನ್ನು ಮುನ್ನವೆ ಇಲ್ಲ । ಮನ್ನಣೆಯು ಪಿರಿದಿಲ್ಲ ।
ಬಿನ್ನಪವ ಕೇಳದರಸಿನೋಲಗದಿಂದ ।
ಸನ್ಯಾಸ ಲೇಸು ಸರ್ವಜ್ಞ ॥ ೭೭೩ ॥

ಅಪಮಾನದೂಟದಿಂ । ದುಪವಾಸವಿರ ಲೇಸು ।
ನೃಪನಯ್ದೆ ಬಡಿವ ಒಡ್ಡೋಲಗದಿಂದವೆ ।
ತಪವು ಲೇಸೆಂದ ಸರ್ವಜ್ಞ ॥ ೭೭೪ ॥

### ಇಂಥಲ್ಲಿ ನಿಲ್ಲಬೇಡ

ಮಾಳಿಗೆಯು ಸಡಿಲಿದರೆ । ಸೂಳೆ ಹಲ್ಲುದುರಿದರೆ ।
ಆಳುವ ದೊರೆಯು ಹುಸಿದರಿದ್ದಲ್ಲಿಂದ ।
ಹೇಳದಲೆ ತೊಲಗು ಸರ್ವಜ್ಞ ॥ ೭೭೫ ॥

ಒಲ್ಲದ ಹೆಣ್ಣಿಂದ । ಗೆಲ್ಲದ ಜೂಜಿಂದ ।
ಸಲ್ಲದೋಲಗದ ಬದುಕಿಂದ ಅರಿಯಿರಿದು ।
ಕೊಲ್ಲ ಲೇಸೆಂದ ಸರ್ವಜ್ಞ ॥ ೭೭೬ ॥

### ದುಷ್ಟ ಅರಸನಿಂದ ನಷ್ಟ

ತಪ್ಪ ಸಾಧಿಪ ನೃಪನೊ । ಳಿಪ್ಪವನೆ ಕಡು ಹೆಡ್ಡ ।
ಸರ್ಪನುರೆ ಹೆಡೆಯ ನೆಳಲೆಂದು ನಾರಿದ ।
ಕಪ್ಪೆಯಂತಕ್ಕು ಸರ್ವಜ್ಞ ॥ ೭೭೭ ॥

ನುಡಿಯುಲಾಲಿಸಿ ನುಡಿಯೆ । ನುಡಿಯುವದು ಜನವೆಲ್ಲ ।
ನುಡಿವ ಮುನ್ನವೆ ಕಿಡಿಯಪ್ಪ ನೃಪನಿದಿರು ।
ನುಡಿಯುವವರಾರು ? ಸರ್ವಜ್ಞ ॥ ೭೭೮ ॥

ನುಡಿಯ ಪಾಲಿಸಿ ನುಡಿಯೆ । ನುಡಿಯುವದು ಜಗವೆಲ್ಲ ।
ನುಡಿದಿಹರೆ ಕೆರಳಿ ಕಿಡಿಯಪ್ಪ ನೃಪನರಿದು ।
ನುಡಿಸುವವರಾರು ? ಸರ್ವಜ್ಞ ॥ ೭೭೯ ॥

ಗೆಲ್ಲದ ಜೂಜು ತ । ನ್ನೊಲ್ಲದ ಬೆಲೆವೆಣ್ಣು ।
ಅಲ್ಲದ ಅರಸನತಿಕೂಟ ಬಹು ಕಾಲ ।
ನಿಲ್ಲವೆಂದರಿಗು ಸರ್ವಜ್ಞ ॥ ೭೮೦ ॥

ಖುಲ್ಲನ ಕೆಳ, ತನ್ನ । ನೊಲ್ಲದ ಚೆಲುವೆಣ್ಣು ।
ಅಲ್ಲದಹುದೆಂಬ ಅರಸನ ಒಲುಮೆಯು ।
ನಿಲ್ಲವೈ ನೋಡ ಸರ್ವಜ್ಞ ॥ ೭೮೧ ॥

ಆನೆ ತಾ ತುಡುಗಾಗೆ । ಜ್ಞಾನಿ ಮೂರ್ಖನುಮಾಗೆ ।
ಭೂನಾಥ ಜಾರನಾದರೆ ಮಾಣಿಪುದು ।
ಮಾನವರಿಗಳವೆ ಸರ್ವಜ್ಞ ॥ ೭೮೨ ॥

ಅಸಗನತಿ ಗರ್ವಿಸಲು । ಹಸು ಕಾಡಿ ಕರೆಯಲು ।
ಉಸುರಿಲ್ಲದರಸು ಪ್ರಭುವಾಗೆ, ಪ್ರಜೆಯೆಲ್ಲ ।
ಮಸಿವಣ್ಣವಕ್ಕು । ಸರ್ವಜ್ಞ ॥ ೭೮೩ ॥

ನಾಡನಾಳುವ ಅರಸು । ರೂಢಿಗೀಶ್ವರನಕ್ಕು ।
ಕಾಡುಮಿಗದಂತೆ ನೊರೆದುರಿಯಲಾನಾಡು ।
ಕಾಡಾಗದಿಹುದೆ ? ಸರ್ವಜ್ಞ ॥ ೭೮೪ ॥

ಹೇಡಿಂಗೆ ಹಿರಿತನವು । ಮೂಢಂಗೆ ಗುರುತನವು ।
ನಾಡ ನೀಚಂಗೆ ದೊರೆತನವು, ದೊರೆತಿಹರೆ ।
ನಾಡೆಲ್ಲ ಕೆಡುಗು ಸರ್ವಜ್ಞ ॥ ೭೮೫ ॥

ಕೆಟ್ಟೇತು ಎಂಬ ಭಯ । ಬಿಟ್ಟು ನ್ಯಾಯವ ಮರೆತು ।
ಪಟ್ಟದ ಅರಸು ಅನ್ಯಾಯದಲಿ ನಡೆಯೆ ।
ಸೃಷ್ಟಿಗೆ ಕೇಡು ಸರ್ವಜ್ಞ ॥ ೭೮೬ ॥

ಜಾರೆ ಮುಟ್ಟುವರಿಲ್ಲ । । ನಾರಿ ಕೂರ್ಪವಳಿಲ್ಲ । ।
ಆರಯ್ದು ಸಲಹುವರಸಿಲ್ಲದೂರೊಳಗೆ ।
ಮಾರಿ ಇದ್ದಂತೆ । ಸರ್ವಜ್ಞ ॥ ೭೮೭ ॥

ಅರಸು ಮಡಿದರೆ ಕೇಡು । ಬಿರಸು ಬಡವಗೆ ಕೇಡು ।
ವರುಷವಿಲ್ಲದಿರೆ ಬೆಳೆಗೇಡು, ಅವಿಚಾರ ।
ವರಸಿಂಗೆ ಕೇಡು ಸರ್ವಜ್ಞ ॥ ೭೮೮ ॥

ಅರಸು ಕೊಲುವರೆ, ಮಂತ್ರಿ । ಕರೆಸಿ ಕಷ್ಟವ ಕೊಡಲು ।
ಬೆರಸಿ ತಳವಾರ ಬೀಳಲ್ಕೆ ಪರಿಹರಿಪ ।
ರಾರಿನ್ನು ಹೇಳು । ಸರ್ವಜ್ಞ ॥ ೭೮೯ ॥

ಅರಸರಕ್ಕಸನಂತೆ ! | ವರಮಂತ್ರಿ ಹುಲಿಯಂತೆ ! |
ಬರೆವಾತ ನಾಡನರಿಯಂತೆ ! ಪರಿವಾರ |
ಗರಗಸದಂತೆ ! ಸರ್ವಜ್ಞ || ೭೯೦ ||

ಪ್ರಬೋಧ

ಅಡಿಯ ಮುಂದಿಡೆ ಸ್ವರ್ಗ | ಅಡಿಯ ಹಿಂದಿಡೆ ನರಕ |
ಅಡಿಗಶ್ವಮೇಧಫಲ, ಸ್ವಾಮಿಕಾರ್ಯಕ್ಕೆ |
ಮಡಿಯಲೇಬೇಕು ಸರ್ವಜ್ಞ || ೭೯೧ ||

## ೧೩. ಸಂಗಪದ್ಧತಿ

ಸತ್ಸಂಗವೇ ಶ್ರೇಷ್ಠ

ಮೇರುವಿಂಗೆಣೆಯಿಲ್ಲ | ಧಾರಿಣಿಗೆ ಪಡಿಯಿಲ್ಲ |
ಕಾರುಣಿಕರಪ್ಪ ಹಿರಿಯರ ಸಂಸರ್ಗ |
ವಾರಿಂದಲಧಿಕ ಸರ್ವಜ್ಞ || ೭೯೨ ||

ಭೃಂಗ ಕೇಳಲು ಚೆಂದ | ಹಂಗ ನೋಡಲು ಚೆಂದ |
ಭಂಗವಿಲ್ಲದ ನುಡಿ ಚೆಂದ, ಸಜ್ಜನರ |
ಸಂಗವೇ ಚೆಂದ ಸರ್ವಜ್ಞ || ೭೯೩ ||

ಹಂಗನ ಬಲ ಲೇಸು | ಹಂಗಾಳು ಇರ ಲೇಸು |
ಹಂಗಿಸದವರ ನೆರೆ ಲೇಸು, ಸಜ್ಜನರ |
ಸಂಗವೇ ಲೇಸು ಸರ್ವಜ್ಞ || ೭೯೪ ||

ಸಜ್ಜನ ಲಕ್ಷಣ

ಸತ್ಯವಂತರ ನೀನು | ಸತ್ತರೆಂದೆನಬೇಡ |
ಹೆತ್ತಮ್ಮ ಮಗನ ಕರೆವಂತೆ ನಿನ್ನನವ |
ರೆತ್ತಿಕೊಂಬುವರು ಸರ್ವಜ್ಞ || ೭೯೫ ||

ಹಂದಿ ಹದ್ದಾದವರು | ಇಂದು ಧರಣಿಗೆ ಬಂದು |
ಮಂದಮತಿಯಿಂದ ಜರಿದರೆ ಸುಜನರ್ಗೆ |
ಕುಂದು ಬಂದಪುದೆ ? ಸರ್ವಜ್ಞ || ೭೯೬ ||

ಎಲೆಯು ಕೊಳೆತರೆ ಹೊಲ್ಲ । ತೊಲೆಯು ಮುರಿದರೆ ಹೊಲ್ಲ ।
ಕೊಲೆ ಹೊಲ್ಲ ಊರ ಜನರೊಳಗೆ, ಸುಜನ ಮೂ ।
ದಲೆಯೊಳಿರ ಹೊಲ್ಲ ಸರ್ವಜ್ಞ ॥ ೭೯೭ ॥

ನಾರಂಗಿಯ ಸಸಿಗೆ । ನೀರು ತಂದೆರೆದಿಹರೆ ।
ಮೀರಿದಮೃತವನೀವಂತೆ ಹಿರಿಯರ ।
ಕಾರುಣ್ಯವೆಂದ ಸರ್ವಜ್ಞ ॥ ೭೯೮ ॥

ಸಜ್ಜನರ ಸಂಗವೇ ತೀರ್ಥ

ಕಪ್ಪೆಗಳು ಮೀನುಗಳು । ಇಪ್ಪುದದು ತೀರ್ಥವೇ ? ।
ತುಪ್ಪ ಓಗರಕೆ ಸಲುವದು, ಸತ್ಪುರುಷ ।
ರಿಪ್ಪುದೇ ತೀರ್ಥ ಸರ್ವಜ್ಞ ॥ ೭೯೯ ॥

ಸತ್ಯರ ನುಡಿ ತೀರ್ಥ । ನಿತ್ಯರ ನಡೆ ತೀರ್ಥ ।
ಉತ್ತಮರ ಸಂಗವದು ತೀರ್ಥ ಹರಿವ ನೀ ।
ರೆತ್ತಣದು ತೀರ್ಥ ? ಸರ್ವಜ್ಞ ॥ ೮೦೦ ॥

ಬೈದರೂ ಸಜ್ಜನರೇ ಲೇಸು

ಕುದಿಯುದ ಕೂಳಿಂದ । ಹದುಳದಂಬಲಿ ಲೇಸು ।
ಹೃದಯಶೂನ್ಯರುಗಳೊಲವಿಂದ ಅರಿದರಲಿ ।
ಕದನವೇ ಲೇಸು ಸರ್ವಜ್ಞ ॥ ೮೦೧ ॥

ಡೊಂಕು ಹಣ್ಣುಗಳಲ್ಲಿ । ಡೊಂಕು ಬಾಳೆಯಹಣ್ಣು ।
ಡೊಂಕುಂಟು, ಒಳಗೆ ರುಚಿಯುಂಟು, ಸಜ್ಜನರ ।
ಡೊಂಕು ಲೇಸೆಂದ ಸರ್ವಜ್ಞ ॥ ೮೦೨ ॥

ಅರಿಕೆ ಹೀನರ ಕೂಡಿ । ಮೆರೆದಾಡುವದರಿಂದ ।
ಅರಿಕೆಯುಳ್ಳವರ ಒಡನಾಡಿ ಅವಗಂ ।
ನೊರಗಿಹುದೆ ಲೇಸು ಸರ್ವಜ್ಞ ॥ ೮೦೩ ॥

ಅರಿಯುದವರೊಡನಾಡಿ । ಸರಿಯಾಳುವದಕಿಂದ ।
ಅರಿಕೆಯುಳ್ಳವರ ಒಡನಾಡಿ ಅಗಲು ।
ಸೆರೆಯಿಹುದೆ ಲೇಸು ಸರ್ವಜ್ಞ ॥ ೮೦೪ ॥

ನಿಂದೆಯನು ನುಡಿದರೂ । ನಂದ ಸಜ್ಜನ ಲೇಸು ।
ಹೊಂದಿ ನಾಸಿರವ ಕೊಟ್ಟರೂ ದುರ್ಜನರ ।
ದಂದುಗವೆ ಬೇಡ ಸರ್ವಜ್ಞ ॥ ೮೦೫ ॥

ಸಜ್ಜನರನ್ನಗಲಬೇಡ

ಆಗಡಿತ್ತು ಕೊಳ ಹೊಲ್ಲ । ನೆಗಡಿ ಮೂಗಿಗೆ ಹೊಲ್ಲ ।
ಪಗಡೆಯಾಡುವನ ಕೆಳೆ ಹೊಲ್ಲ, ಸಜ್ಜನರ ।
ಅಗಲಿರಲು ಹೊಲ್ಲ ಸರ್ವಜ್ಞ ॥ ೮೦೬ ॥

ಕಲೆಯು ಕೂತರೆ ಹೊಲ್ಲ । ಮೊಲೆಯು ಬಿದ್ದರೆ ಹೊಲ್ಲ ।
ತೊಲೆ ಸಿಡಿದ ಮನೆಯೊಳಿರ ಹೊಲ್ಲ, ಗುಣಿಗಳನು ।
ತೊಲಗುವದೆ ಹೊಲ್ಲ ಸರ್ವಜ್ಞ ॥ ೮೦೭ ॥

ತ್ರಿಕರಣ ಶುದ್ಧರೊಳು । ಪ್ರಕೃತಿ ವಿರಹಿತರೊಳು ।
ಮುಕುತಿಗೆಳೆಯಿಸುವ ಜನರೊಳು ಆವಗಂ ।
ಸಖತನವೆ ಲೇಸು ಸರ್ವಜ್ಞ ॥ ೮೦೮ ॥

ಸಂಗ ದುಸ್ಸಂಗ ಭೇದ

ಸಜ್ಜನರ ಸಂಗವದು । ಹೆಜ್ಜೇನು ಕೊಡದಂತೆ ।
ದುರ್ಜನರ ಸಂಗದೊಡನಾಟ ಬಚ್ಚಲಿನ ।
ರೊಜ್ಜಿನಂತಿಹುದು ಸರ್ವಜ್ಞ ॥ ೮೦೯ ॥

ಬಲ್ಲವರ ಒಡನಾಟ । ಬೆಲ್ಲವನು ಮೆದ್ದಂತೆ ।
ಅಲ್ಲದಹುದೆಂಬ ಅಜ್ಞಾನಿಯೊಡನಾಟ ।
ಕಲ್ಲು ಹಾದಂತೆ ಸರ್ವಜ್ಞ ॥ ೮೧೦ ॥

ಸತ್ಯರ ಒಡನಾಟ । ಮತ್ತೆ ಸಕ್ಕರೆ ತುಪ್ಪ ।
ಸತ್ಯವಿಲ್ಲದರ ಒಡನಾಟ ಬೇಲಿಯ ।
ಒತ್ತಿಯಂತಿಹುದು ಸರ್ವಜ್ಞ ॥ ೮೧೧ ॥

ಕಲ್ಲುಪ್ಪು ಕರ್ಪೂರವು । ನೋಲ್ಪೆರಡು ಧಾತೊಂದು ।
ಖುಲ್ಲನೊಳ್ಳಿದನ ರೂಪೊಂದು ಗುಣದೊಳಗೆ ।
ಎಲ್ಲ ಅಂತರವು ಸರ್ವಜ್ಞ ॥ ೮೧೨ ॥

ಮಾನಹೀನರ ಸಂಗ । ವೇನು ಕೊಟ್ಟರು ಬೇಡ ।
ಮಾನವುಳ್ಳವರ ಸಂಗ ತಾ ಸಕ್ಕರೆಯು ।
ಜೇನು ಸವಿದಂತೆ ಸರ್ವಜ್ಞ ॥ ೮೧೩ ॥

ಸಜ್ಜನರು ನಾಯಲೊಡೆ। ನಿರ್ಜ್ಜರರು ಮರುಗುವರು ।
ದೌರ್ಜ್ಜನ್ಯಕಾರಿ ಸತ್ತರೆ ಹತ್ತಿರ್ದ್ದ ।
ಕಜ್ಜಿ ಹರಿದಂತೆ ಸರ್ವಜ್ಞ ॥ ೮೧೪ ॥

ದುರ್ಜ್ಜನ ಲಕ್ಷಣ

ಉರಗನ ಹಲು ನಂಜು । ಸುರಿಗೆಯು ಮೊನೆ ನಂಜು ।
ಕರುಣವಿಲ್ಲದನ ನುಡಿ ನಂಜು, ದುರ್ಜ್ಜನರ ।
ಇರವೆಲ್ಲ ನಂಜು ಸರ್ವಜ್ಞ ॥ ೮೧೫ ॥

ಪ್ರತ್ಯಕ್ಷ ಉರಗನ । ಮಸ್ತಕದ ಹಲು ನಂಜು ।
ಮತ್ತೆ ದುರ್ಜ್ಜನರ ಕರಮುಖವು ಶಿರಪಾದ ।
ನಿತ್ಯವೂ ನಂಜು । ಸರ್ವಜ್ಞ ॥ ೮೧೬ ॥

ನರಿನಾಯ ಹಲು ನಂಜು । ಉರಗನ ಶಿರ ನಂಜು ।
ಬೆರಸಿ ತಪ್ಪುವನ ನುಡಿ ನಂಜು, ದುರುಳರ ।
ಹರುಷವೇ ನಂಜು ಸರ್ವಜ್ಞ ॥ ೮೧೭ ॥

ದುಸ್ಸಂಗ ಲಕ್ಷಣ

ಗಂಧವನು ತೀವಲ್ಲಿ । ಒಂದು ನೊಣವನು ಕಾಣೆ ।
ಸಂದಿಸಿಹ ಮಲವ ಬಿಡುವಲ್ಲಿ ನೊಣ ಮುತ್ತು ।
ವಂದವನು ನೋಡ ಸರ್ವಜ್ಞ ॥ ೮೧೮ ॥

ನಟ್ಟಡವಿಯ ಮನೆಯು, । ಕುಷ್ಟ, ಕ್ಷಯ, ಬಡತನವು ।
ದುಷ್ಟರ ನೆರೆಯು, ಇವು ಅಯ್ದು ಜಗದೊಳಗೆ ।
ನಷ್ಟ ಕಾಣಯ್ಯ ಸರ್ವಜ್ಞ ॥ ೮೧೯ ॥

ಹೊನ್ನು ಇಲ್ಲದ ಮನುಜ । ತಿನ್ನಲಿಲ್ಲದ ಮನೆಯು ।
ಚುನ್ನವಾಡುವನ ಗೆಳೆತನವು, ಇವು ಮೂರು ।
ಬನ್ನ ಕಾಣಯ್ಯ ಸರ್ವಜ್ಞ ॥ ೮೨೦ ॥

ದಂತಪಂಕ್ತಿಯ ನಡುವೆ । ಎಂತಿಪ್ಪುದದು ಜಿಹ್ವೆ ।
ಅಂತು ದುರ್ಜನರ ಬಳಸಿಸಲಿ ಸಜ್ಜನನು ।
ನಿಂತಿಹನು ನೋಡ । ಸರ್ವಜ್ಞ ॥ ೮೨೧ ॥

ಕ್ಷೀರವನು ಮಾನವರು । ಮಾರುವರು ಮನೆಮನೆಗೆ ।
ನಾರಾಯಿಬೆಡಿಗೆ ಹಾರುವರು, ದುರುಳರ ।
ದಾರಿ ಇಂತೆಂದ ಸರ್ವಜ್ಞ ॥ ೮೨೨ ॥

ಜೊತೆಯಂತೆ ಮತಿ

ಒಳ್ಳಿದರ ಒಡನಾಡಿ । ಕಳ್ಳನೊಳ್ಳಿದನಕ್ಕು ।
ಒಳ್ಳಿದನು ಕಳ್ಳರೊಡನಾಡಿ ಆವ ಶುದ್ಧ ।
ಕಳ್ಳ ತಾನಕ್ಕು ಸರ್ವಜ್ಞ ॥ ೮೨೩ ॥

ಪಂಡಿತರ ಒಡನಾಡಿ । ಭಂಡ ಪಂಡಿತನಕ್ಕು ।
ಪಂಡಿತನು ಭಂಡರೊಡನಾಡಿ ಆವ ಶುದ್ಧ ।
ಲಂಡತಾನಕ್ಕು ಸರ್ವಜ್ಞ ॥ ೮೨೪ ॥

ಕರಿಗೆ ಕರಿ ಕೂಡಿದರೆ । ಹಿರಿದು ನೇಹಗಳಕ್ಕು ।
ಕರಿಗೆ ಕೇಸರಿಯು ಕೂಡಿದರೆ ಕೆಸರ ತಂ ।
ದೊರಸಿದಂತಕ್ಕು ಸರ್ವಜ್ಞ ॥ ೮೨೫ ॥

ದುಷ್ಟರ ಕಂಡರೆ ದೂರ

ಉಂಡು ಕುಳ್ಳಿರ ಹೊಲ್ಲ । ಮುಂಡೆಯುಲಿ ಹೊರ ಹೊಲ್ಲ ।
ಕಂಡಿರಲು ಹೊಲ್ಲ ಹಗೆಗಳ, ದುರ್ಜನರ ।
ಕೊಂಡಾಟ ಹೊಲ್ಲ ಸರ್ವಜ್ಞ ೮೨೬ ॥

ಸೋಗೆಯ ರಸ ಹೊಲ್ಲ । ಮಾಗಿಯ ಚಳಿ ಹೊಲ್ಲ ।
ಆಗಲುಂ ಉರಿವ ನೆರೆ ಹೊಲ್ಲ, ದುರ್ಜನರ ।
ಯೋಗವೇ ಹೊಲ್ಲ ಸರ್ವಜ್ಞ ॥ ೮೨೭ ॥

ಹಿಗ್ಗು ಬಡವಗೆ ಹೊಲ್ಲ । ಸಿಗ್ಗು ಸೂಳೆಗೆ ಹೊಲ್ಲ ।
ನುಗ್ಗಿಯ ಹೂಗೆ ಮಳೆ ಹೊಲ್ಲ, ದುರ್ಜನರ ।
ಕಿಗ್ಗಳವೆ ಹೊಲ್ಲ ಸರ್ವಜ್ಞ ॥ ೮೨೮ ॥

ಹುಚ್ಚನ್ನ ಉಣಹೊಲ್ಲ । ಹುಚ್ಚು ಹೆಂಡತಿ ಹೊಲ್ಲ ।
ಹುಚ್ಚರಿಸಿ ನುಡಿವ ಮಗ ಹೊಲ್ಲ, ದುರ್ಜನರ ।
ತುಚ್ಛವೆ ಹೊಲ್ಲ ಸರ್ವಜ್ಞ ॥ ೮೨೯ ॥

ತೋಟದಲಿ ಕಳೆ ಹೊಲ್ಲ । ಕೀಟ ಬೆಳಸಿಗೆ ಹೊಲ್ಲ ।
ಚೇಟವದು ಹೊಲ್ಲ ಪರಸತಿಯು, ದುರ್ಜನರ ।
ಕೂಟವೇ ಹೊಲ್ಲ ಸರ್ವಜ್ಞ ॥ ೮೩೦ ॥

ಪೀರ ಮೂಢಗೆ ಹೊಲ್ಲ । ಕೀಟ ನಿದ್ದೆಗೆ ಹೊಲ್ಲ ।
ತೀಟೆಯದು ಹೊಲ್ಲ ಕಜ್ಜಿಯು, ದುರ್ಜನರ ।
ಕಾಟವೇ ಹೊಲ್ಲ ಸರ್ವಜ್ಞ ॥ ೮೩೧ ॥

ಕೆಂಪು ಹಂಪಲಿನೊಳಗೆ । ಕೆಂಪು ಇಟ್ಟೆಯ ಹಣ್ಣು ।
ಕೆಂಪುಂಟು, ಒಳಗೆ ವಿಷವುಂಟು, ದುರ್ಜನರ ।
ಪೆಂಪು ಇಂತೆಂದ ಸರ್ವಜ್ಞ ॥ ೮೩೨ ॥

ದುಷ್ಟರ ಸಹವಾಸ ಬೇಡ

ಬರೆ ಕಂಡು ಕರೆಯದನ । ಇರೆ ಕುಳ್ಳಿರೆನ್ನದನ ।
ಸರಸ ಸಜ್ಜನಿಕೆ ಇಲ್ಲದನ ಸಖತನವ ।
ಬೆರಸಲೇ ಬೇಡ ಸರ್ವಜ್ಞ ॥ ೮೩೩ ॥

ಕೂಡಿ ತಪ್ಪಲು ಬೇಡ । ಓಡಿ ಸಿಕ್ಕಲು ಬೇಡ ।
ಆಡಿ ತಪ್ಪಿದರೆ ಇರಬೇಡ, ದುರುಳರನು ।
ಕೂಡಬೇಡೆಂದ ಸರ್ವಜ್ಞ ॥ ೮೩೪ ॥

ಹಂದಿಯಾದರೆ ಏನು । ಅಂದವಿದ್ದರೆ ಸಾಕು ।
ಹೊಂದಿ ಸಾಸಿರವ ಸಂಧರೂ ದುರುಳರ ।
ದಂದುಗವೆ ಬೇಡ ಸರ್ವಜ್ಞ ॥ ೮೩೫ ॥

ಏನನಾದರು ಕೊಟ್ಟು । ಜ್ಞಾನಿಯ ಕೆಳೆ ಕೊಳ್ಳು ।
ಜ್ಞಾನಹೀನನ ಕೆಳೆಗೊಂದು ಪಣವನ್ನು ।
ನೀನಿತ್ತು ಕಳುಹು ಸರ್ವಜ್ಞ ॥ ೮೩೬ ॥

ಚಿತ್ತ ತಾ ಬಾಗಿದರು । ಮತ್ತೆದ್ದು ಮೀಟುವದು ।
ಹೊತ್ತನೆ ನೋಡಿ ಹೊಡೆಯುವ ಸಜ್ಜನರು ।
ಸತ್ತರೂ ಬೇಡ ಸರ್ವಜ್ಞ ॥ ೮೩೭ ॥

ಮರುಳ ತಾ ಮಳೆಗಂಜಿ । ಮರದಡಿಯ ಸಾರಿದರೆ ।
ಮರದ ಹನಿ ಬಿಡದು ಮಳೆ ನಿಂದು, ದುರುಳರ ।
ನೆರೆಯು ಇಂತೆಂದ ಸರ್ವಜ್ಞ ॥ ೮೩೮ ॥

ಉರಿದ ಕೆಂಡವ ಮುಟ್ಟಿ । ಮರುಗುವ ತೆರನಂತೆ ।
ದುರುಳರ ಕೂಟ ಬರಿ ಕೂಟ, ತನ್ನ ತಾ ।
ನಿರಿದುಕೊಡದಂತೆ ಸರ್ವಜ್ಞ ॥ ೮೩೯ ॥

ಕೊತ್ತಿ ಮೀಸಲ ಹಾಲ । ಮತ್ತೆ ತಾ ಬಿಡುವುದೇ ।
ಹೊತ್ತು ಬಂದಾಗ ಹಣಿವರ ಸಂಗವದು ।
ಕತ್ತಿಗಳಿಗೆಂದ ಸರ್ವಜ್ಞ ॥ ೮೪೦ ॥

ಕ್ಷಣಮಾತ್ರವಾದರೂ । ಗುಣಿಗಳೊಡನಾಡುವುದು ।
ಗುಣಹೀನರುಗಳ ಒಡನಾಡೆ ಬಹುದುಃಖ ।
ಮಣಲೊಳಿದ್ದಂತೆ ಸರ್ವಜ್ಞ ॥ ೮೪೧ ॥

## ೧೪. ವಿಧಿವಶ ಪದ್ಧತಿ

### ಸರ್ವರೂ ವಿಧಿವಶರು

( ದೃಷ್ಟಾಂತ )

ತ್ರಿಮೂರ್ತಿಗಳು

ಹರಿಹಂದಿಯಾದಂದು । ಹರನು ತಿರಿದುಂಡಂದು ।
ಹರನಜನ ಶಿರವ ಹರಿದಂದು ಲಿಖಿತವನು ।
ಬರೆದವರು ಯಾರು ಸರ್ವಜ್ಞ ॥ ೮೪೨ ॥

ಹರಿಯು ಕೋಡಗನಾದ । ಹಿರಿಬೊಮ್ಮನಾಡಾದ ।
ಮೆರೆದಿರ್ದ ಶಿವನು ನರಿಯಾದನಿಂತೆಂದು ।
ಬರೆದಿಟ್ಟರಾರು ಸರ್ವಜ್ಞ ॥ ೮೪೩ ॥

ಕರ್ಮದಿಂದವೆ ಹರನು । ಚರ್ಮವನು ತಾನುಟ್ಟ ।
ಹೊಮ್ಮರಾಲನಜನಾದ ಗೋವಿಂದ ।
ನೆಮ್ಮೆಯನು ಕಾದ ಸರ್ವಜ್ಞ ॥ ೮೪೪ ॥

ಕೋಡಗಾದನು ಹರಿಯು । ಆಡಾದನಾ ಅಜನು ।
ನೋಡಿದರೆ ಹರನು ನರಿಯಾದನುಳಿದವರ ।
ಪಾಡೇನು ಹೇಳು ಸರ್ವಜ್ಞ ॥ ೮೪೫ ॥

ಪುಡಿಯಾದನಂಗಜನು । ಹಿಡಿವಡೆಗ ಹನುಮಂತ ।
ಪೊಡವಿಗೀಶ್ವರನು ತಿರದುಂಡನುಳಿದವರ ।
ಸಡಗರವದೇನು ಸರ್ವಜ್ಞ ॥ ೮೪೬ ॥

ರಾಮ

ಅಕ್ಕರವು ಬರೆದಿರಲು । ಬೆಕ್ಕಿದ್ದು ಹಿಡಿಯುವ್ವನು ! ।
ರಕ್ಕಸನು ಸೀತೆ ಸೆಳೆವಾಗ ರಾಮ ತರಿ ।
ದಿಕ್ಕದೇಕಿರ್ದ ? ಸರ್ವಜ್ಞ ॥ ೮೪೭ ॥

ಸೀತೆ ವೈದುದು ಭಂಗ । ಸೇತು ಕಟ್ಟಿದು ಭಂಗ ।
ಮಾತಿನ ಭಂಗ ರಾಮಂಗೆ, ರಾವಣನಿ ।
ಗೇತರದು ಭಂಗ ? ಸರ್ವಜ್ಞ ॥ ೮೪೮ ॥

ಅಂಬುತಾಗಿದ ಎರಳೆ । ಕೊಂಬೂರಿ ಬೀಳ್ವಂತೆ ।
ಇಂಬರಿವ ಸೀತೆಯನಗಲಿದಾ ರಾಮನ ।
ಅಂಬು ಮುರಿದಿತ್ತೆ ? ಸರ್ವಜ್ಞ ॥ ೮೪೯ ॥

ಅಂಬುತಾಗಿದ ಹುಲ್ಲೆ । ಇಂಬಿಲ್ಲದಲೆವಂತೆ ।
ನಂಬಿರ್ದ ಸೀತೆಯ ತಾನಗಲಿ ಶ್ರೀರಾಮ ।
ಕುಂಭಿನಿಯೊಳಲೆದ ! ಸರ್ವಜ್ಞ ॥ ೮೫೦ ॥

ಸೀತೆ

ಹಾಗಿದ್ದೆ ಹೀಗಿದ್ದೆ । ಹೇಗಿದ್ದೆನೆನಬೇಡ ।
ಹೋಗಿರಲು ಸೀತೆ ಸೆರೆಯಾಗಿ, ಮಿಕ್ಕವರು ।
ಹೇಗಿದ್ದರೇನು ? ಸರ್ವಜ್ಞ ॥ ೮೫೧ ॥

ಅಕ್ಕರವ ತೊಡೆದಿಹುದು । ಮುಕ್ಕಣ್ಣಗಳವಲ್ಲ ।
ರಕ್ಕಸನು ಸೀತೆ ಒಯ್ವಾಗ ಆರಾರು ।
ದಿಕ್ಕಾಗಲಿಲ್ಲ ಸರ್ವಜ್ಞ ॥ ೮೫೨ ॥

ಸೇತುವನು ದಾಟಿಯುವ । ಸೀತೆಯನು ವೈದರೂ ।
ಸೋತವಗೆ ಭಂಗವಲ್ಲದೆ ಸೀತೆಗದು ।
ಏತರದು ಭಂಗ? ಸರ್ವಜ್ಞ ॥ ೮೫೩ ॥

ಹನುಮಂತ

ಅಂಕದರ್ಜುನ ಹೇಡಿ । ಶಂಕರನು ತಿರಿದುಂಡ ।
ಪಂಕಜನಾಭ ದನಗಾಯ್ದುನುಳಿದವರ ।
ಬಿಂಕವೇನೆಂದ ಸರ್ವಜ್ಞ ॥ ೮೫೪ ॥

ಸಾಗರವ ದಾಂಟಿ ಹೂ । ನ್ನಾಗರಕೆ ಹಾರಿದ ।
ರಾಘವನ ಬಂಟ ಹನುಮಂಗೆ ಕಚ್ಚುಟಿಯು ।
ಹೋಗದೇಕೆಂದ ? ಸರ್ವಜ್ಞ ॥ ೮೫೫ ॥

ಭಂಗವಿಲ್ಲದ ಬದುಕು । ತಿಂಗಳಿದ್ದರೆ ಸಾಕು ।
ಅಂಗಜನಳಿದು ಹನುಮನೋಡಿದನೆಂಬ ।
ಭಂಗಹಿಂಗುವದೆ? ಸರ್ವಜ್ಞ ॥ ೮೫೬ ॥

ರಾವಣ

ಹತ್ತು ತಲೆಗಳು ಅವಗೆ । ಸುತ್ತಲೂ ವಾರಿಧಿಯು ।
ಮತ್ತೆ ತ್ರಿಕೂಟ ಗಿರಿದುರ್ಗ, ರಾವಣನಿ ।
ಗೆತ್ತಣದು ಕೇಡು! ಸರ್ವಜ್ಞ ॥ ೮೫೭ ॥

ಎತ್ತಣದ ಲಂಕೆಯದು । ಎತ್ತಣಾಯೋಧ್ಯೆಯು ।
ಹತ್ತಿರದ ನಾಡಿನೊಳಗಲ್ಲ, ರಾವಣನಿ ।
ಗೆತ್ತಣದು ಕೇಡು! ಸರ್ವಜ್ಞ ॥ ೮೫೮ ॥

ಕಡಲೇಳು ಸುತ್ತಲೂ । ನಡುವೆ ಲೋಹದ ಕೋಟೆ ।
ಕಡಲಳಿದು ಗಿರಿಯುಪುರ ಸುಡಲು ವಿಧಿಯಿಂದ ।
ಬಿಡಿಸಿದವರಾರು ? ಸರ್ವಜ್ಞ ॥ ೮೫೯ ॥

ಈರಯ್ದು ತಲೆಯುವಗೆ । ಊರು ಒಪ್ಪುವ ಲಂಕೆ ।
ವಾರಿಧಿಯು ಕಟ್ಟುವಡೆಯಿತ್ತು ಬಂಧನಕೆ ।
ಬಾರದವರಾರು ? ಸರ್ವಜ್ಞ ॥ ೬೬೦ ॥

ಒಂದು ಒಂಭತ್ತು ತಲೆ । ಸಂದ ತೋಳಿಪ್ಪತ್ತು ।
ಒಂದಾಗಿ ಕೇಡ ಮಾಡಿದವು, ವಿಧಿ ಕೂಡಿ ।
ಬಂದ ಕಾಲಕ್ಕೆ ಸರ್ವಜ್ಞ ॥ ೬೬೧ ॥

ಕೇಡು ಬಹ ಕಾಲಕ್ಕೆ । ಕೂಡುವವೆ ಬುದ್ಧಿಗಳು ! ।
ಕೋಡಗನು ಲಂಕೆ ಸುಡುವಾಗ ರಾವಣನು ।
ಆಡಕಾದಿಹನೆ ? ಸರ್ವಜ್ಞ ॥ ೬೬೨ ॥

ಕಡಲಿದ್ದು ಸುತ್ತಲೂ । ಬಿಡದೆ ಬಂದುದು ಮಾರಿ ।
ಘುಡಘುಡಿಸಿ ಕಡಿವ ರಕ್ಕಸರ ಪಡೆಯೆಲ್ಲ ।
ಹುಡಿಯಾದುದೇಕೆ ? ಸರ್ವಜ್ಞ ॥ ೬೬೩ ॥

ಪಾಂಡವರು

ಮಂದರಧರನಿಂದ್ರ । ಗಂಡುಗಲಿಗಳು ಪಾಂಡು ।
ನಂದನರಿರ್ದು ಮಡಿದನಭಿಮನ್ಯು, ವಿಧಿ ।
ಯಂದವನು ನೋಡ ! ಸರ್ವಜ್ಞ ॥ ೬೬೪ ॥

ತಂದೆಯರ್ಜುನ ಭೀಮ । ಮಂದರಧರ ಮಾವ ।
ಮುಂದಿದ್ದು ಅಳಿದನಭಿಮನ್ಯು, ವಿಧಿ ಮಾಡಿ ।
ದಂದವನು ನೋಡ ! ಸರ್ವಜ್ಞ ॥ ೬೬೫ ॥

ಅಂತಿರ್ದರಿಂತಿರ್ದ । ರೆಂತಿರ್ದರೆನಬೇಡ ।
ಕುಂತಿಯ ಸುತರು ತಿರಿದುಣಲು ಮಿಕ್ಕವರು ।
ಎಂತಿರ್ದಡೇನು ? ಸರ್ವಜ್ಞ ॥ ೬೬೬ ॥

ಹೆತ್ತಾತನರ್ಜುನನು । ಮುತ್ತಯ್ಯ ದೇವೇಂದ್ರ ।
ಮತ್ತೆ ಮಾತುಲನು ಹರಿಯಿರಲು ಅಭಿಮನ್ಯು ।
ಸತ್ತನೇಕಯ್ಯ ? ಸರ್ವಜ್ಞ ॥ ೬೬೭ ॥

ಆಯ್ವರನು ಹಡೆದೆಂದು । ಒಯ್ಯಾರದಿರೆ ಕುಂತಿ ।
ಆಯ್ವರೂ ಹೋಗಿ ವಿರಾಟರಾಯನಲಿ ।
ಗೆಯ್ವರಾಗಿರರೆ? ಸರ್ವಜ್ಞ ॥ ೮೬೮ ॥

ಶೂದ್ರಕ

ಅಡಗಿರ್ದ ಶೂದ್ರಕನ । ಹಿಡಿ ತಂದು ಕೊಲಿಸಿತ್ತು ।
ಪೊಡವಿಗತ್ಯಧಿಕ ಬಲವಂತ ರಾವಣನ ।
ಮಡುಹಿತ್ತು ವಿಧಿಯು ಸರ್ವಜ್ಞ ॥ ೮೬೯ ॥
ನೋಡೆ! ಶೂದ್ರಕ ವೀರ। ಓಡುವರೆ ಕಾಲಿಲ್ಲ ।
ಓಡಿ, ತಾ ತೇಜಿ ಕೊಲ್ಲಿಸಿತು, ವಿಧಿಯ ಮುಂ ।
ದೋಡುವವರಾರು? ಸರ್ವಜ್ಞ ॥ ೮೭೦ ॥
ಈ ದೇಶ ಒಲ್ಲೆಂದ । ಾದೇಶ ಬಿಡದಯ್ಯ ।
ಆ ದೇಶದಿರ್ದ ಶೂದ್ರಕನ ಕಾಂಚಿಯಲಿ ।
ಛೇದಿಸಿತು ವಿಧಿಯು ಸರ್ವಜ್ಞ ॥ ೮೭೧ ॥

ದುರ್ಬುದ್ಧಿ ಕೂಡುವದು ಕೇಡಿಗೆ

ಅಕ್ಕೆಯಿಂ ತೆಂಗು, ಜಾ । ನಕ್ಕೆಯಿಂ ಲಂಕೆಯು ।
ಮಕ್ಕೆಯಿಂ ಕಣಿಕ ಕೆಡುವಂತೆ ದುರ್ಬುದ್ಧಿ ।
ಹೊಕ್ಕಲ್ಲಿ ಕೇಡು ಸರ್ವಜ್ಞ ॥ ೮೭೨ ॥
ಕೂಡುವದು ದುರ್ಬುದ್ಧಿ । ಕೇಡು ಬಹ ಕಾಲಕ್ಕೆ ।
ನಾಡೇಂದ್ರ, ವನವು ಸುಡುವಾಗ ಅಗ್ನಿಯನು ।
ಓಡಿಸದೆ ಹೋದ! ಸರ್ವಜ್ಞ ॥ ೮೭೩ ॥
ಕೇಡು ತಾ ಒರುವಲ್ಲಿ । ಕೂಡುವದು ದುರ್ಬುದ್ಧಿ ।
ಕಾಡಿನಲಿ ಕಿಚ್ಚು ಒಗೆದಾಗ ಮಾರುತನು ।
ಕೂಡಿಕೊಂಡಂತೆ ಸರ್ವಜ್ಞ ॥ ೮೭೪ ॥

ಎಲ್ಲಿ ಹೋದರೂ ವಿಧಿ ಬಿಡದು

ಗಟ್ಟದಲಿ ಬೆಟ್ಟದಲಿ । ಇಟ್ಟೆಡೆಯ ಇರುಬಿನಲಿ ।
ಕೆಟ್ಟುಳಿದು ಬಂದೆನೆನಬೇಡ, ವಿಧಿ ಕಾಣ ।
ದಷ್ಟದಿಕ್ಕುಂಟೆ? ಸರ್ವಜ್ಞ ॥ ೮೭೫ ॥

ಕೆಡಕು ಕೂಡುವದೆಂದು । ಅಡವಿಗೋಡಲು ಬೇಡ ।
ಕಡುಭಯದಿ ಭಂಗಗೊಳಬೇಡ, ವಿಧಿಯರಿಯ ।
ದಡವಿಯೊಂದುಂಟೆ? ಸರ್ವಜ್ಞ ॥ ೮೭೬ ॥

ಎಲ್ಲ ತೀರ್ಥದೊಳಿರಲು । ಬಲ್ಲಿದರ ಮೊರೆ ಹೊಗಲು ।
ಕಲ್ಲು ಮಾಳಿಗೆಯ ಒಳಗಿರಲು ವಿಧಿ ಬಂದು ।
ಕೊಲ್ಲದೆ ಬಿಡದು ಸರ್ವಜ್ಞ ॥ ೮೭೭ ॥

ಎಲ್ಲೆಲ್ಲಿ ಕರ್ಮವಿ । ದ್ದಲ್ಲಲ್ಲಿ ಸೆರೆ ಸಾರಿ ।
ನಿಲ್ಲದವರೊಡನೆ ಬರುತಿಪ್ಪ ವಿಧಿಯೆದುರು ।
ನಿಲ್ಲುವವರಾರು? ಸರ್ವಜ್ಞ ॥ ೮೭೮ ॥

ಹಿಂದೆ ಮಾಡಿದ ಕರ್ಮ । ಮುಂದಿಗೂ ಬೆಂಬಿಡದು ।
ಬಂದ ಭೋಗವನು ತಿಂದು ತೀರಲೆ ಬೇಕು ।
ನೊಂದೆನೆನಬೇಡ ಸರ್ವಜ್ಞ ॥ ೮೭೯ ॥

ಆಡುವ ಮಕ್ಕಳಿಗೆ । ಊಡುವ ತಾಯಂತೆ ।
ಮಾಡಿದ ಕರ್ಮ ಬಳಿವಿಡಿದು ಪಿಡಿತಂದು ।
ಊಡುತ್ತಲಿಹುದು ಸರ್ವಜ್ಞ ॥ ೮೮೦ ॥

ಕಾಯದ ಕರ್ಮವನು । ಕಾಯದಿಂದುಣಬೇಕು ।
ಕಾಯಗುಣಧರ್ಮ ಕರ್ಮಗಳು ಹರಿಬೊಮ್ಮ ।
ರಾಯರಿಗು ಬಿಡವು ಸರ್ವಜ್ಞ ॥ ೮೮೧ ॥

ಸುರಿಗೆಗಳು ಸುತ್ತಿರಲಿ । ಹರಿಗೆಯೊಡಲೊಳಗಿರಲಿ ।
ಸರಸಿಜೋದ್ಭವನ ಮರೆಯಿರಲಿ ವಿಧಿಯವನ ।
ಇರಿಯದೆ ಬಿಡದು ಸರ್ವಜ್ಞ ॥ ೮೮೨ ॥

ತಪವ ತಾ ಮಾಡಿರ್ದ್ದು । ಜಪವ ಬಿಡದೆಣಿಸಿರ್ದ್ದು ।
ಉಪವಾಸ ದಾನ ದಯವಿರ್ದ್ದು ಅಂತಕನ ।
ವಿಪರೀತ ಬಿಡದು । ಸರ್ವಜ್ಞ ॥ ೮೮೩ ॥

ವಾರಣಾಸಿಯಲಿರಲಿ । ವಾರಿಧಿಯ ನಡುವಿರಲಿ ।
ವೀರಭದ್ರನ ನೆರೆಯಿರಲಿ ವಿಧಿಯಾಟ ।
ತೋರದೆ ಬಿಡದು ಸರ್ವಜ್ಞ ॥ ೮೮೪ ॥

ಮಾಡಿದ ಕರ್ಮ ತಾ । ನೂಡಿದಲ್ಲದೆ ಬಿಡದು ।
ಕೇಡಿಯನು ಕೊಂದ ಮಾಂಡವ್ಯನೆದೆಯಲ್ಲಿ ।
ಮೂಡಿತ್ತು ಶೂಲ ಸರ್ವಜ್ಞ ॥ ೮೮೫ ॥

ಪ್ರಾರಬ್ಧ ಕರ್ಮವದು । ಆರನೂ ಬಿಡದಯ್ಯ ।
ಪಾರಾಂತನಪ್ಪ ಯೋಗಿಯ ಒಡಲಲ್ಲಿ ।
ಊರಿಕೊಂಡಿಹುದು ಸರ್ವಜ್ಞ ॥ ೮೮೬ ॥

ಅದೃಷ್ಟವೆಂದರೆ ಯಾರಿಗೂ ಕಾಣದ್ದು

ಏನಾನು ನೆವದಿಂದ । ತಾನೆ ಬಪ್ಪುದು ಸಿರಿಯು ।
ಕಾನನದಿ ಒಂದು ಕರಿ ಹುಟ್ಟಿ ಪಟ್ಟಕ್ಕೆ ।
ತಾನೆ ಬಂದಂತೆ ! ಸರ್ವಜ್ಞ ॥ ೮೮೭ ॥

ಏನಾನು ನೆವನದಲಿ । ತಾನೆ ಪೋಪುದು ಸಿರಿಯು ! ।
ಕಾನನದೊಳಗೆ ಕಿಡಿ ಹುಟ್ಟಿ ಕಾಡೆಲ್ಲ ।
ತಾನೆ ಬೆಂದಂತೆ ! ಸರ್ವಜ್ಞ ॥ ೮೮೮ ॥

ಬುದ್ಧಿ ತಾ ಕರ್ಮವನು । ತಿದ್ದಲ್ಕೆ ಅಸದಳವು ।
ಬುದ್ಧಿ ಬಲಶಾಲಿಯೆನಬೇಡ, ಕರ್ಮ ತಾ ।
ಗುದ್ದಿ ಕೊಲ್ಲುವದು ಸರ್ವಜ್ಞ ॥ ೮೮೯ ॥

ಆನೆ ಬಲ ತನಗಿದ್ದು । ಏನು ಮಾಡದು ವಿಧಿಗೆ ।
ಆನೆ ಮಾವಟಿಗನೊಡಗೂಡಿ ಅಂಕುಶದಿ ।
ತಾನೆ ಬಂದಂತೆ ಸರ್ವಜ್ಞ ॥ ೮೯೦ ॥

ಮೇಲಾಗುವಾಗ ಸರ್ವವೂ ಅನುಕೂಲ

ಭೃಂಗ ಹಂಸವು ಆಕ್ಕು । ಶೃಂಗಿ ಮಾಣಿಕವಕ್ಕು ।
ಹಂಗಳಿದ ಸೀರೆ ಮುಡಿಯುಕ್ಕು, ಕರ್ಮ ತಾ ।
ಹಿಂಗುವ ದಿನಕೆ ಸರ್ವಜ್ಞ ॥ ೮೯೧ ॥

ಇಂಗು ಕರ್ಪೂರವಕ್ಕು । ಬಿಂಗು ಬಜ್ಜರವಕ್ಕು ।
ಅಂಗಳದ ಶಿಲೆಯು ಹೊನ್ನಕ್ಕು, ಕರ್ಮ ತಾ ।
ಹಿಂಗುವ ದಿನಕೆ ಸರ್ವಜ್ಞ ॥ ೮೯೨ ॥

ಮೂರಿಟ್ಟರಾರಕ್ಕು । ಆರು ಹನ್ನೆರಡಕ್ಕು ।
ಹೇರುವ ಗೊಡ್ಡು ಹಯನಕ್ಕು, ಕರ್ಮ ತಾ ।
ಹಾರುವ ದಿನಕೆ ಸರ್ವಜ್ಞ ॥ ೮೯೩ ॥

ಭೋಗವಿಲ್ಲದ ದಿನಕೆ । ಆಗಿರ್ದ ಧನ ಪೋಕು ।
ಭೋಗತನಗಿದ್ದ ದಿನಕೆದ್ದು ಹೋದ ಧನ ।
ವಾಗಲೇ ಬಕ್ಕು ಸರ್ವಜ್ಞ ॥ ೮೯೪ ॥

ಒಂದೊಂದು ಕಾಲಕ್ಕೆ । ಒಂದೊಂದು ಪರಿಯಕ್ಕು ।
ಹಂದಿಯು ಮರಿಯು ಕರಿಯಕ್ಕು, ಕೋಳಿ ತಾ ।
ಕೆಂಬೋತವಕ್ಕು ಸರ್ವಜ್ಞ ॥ ೮೯೫ ॥

ನಾಗುವ ಕಾಲಕ್ಕೆ । ಸಾಗರವು ಬಯಲಕ್ಕು ।
ಸಾಗದ ದಿನಕೆ ಸುರಿದಿರ್ದ ಶಿವನೊಲುಮೆ ।
ಹೋಗಿಕ್ಕು ಕಾಣೊ ಸರ್ವಜ್ಞ ॥ ೮೯೬ ॥

### ಕೇಡುಗಾಲಕ್ಕೆ ಸಹಾಯವಿಲ್ಲ

ಬಲಹೋದ ಕಾಲಕ್ಕೆ । ನೆಲವೆದ್ದು ಬಡಿಯುವದು ।
ಕುಲ, ಛಲ, ಕಲಹ, ಸಿರಿಯು, ಸಂಗ್ರಾಮಗಳು ।
ಬಲವಿರುವ ತನಕ ಸರ್ವಜ್ಞ ॥ ೮೯೭ ॥

ಸಂದವರ ಸುಟ್ಟಿಹರು । ಬೆಂದವರ ಬಯ್ದಿಹರು ।
ಬಂಧುಗಳಿದ್ದು ಬಡಿದಿಹರು ವಿಧಿಕೂಡಿ ।
ಬಂದ ಕಾಲಕ್ಕೆ ಸರ್ವಜ್ಞ ॥ ೮೯೮ ॥

ಎಂಟಿಟ್ಟರೆರಡಕ್ಕು । ನೆಂಟರುರೆ ಹಗೆಯಕ್ಕು ।
ದಂಟುಗಳೆದ್ದು ಹಾವಕ್ಕು, ಕರ್ಮ ತಾ ।
ನಂಟುವ ದಿನಕೆ ಸರ್ವಜ್ಞ ॥ ೮೯೯ ॥

ವಿಧಿ ಬೈದು ಫಲವಿಲ್ಲ

ಮುನ್ನ ತಾ ಸುಕೃತವ ಚೆನ್ನಾಗಿ ಮಾಡದಲೆ
ಬನ್ನವ ಪಟ್ಟು ಬಯ್ಯಲ್ಕೆ ಶಿವನೇನು ।
ಕನ್ನವಿಕ್ಕಿದನೆ ? ಸರ್ವಜ್ಞ ॥ ೯೦೦

ಕೊಟ್ಟು ಬಾಳದೆ ಬಾಯ ! ಬಿಟ್ಟಲ್ಲಿ ಫಲವೇನು ?
ಪಟ್ಟದರಸಿನ ಮಗನಿಗೂ ವಿಧಿಯು ತಾ ।
ಬಿಟ್ಟಿಲ್ಲ ನೋಡ ! ಸರ್ವಜ್ಞ ॥ ೯೦೧ ॥

ಕೊಟ್ಟು ಮುಟ್ಟಲು ಇಲ್ಲ । ಇಟ್ಟು ಪೂಜಿಸಲಿಲ್ಲ ।
ಸಿಟ್ಟಿನಲಿ ಶಿವನ ಬಯ್ದರೆ ಅವ ತನ್ನ ।
ಗುಟ್ಟು ಕೊಟ್ಟಾನೆ ? ಸರ್ವಜ್ಞ ॥ ೯೦೨ ॥

ಬಂದಂತೆ ಹೋಗುವವನೇ ಬಂಟ

ಕಂಡದ್ದು ತಿರವಾಗಿ । ಉಂಡದ್ದು ಬರಿದಾಗಿ ।
ಖಂಡಿತದಿ ನಡೆವ ಪುರುಷ ತಾ ಮೃತ್ಯುವಿನ ।
ಗಂಡನೆಂದರಿಗು ಸರ್ವಜ್ಞ ॥ ೯೦೩ ॥

ನಡೆವುದನೆ ತಾ ಹಾಸಿ । ನಡೆವುದನೆ ತಾ ಹೊದೆದು ।
ನಡೆಯುವ ಪಥದಿ ಅಡಿಯಿಡಲು ವಿಧಿಯು ತಾ ।
ತಡೆಯದೋಡುವದು ! ಸರ್ವಜ್ಞ ॥ ೯೦೪ ॥

ಬಂದುದನೆ ತಾ ಹಾಸಿ । ಬಂದುದನೆ ತಾ ಹೊದೆದು ।
ಬಂದುದೆಲ್ಲವನು ನುಂಗಿದರೆ ವಿಧಿಕರ್ಮ ।
ನಂದಿ ಹೋಗುವದು ಸರ್ವಜ್ಞ ॥ ೯೦೫ ॥

ಈಶ್ವರೇಚ್ಛೆಯಂತೆ ಇರು

ಆನೊಂದು ಮಾಡುವೆನು । ಆನೊಂದು ಹೂಡುವೆನು ।
ಆನೊಂದು ಮಾಡಲಾನಂದವೆನಲು ಶಿವ ।
ತಾನೊಂದು ಮಾಳ್ಪ ! ಸರ್ವಜ್ಞ ॥ ೯೦೬ ॥

ಅಂತಿಕ್ಕು ಇಂತಿಕ್ಕು | ಎಂತಿಕ್ಕು ಎನಬೇಡ |
ಚಿಂತಿಸಿ ದೇಹ ಬಡವಕ್ಕು, ಶಿವನಿರಿಸಿ |
ದಂತಿಹುದೆ ಲೇಸು ಸರ್ವಜ್ಞ || ೯೦೭ ||

## ೧೫. ಬ್ರಾಹ್ಮಣ ಪದ್ಧತಿ

### ಬಾಹ್ಯಜ್ಞಾನಖಂಡನ

#### ವೇದ

ಗಾಯತ್ರಿ ವೇದಕ್ಕೆ | ತಾಯೆಂದು ಹೊಗಳಿರಲು |
ವಾಯಕ್ಕೆ ದ್ವಿಜರು ಹಲವು ಶಾಖೆಗೆ ತಾವು |
ಹಾಯುತಿಹರೇಕೆ? ಸರ್ವಜ್ಞ || ೯೦೮ ||

ವೇದವೇ ಹಿರಿದೆಂದು | ವಾದವನು ಮಾಡುವಿರಿ |
ವೇದದಲೇನು ಅರಿದಿಹುದು? ಅನುಭವಿಯು |
ವೇದವೇ ವೇದ! ಸರ್ವಜ್ಞ || ೯೦೯ ||

ಓದು ವಾದಗಳಿಂದ | ವೇದ ತಾ ಘನವಹುದೆ? |
ವೇದದ ಹೃದಯವರಿಯದಲೆ ದ್ವಿಜರೆಲ್ಲ |
ಬೂದಿಯಾಗಿಹರು! ಸರ್ವಜ್ಞ || ೯೧೦ ||

ತೋರಿ ವೇದವ ಕೊಟ್ಟು | ಸಾರಿಹುದು ಜಗವೆಲ್ಲ |
ವೀರ ಮಾರ್ತಂಡನೊಡನೋಡಿದಾವಾಜಿ |
ಆರಿಂದಲಧಿಕ! ಸರ್ವಜ್ಞ || ೯೧೧ ||

#### ಮಹಾಭಾರತ

ಹಾದರದ ಕಥೆಯನ್ನು | ಸೋದರರ ವಧೆಯನ್ನು |
ಆದರಿಸಿ ಪುಣ್ಯ ಕಥೆಯೆಂದು ಕೇಳುವರು |
ಮಾದಿಗರು ನೋಡ! ಸರ್ವಜ್ಞ || ೯೧೨ ||

## ಬಾಹ್ಯಾಚಾರ ಖಂಡನ

### ಊಟ

ಕಾಲದಲಿ ಕಾಲು ತೊಳೆ । ದೇಳೆಂಟೆ ಮಾಡುವದು ।
ಕಾಲವದು ತಪ್ಪಿ ನೂರೆಂಟ ಮಾಡುವದು ।
ಹಾಳು ಕಾಣಯ್ಯ ಸರ್ವಜ್ಞ ॥ ೯೧೩ ॥

ಪಕ್ಕಕ್ಕೊಂದುಪವಾಸ । ಪುಕ್ಕಟೆ ಶ್ರೀ ತೊಲಸಿ ।
ಸಿಕ್ಕಿ ಸಿಕ್ಕಿದಲಿ ಹರಿನಾಮ, ಭವಭವದಿ ।
ಸಿಕ್ಕಿ ನಾಯುವದು ! ಸರ್ವಜ್ಞ ॥ ೯೧೪ ॥

ತೋರಿರ್ದ್ದ ದ್ವಾದಸಿಯ । ವಿಾರಿ ಮಾಡಿದ ಕೃತಿಯು ।
ನೇರಿದ ಪುರುಷ ಕಿರಿಯೆಂದು ಪರನನ್ನು ।
ನಾರಿದವಳಂತೆ ಸರ್ವಜ್ಞ ॥ ೯೧೫ ॥

ತೊರೆಯ ಬಲ್ಲಡೆ ಧರ್ಮ । ಒರತೆಯು ತೊರೆಯಂತೆ ।
ತೊರೆಯಲರಿಯದೆ ತೊರೆದಡೆ ತೊರೆದುಂಬಿ ।
ಹರಿದು ಬಂದಂತೆ ಸರ್ವಜ್ಞ ॥ ೯೧೬ ॥

### ಸ್ನಾನ

ಮಾಗದಲಿ ಮಿಂದಿಹನು । ಮೂಗ ತಾ ಹಿಡಿದಿಹನು ।
ಯೋಗಧ್ಯಾನಗಳ ತೊರೆದಿಹನು, ಹಾರುವನು ।
ಭೋಗಿಯಾಗಿಹನು ! ಸರ್ವಜ್ಞ ॥ ೯೧೭ ॥

ಮಿಂದುಂಬ ಹಾರುವಗೆ । ಸಂಧ್ಯವಂದನೆಯೇಕೆ ? ।
ಮಿಂದು ಮೈಲಿಗೆಯನುಡಲೇಕೆ ? ಸ್ನಾನದ ।
ಸಂದೇಹವೇಕೆ ? ಸರ್ವಜ್ಞ ॥ ೯೧೮ ॥

ಬೆಂದ ಮನೆಬಾಗಲಿಗೆ । ಮುಂದೆ ತೋರಣವೇಕೆ ? ।
ಸಂದ ಶೂದ್ರತಿಯ ಒಡನುಂಬ ಹಾರುವಗೆ ।
ಮಿಂದೂಟವೇಕೆ ? ಸರ್ವಜ್ಞ ॥ ೯೧೯ ॥

ಹಂದಿಗಂದಣವೇಕೆ? । ಮಂದಮತಿ ಸುತನೇಕೆ? ।
ಕುಂದುಗುಲದವಳ ಹೊಂದಿದ ಹಾರುವಗೆ ।
ಗಂಧವೇಲೇಕೆ? ಸರ್ವಜ್ಞ ॥ ೯೨೦ ॥

ನೀರ ಮುಳುಗಿದ ವಿಪ್ರ । ಹಾರುವಡೆ ಸ್ವರ್ಗಕ್ಕೆ ।
ಹಾರುವನೋಲು ಮುಳುಗಿಪ್ಪ ಕಪ್ಪೆ ತಾ ।
ಹಾರದೇಕೆಂದ? ಸರ್ವಜ್ಞ ॥ ೯೨೧ ॥

ನಿತ್ಯ ನೀರ್ಮುಳುಗುವನು । ಹತ್ತಿದಡೆ ಸ್ವರ್ಗವನು ।
ಎತ್ತ ಜನ್ಮವನು ಜಲದೊಳಿಪ್ಪಾಕಪ್ಪೆ ।
ಹತ್ತದೇಕೆಂದ? ಸರ್ವಜ್ಞ ॥ ೯೨೨ ॥

ಸಂಧ್ಯಾ

ಸಂಜೆಯು ವಂದನೆಯು । ಅಂಜದಲೆ ವಾಸುವದು ।
ಸಂಜೆಯುಂಜಿಕೆಯು ನೊಡಗೂಡಲಾಸಂಜೆ ।
ನಂಜಿನಂತಕ್ಕು! ಸರ್ವಜ್ಞ ॥ ೯೨೩ ॥

ಗಂಧಾಕ್ಷತೆ

ಮುಟ್ಟಿ ಶ್ರೀ ಗಂಧವನು । ಇಟ್ಟು ತಾ ನೊಸಲೊಳಗೆ ।
ನೆಟ್ಟನೆಯೆ ಸ್ವರ್ಗ ಪಡೆವಡೆ ಸಾಣೆಕಲ್ ।
ಕೆಟ್ಟ ಕೇಡೇನು? ಸರ್ವಜ್ಞ ॥ ೯೨೪ ॥

ಅಟ್ಟಿಟ್ಟಿ ಮುಟ್ಟಿಯನು । ಗಟ್ಟಿಯಾಗಿಯೆ ಬಡಿದು ।
ನೆಟ್ಟನೆ ಸ್ವರ್ಗ ಪಡೆಯುವಡೆ ಗುದ್ದೀಡಿ ।
ಕೆಟ್ಟ ಕೇಡೇನು? ಸರ್ವಜ್ಞ ॥ ೯೨೫ ॥

ಸುಟ್ಟ ಬೂದಿಯು ತಂದು । ದಟ್ಟವಾಗಿಯೆ ಬಡಿದು ।
ಶ್ರೇಷ್ಠ ಸ್ವರ್ಗವನು ಅಡರುವಡೆ ಕತ್ತೆ ತಾ ।
ಕೆಟ್ಟ ಕೇಡೇನು? ಸರ್ವಜ್ಞ ॥ ೯೨೬ ॥

### ಯಜ್ಞೋಪವೀತ

ಮೂರೆಳೆಯನುಟ್ಟಾತ । ಹಾರುವಡೆ ಸ್ವರ್ಗಕ್ಕೆ ।
ನೂರೆಂಟು ಎಳೆಯ ಕವುದಿಯನು ಹೊದ್ದಾತ ।
ಹಾರನೇಕಯ್ಯ ? ಸರ್ವಜ್ಞ ॥ ೯೨೭ ॥

## ಬಾಹ್ಯ ಭಕ್ತಿ ಖಂಡನ

### ಕರ್ಮವು ಕೆಸರಲ್ಲ

ಹಿರಿದು ಕರ್ಮವ ಮಾಡಿ । ಹರಿವ ನೀರೊಳು ಮುಳುಗೆ ।
ಕರಗುವದೆ ಪಾಪ ? ತಾ ಮುನ್ನ ಮಾಡಿದ್ದು ।
ಎರೆಯ ಕಲ್ದಿಂಟೆ ? ಸರ್ವಜ್ಞ ॥ ೯೨೮ ॥

ಮೀಪರೇ ಪೋಪರೇ । ಪಾಪವೇನದು ಕೆಸರೆ ? ।
ಮೀಪರೆ ಮೈಯ್ಯಮಲಪೋಪುದಾಪಾಪ ।
ಲೇಪವಾಗಿಕ್ಕು ಸರ್ವಜ್ಞ ॥ ೯೨೯ ॥

ಮಿಂದು ಪೋಪರೆ ಪಾಪ । ಮುಂದನ ಕೆಸರಲ್ಲ ।
ಮಿಂದರೆ ಮೈಯ್ಯಮಲ ಪೋಪುದಾಪಾಪ ।
ವೆಂದಿನಂತಿಹುದು ಸರ್ವಜ್ಞ ॥ ೯೩೦ ॥

ಪಾಪ ಹೋಯಿತು ಎಂದು । ಸೋವಾನಗಳನೇರಿ ।
ಕೋಪ ಕರ್ಮಗಳ ಬಿಡದಿರೆ ಆದು ವಜ್ರ ।
ಲೇಪದಂತಿಹುದು ! ಸರ್ವಜ್ಞ ॥ ೯೩೧ ॥

ವೇದ ಮಂತ್ರವ ಹೇಳಿ । ಕಾದ ತುಪ್ಪದಿ ತೊಳೆಯೆ ।
ಹಾದರದ ಪಾಪ ಹೋಯ್ತೆಂಬ ಹಾರುವನ ।
ವೋದದೆ ವಿಧಿಯು ? ಸರ್ವಜ್ಞ ॥ ೯೩೨ ॥

### ಯಜ್ಞ ತಿರಸ್ಕಾರ

ಯಾಗದ ನೆವದಿಂದ । ಕೂಗಿ ತಿಂಬರು ಆಡ ।
ಯಾಗದಲಿ ಒಂದು ಬಿಟವಿರಲು ಹೋತುಗಳ ।
ನಾಗಲಿಸುವರೆ ? ಸರ್ವಜ್ಞ ॥ ೯೩೩ ॥

ಕನ್ನೆಯಾಡನು ತಂದು । ಬನ್ನಬಡಿಸುತ ಕೊಂದು ।
ಉನ್ನತವ ಪಡೆವ ವಿಪ್ರನಿಂ ಅಗಸರ ।
ಕುನ್ನಿ ಲೇಸೆಂದ ಸರ್ವಜ್ಞ || ೯೩೪ ||

ಜಪವ ಮಾಡುವ ಜಿಹ್ವೆ । ಉಪಜಿಹ್ವೆಯಾದಂತೆ ।
ಜಪಬೇರೆ, ಹಿಂಸೆಯದು ಬೇರೆ, ಅಂತ್ಯದಿ ।
ಜಪವೆತ್ತ ಹೋಯ್ತು ? ಸರ್ವಜ್ಞ || ೯೩೫ ||

ಆಡತಿಂಬರ್ತಿಯಲಿ । ಮಾಡುವರು ಯಜನವನು ।
ತೀಡಿರಿದು ಹೊಲೆಯರೆನಿಸಪ್ಪ ಹಾರುವರ ।
ಕಾಡಲಿಕ್ಕೆಂದ ಸರ್ವಜ್ಞ || ೯೩೬ ||

ಕನ್ನೆಯಾಡನು ತಿಂದು । ಉನ್ನತವನಡರುವಡೆ ।
ಚೆನ್ನಾಗಿ ಹೆಣನ ಸವಿದಿಪ್ಪ ಶುನಿಯೇಕೆ ।
ಬನ್ನಪಡುತಿಹುದು ? ಸರ್ವಜ್ಞ || ೯೩೭ ||

ಜನ್ನ ವಿದ್ಯವು ಎಂದು । ಕನ್ನೆಯಾಡನು ತಿಂದು ।
ಉನ್ನತದ ಸ್ವರ್ಗ ಪಡೆಯುವಡೆ, ಹಿಂಡಾಡ ।
ತಿನ್ಬನೇಕುಳಿದ ? ಸರ್ವಜ್ಞ || ೯೩೮ ||

ಒಂದಾಡ ತಿಂಬಾತ । ಹೊಂದಿದಡೆ ಸ್ವರ್ಗವನು ।
ಎಂದೆಂದು ಅಜನ ಕಡಿತಿಂಬ ಕಟಿಗ ತಾ ।
ನಿಂದ್ರನೇಕಾಗ ? ಸರ್ವಜ್ಞ || ೯೩೯ ||

ಎಳ್ಳುಗಳ ಮುಳ್ಳುಗಳ । ಕುಳ್ಳಿರ್ದ್ದು ತಾ ಸುಟ್ಟು ।
ನಿಲ್ಲದಲೆ ಸ್ವರ್ಗಕೇರಿದರೆ ಪುರ ಸುಟ್ಟ ।
ಕಳ್ಳನೇಕೇರ ? ಸರ್ವಜ್ಞ || ೯೪೦ ||

ಆಡಿನ ಅಡಿರಜವು । ತೀಡಲಾಗದು ಎಂದು ।
ಆಡನೇ ತಿಂದರಿಹುದಿಂದ್ರ ಪದವೆಂಬ ।
ನಾಡಿದುವೆ ನೋಡ ! ಸರ್ವಜ್ಞ || ೯೪೧ ||

ಬಾಡ ತಿಂಬಾತಂಗೆ । ಆಡೇನು ಆವೇನು? ।
ಕೋಡಗವೇನು? ನರಿಯೇನು? ಮನೆಯಲಿ ।
ದ್ದೊಡನಾಯಿಯೇನು? ಸರ್ವಜ್ಞ ॥ ೯೪೨ ॥

ಆಡತಿಂಬಾತಂಗೆ । ಕಾಡಿನ ಮಿಗವೇನು? ।
ನಾಡಿನ ಹದ್ದು, ನರಿ, ನಾಯ ಮಾಂಸದ ।
ಪಾಡೆಲ್ಲ ಒಂದೆ ಸರ್ವಜ್ಞ ॥ ೯೪೩ ॥

ಇಂಗು ತಿಂಬಾತಂಗೆ । ಕೊಂಬೇನು ಕೊಳಗೇನು? ।
ಸಿಂಗಳಿಕವೇನು, ಹಂಗೇನು? ಬೇಲಿಯ ।
ಮುಂಗಲಿಯದೇನು? ಸರ್ವಜ್ಞ ॥ ೯೪೪ ॥

ಆಡ ಕೊಂದಾ ಪಾಪ । ಕಾಡದಲೆ ಬಿಡುವುದೇ? ।
ನೋಡಿರಾ ದಕ್ಷನೊಡಲಮೇಲಜನತಲೆ ।
ಮೂಡಿರುವದೇಕೆ? ಸರ್ವಜ್ಞ ॥ ೯೪೫ ॥

ಕೊಂದು ತಿನ್ನುವ ಹೊಲೆಯ । ಸೆಂದು ನೀನೆನಬೇಡ ।
ನೊಂದ ಜೀವವನು ತಾನರಿವ ಹಾರುವನು ।
ಕೊಂದಾದ ಹೊಲೆಯ! ಸರ್ವಜ್ಞ ॥ ೯೪೬ ॥

ಕೊಂದು ತಿಂಬಾ ಭಾಷೆ । ಸಂದಿಹುದು ಹೊಲೆಯರಿಗೆ ।
ಸಂದುದಲ್ಲದನು ತಿನ್ನದ ಹಾರುವನು ।
ಕೊಂದನೇಕಯ್ಯ? ಸರ್ವಜ್ಞ ॥ ೯೪೭ ॥

ಅಕ್ಕರವನರಿಯದ । ಸಿಕ್ಕರುಣಿಯುಣುತಿಪ್ಪ ।
ಅಕ್ಕರವರಿದು ಅಜನುಂಬ ದ್ವಿಜ ತನ್ನ ।
ಮಕ್ಕಳನೆ ತಿಂದ! ಸರ್ವಜ್ಞ ॥ ೯೪೮ ॥

ಕೊಂದು ಮಾಡುವ ಧರ್ಮ । ದಂದವನು ಆನೊರೆವೆ ।
ಗಂಧದ ಮರನ ನೆರೆಸುಟ್ಟು ಇದ್ದಿಲನು ।
ತಂದು ಬಡಿದಂತೆ ಸರ್ವಜ್ಞ ॥ ೯೪೯ ॥

ಕೊಲ್ಲಲಾಗದು ಎಂಬು | ದೆಲ್ಲವರ ನೊಲ್ಲಿರಲು |
ಖುಲ್ಲ ಹಾರುವನು ಸ್ವರ್ಗಕ್ಕೆ ಬಿಡದಾಡ |
ಕೊಲ್ಲುತಿಹನೇಕೆ? ಸರ್ವಜ್ಞ ‖ ೯೫೦ ‖

ಅಡಗಟ್ಟೆ ಮಡಕೆಯನು | ಅಡೆಕಿನಲಿ ಮಡಗಿಟ್ಟು |
ಅಡಗಿನರುಚಿಯ ನಾನರಿಯೆನೆಂಬುವಗೆ |
ಮಡಕೆಯೇ ಸಾಕ್ಷಿ ಸರ್ವಜ್ಞ ‖ ೯೫೧ ‖

ಆವಾವ ಜೀವವನು | ಹೇವವಿಲ್ಲದೆ ಕೊಂದು |
ನಾವಾಗ ಶಿವನ ನೆನೆದಿಹರೆ ಅವ ಬಂದು |
ಕಾವನೇ ಹೇಳು? ಸರ್ವಜ್ಞ ‖ ೯೫೨ ‖

## ಕುಲ ಖಂಡನ

### ಹೊಲೆಯನು ಯಾರು

ಸತ್ತುದನು ತಿಂಬಾತ | ಎತ್ತಣದ ಹೊಲೆಯನು? |
ಒತ್ತೊತ್ತಿ ಜೀವಿಯ ಕೊರಳರಿದು ತಿಂಬಾತ |
ಉತ್ತಮದ ಹೊಲೆಯ ಸರ್ವಜ್ಞ ‖ ೯೫೩ ‖

ಹೊಲೆಯ ಮಾದಿಗರುಂಡು | ತೊಲಗಿಟ್ಟ ತೊಗಲು ಸಲೆ |
ಕುಲಜರೆಂಬವರಿಗುಣಲಾಯ್ತು ಹೊಲೆಯರ |
ಕುಲವಾವುದಯ್ಯ? ಸರ್ವಜ್ಞ ‖ ೯೫೪ ‖

ಪಕ್ಕಲೆಯ ಸಗ್ಗಲೆಯೊ | ಟಿಕ್ಕಿರ್ದವಾರಿಯನು |
ಚೊಕ್ಕಟವೆಂದು ಕುಡಿಯುತಿರೆ, ಹೊಲೆಯರು |
ಚಿಕ್ಕವರು ಹೇಗೆ? ಸರ್ವಜ್ಞ ‖ ೯೫೫ ‖

ಕುಲವಿಲ್ಲ ಯೋಗಿಗೆ | ಛಲವಿಲ್ಲ ಜ್ಞಾನಿಗೆ |
ತೊಲೆ ಕಂಬವಿಲ್ಲ ಗಗನಕ್ಕೆ, ಸ್ವರ್ಗದಲಿ |
ಹೊಲಗೇರಿಯಿಲ್ಲ ಸರ್ವಜ್ಞ ‖ ೯೫೬ ‖

ಎಲುವಿಲ್ಲ ನಾಲಿಗೆಗೆ । ಬಲವಿಲ್ಲ ಬಡವಂಗೆ ।
ತೊಲೆ ಕಂಬವಿಲ್ಲ ಗಗನಕ್ಕೆ, ದೇವರಲಿ ।
ಕುಲಭೇದವಿಲ್ಲ ಸರ್ವಜ್ಞ ॥ ೯೫೭ ॥

ಸಾದರಿಗೆ ಮಾದರಿಗೆ । ಭೇದವೇನಿಲ್ಲಯ್ಯ ।
ಮಾದಿಗನು ತಿಂಬ ಸತ್ತುದನು, ಸಾದತನ ।
ಗಾದವರತಿಂಬ ಸರ್ವಜ್ಞ ॥ ೯೫೮ ॥

ನತ್ತ ಕತ್ತೆಯು ಹೊತ್ತ । ರೆತ್ತಣದ ಹೊಲೆಯನು? ।
ಉತ್ತಮನೆಂದು ಹೆರರೊಡವೆ ಹೊತ್ತರವ ।
ನಿತ್ಯವೂ ಹೊಲೆಯ ಸರ್ವಜ್ಞ ॥ ೯೫೯ ॥

ಹಾರುವಗೆ ಹೆಗ್ಗಳಿಕೆ ಯಾಕೆ?

ಹೊಲೆಗೇರಿಯಲಿ ಹುಟ್ಟಿ । ಎಲುವಿನಗೃಹವಾಸ ।
ಸಲೆ ಧರ್ಮ ದಾನಿಯೆನಿಸದೆ ಹಾರುವನು ।
ಕುಲಕೆ ಹೋರಿಹನು ಸರ್ವಜ್ಞ ॥ ೯೬೦ ॥

ಮುಟ್ಟಾದ ಹೊಲೆಯೊಳಗೆ । ಹುಟ್ಟಿಹುದು ಜಗವೆಲ್ಲ ।
ಮುಟ್ಟಬೇಡೆಂದು ತೊಲಗುವ ಹಾರುವನು ।
ಹುಟ್ಟಿದನು ಎಲ್ಲಿ? ಸರ್ವಜ್ಞ ॥ ೯೬೧ ॥

ಮುಟ್ಟುಗಂಡವಳನ್ನು । ಮುಟ್ಟಲೊಲ್ಲರು ನೋಡ ।
ಮುಟ್ಟು ತಾ ತಡೆದು ಹುಟ್ಟಿದ ದೇಹವನು ।
ಮುಟ್ಟುತಿಹರೇಕೆ? ಸರ್ವಜ್ಞ ॥ ೯೬೨ ॥

ಮಲವು ದೇಹದಿ ನೋರಿ । ಹೊಲಸು ಮಾಂಸವು ನಾರಿ ।
ಹೊಲೆಬಿಲದ ಹೇಯ ದೇಹದಲಿ ಹಾರುವರು ।
ಕುಲವನೆಣಿಸುವರು! ಸರ್ವಜ್ಞ ॥ ೯೬೩ ॥

ಉತ್ತಮರು ಪಾಲ್ಗಡಲೊ । ಕಿತ್ತಿಹರೆ ಜನ್ಮವನು? ।
ಉತ್ತಮರು ಅಧಮರೆನಬೇಡ ಹೊಲೆಯಿಲ್ಲ ।
ದುತ್ತಮರು ಎಲ್ಲಿ? ಸರ್ವಜ್ಞ ॥ ೯೬೪ ॥

ಎಂಜಲೆಂಜಲು ಎಂದು । ಅಂಜುವರು ಹಾರುವರು ।
ಎಂಜಲಿಂದಾದ ತನುವಿರಲು । ಅದನರಿದು ।
ಅಂಜುತಿಹರೇಕೆ ? ಸರ್ವಜ್ಞ ॥ ೯೬೫ ॥

ಎಲು, ತೊಗಲು, ನರ, ಮಾಂಸ, । ಬಲಿದ ಚರ್ಮದಹೊದಿಕೆ ।
ಹೊಲೆ, ರಕ್ತ, ಶುಕ್ಲದಿಂದಾದ ದೇಹಕೆ ।
ಕುಲವಾವುದಯ್ಯ ? ಸರ್ವಜ್ಞ ॥ ೯೬೬ ॥

ಎಲು, ಕರುಳು, ನರ, ತೊಗಲು, । ಬಿಲ ರಂಧ್ರ ಮಾಂಸದೊಳು ।
ಹಲ ತೆರದ ಮಲವು ಸುರಿದಿರಲು, ಕುಲಕಿನ್ನು ।
ಬಲವುಂಟೆ ಹೇಳು ? ಸರ್ವಜ್ಞ ॥ ೯೬೭ ॥

ಹಲ್ಲು ಎಲುವೆಂಬುದನು । ಎಲ್ಲರೂ ಬಲ್ಲರು ।
ಹಲ್ಲಿನಿಂದಲೆ ಅಗಿದು ಎಲ್ಲ ನುಂಗಿದ ಬಳಿಕ ।
ಎಲ್ಲಿಹುದು ಶೀಲ ? ಸರ್ವಜ್ಞ ॥ ೯೬೮ ॥

ಹಲ್ಲುದುರೆ ರಕುತವದು । ಎಲ್ಲವೂ ಬಾಯೊಳಗೆ ।
ಖುಲ್ಲರಕ್ಕಸರು ಮಾನವರು, ಶೀಲ ತಾ ।
ನೆಲ್ಲಿಹುದು ಹೇಳು ! ಸರ್ವಜ್ಞ ॥ ೯೬೯ ॥

ಹಸಿವು ತೃಷೆ ನಿದ್ರೆಗಳು । ವಿಷಯ ಮೈಥುನ ಬಯಕೆ ।
ಪಶು, ಪಕ್ಷಿ, ನರಗೆ ಸವನಿರಲು, ಕುಲವೆಂಬ ।
ಘಸಣೆಯೆತ್ತಣದು ? ಸರ್ವಜ್ಞ ॥ ೯೭೦ ॥

ಕೂಳಿಂದ ಕುಲ ಬೆಳೆದು । ಬಾಳಿಂದ ಬಲ ಬೆಳೆದು ।
ಕೂಳು ನೀರುಗಳು ನೀಗಿದರೆ ಕುಲಗಳನು ।
ಕೇಳಬೇಡೆಂದ ಸರ್ವಜ್ಞ ॥ ೯೭೧ ॥

## ಜಾತಿ ಖಂಡನ

ನಡೆವುದೊಂದೇ ಭೂಮಿ । ಕುಡಿವುದೊಂದೇ ನೀರು ।
ಸುಡುವಗ್ನಿಯೊಂದೆ ಇರುತಿರಲು ಕುಲಗೋತ್ರ ।
ನಡುವೆ ಎತ್ತಣದು ? ಸರ್ವಜ್ಞ ॥ ೯೭೨ ॥

ಕೂಡಿದ ನೀರನು ತಂದು | ಅಡಿಗೆ ಮಾಡಿದ ಮೇಲೆ |
ಒಡನುಣ್ಣಲಾಗದಿಂತೆಂಬ ಮನುಜರ |
ಒಡನಾಟವೇಕೆ? ಸರ್ವಜ್ಞ ॥ ೯೭೩ ॥

ಅವಯವಗಳೆಲ್ಲರಿಗೆ | ಸಮನಾಗಿ ಇರುತಿರಲು |
ಭವಿ, ಭಕ್ತ, ಶ್ವಪಚ ಶೂದ್ರರಿವರೆಂತೆಂಬ |
ಕವನವೆತ್ತಣದು? ಸರ್ವಜ್ಞ ॥ ೯೭೪ ॥

ಧಾತು ಏಳನು ಕಲೆತು | ಭೂತ ಪಂಚಕವಾಗಿ |
ಓತು ದೇಹವನು ಧರಿಸಿರ್ದ ಮನುಜರ್ಗೆ |
ಜಾತಿ ಎತ್ತಣದು? ಸರ್ವಜ್ಞ ॥ ೯೭೫ ॥

### ಜಾತನು ಯಾರು

ಜಾತಿಹೀನರ ಮನೆಯ | ಜ್ಯೋತಿ ತಾ ಹೀನವೇ? |
ಜಾತಿ ವಿಜಾತಿಯೆನಬೇಡ, ದೇವನೊಲಿ |
ದಾತನೇ ಜಾತ! ಸರ್ವಜ್ಞ ॥ ೯೭೬ ॥

ಭೂತೇಶಗೆರಗುವನು | ಜಾತಿ ಮಾದಿಗನಲ್ಲ |
ಜಾತಿಯಲಿ ಹುಟ್ಟಿ ಶಿವನಿಗೆ ಶರಣೆನ್ನ |
ದಾತ ಮಾದಿಗನು! ಸರ್ವಜ್ಞ ॥ ೯೭೭ ॥

ಯಾತರದು ಹೂವೇನು | ನಾತರದು ಸಾಲದೇ? |
ಜಾತಿ ವಿಜಾತಿಯೆನಬೇಡ, ದೇವನೊಲಿ |
ದಾತನೇ ಜಾತ! ಸರ್ವಜ್ಞ ॥ ೯೭೮ ॥

ಹಾರುವರು ಸ್ವರ್ಗದ | ದಾರಿಯನು ಬಲ್ಲರೇ? |
ನಾರಿ ಪತಿವ್ರತದಿ ನಡೆದಿಹರೆ ಸ್ವರ್ಗದ |
ದಾರಿದೋರುವಳು! ಸರ್ವಜ್ಞ ॥ ೯೭೯ ॥

# ಬ್ರಾಹ್ಮಣ ಗುಣವರ್ಣನ

## ಗುಣ ಪ್ರಶಂಸೆ

### ಉತ್ತಮರು

ಉತ್ತಮರು ಎಂಬುವರು । ಸತ್ಯದಲಿ ನಡೆದಿಹರು ।
ಉತ್ತಮರನಧಮರೆನಬೇಡ ಅವರೊಂದು ।
ಮುತ್ತಿನಂತಿಹರು ಸರ್ವಜ್ಞ ॥ ೯೮೦ ॥

ಮಾತನರಿದ ಸುತನು । ರೀತಿಯರಿದ ಸತಿಯು ।
ನೀತಿಯನು ಅರಿದ ವಿಪ್ರ ತಾ ಜಗದೊಳಗೆ ।
ಜ್ಯೋತಿಯಿದ್ದಂತೆ । ಸರ್ವಜ್ಞ ॥ ೯೮೧ ॥

ಉತ್ತಮದ ವರ್ಣಿಗಳೆ । ಉತ್ತಮರು ಎನಬೇಡ ।
ಮತ್ತೆ ತನ್ನಂತೆ ಬಗೆವರನೆಲ್ಲರನು ।
ಉತ್ತಮರು ಎನ್ನು । ಸರ್ವಜ್ಞ ॥ ೯೮೨ ॥

ದಾರದಿಂದಲೆ ಮುತ್ತು । ಹಾರವೆಂದೆನಿಸಿಹುದು ।
ಆರಯ್ದು ನಡೆವ ದ್ವಿಜರುಗಳ ಸಂಸರ್ಗ ।
ವಾರಿಂದಲಧಿಕ ಸರ್ವಜ್ಞ ॥ ೯೮೩ ॥

## ವಿಪ್ರ ಲಕ್ಷಣ

ವಿಪ್ರರಿಂದಲೆ ವಿದ್ಯೆ । ವಿಪ್ರರಿಂದಲೆ ಬುದ್ಧಿ ।
ವಿಪ್ರ ನಿಜವಿಪ್ರರಿಲ್ಲದಿರೆ ಈ ಜಗವು ।
ಕ್ಷಿಪ್ರದಲಿ ಕೆಡುಗು ಸರ್ವಜ್ಞ ॥ ೯೮೪ ॥

ಅರಿತಂಗೆ ಅರವತ್ತು । ಮರೆತಂಗೆ ಮೂವತ್ತು ।
ಬರೆವಂಗೆ ರಾಜ್ಯ ಪರಿಪಾಲು । ಹಾರುವನು ।
ಬರೆಯದೆ ಕೆಟ್ಟ । ಸರ್ವಜ್ಞ ॥ ೯೮೫ ॥

ದ್ವಿಜ ಲಕ್ಷಣ

ದ್ವಿಜನಿವ್ನ್ಮ ಜನಿಸಿ ತಾ । ನಜನಂತೆ ಜಿಗಿಯುವನು ।
ದ್ವಿಜನೆಲ್ಲರಂತೆ ಮಲಿನನಿರೆ, ಋಜುವಿಂದ ।
ದ್ವಿಜನು ತಾನಹನು ಸರ್ವಜ್ಞ ॥ ೯೮೬ ॥

## ಅವಗುಣನಿಂದೆ

ಕಪಟಿಗಳು

ಹಾರುವರು ಎಂಬುವರು । ಹಾರುತ್ತಲಿರುತಿಹರು ।
ಹಾರುವಗೆ ಹೇರ್ವ ದೊರೆದಿಹರೆ ನಿಜಗುಣವ ।
ತೋರದಡಗುವನು ! ಸರ್ವಜ್ಞ ॥ ೯೮೭ ॥

ಒಳಗೊಂದು ಕೋರುವನು । ಹೊರಗೊಂದು ತೋರುವನು ।
ಕೆಳಗೆಂದು ಬೀಳ, ಹಾರುವನ, ಸರ್ಪನ ।
ಸುಳುಹು ಬೇಡೆಂದ ! ಸರ್ವಜ್ಞ ॥ ೯೮೮ ॥

ಬೇಡಂಗೆ ಕೊಡೆ ಹೊಲ್ಲ । ಆಡಿಂಗೆ ಮಳೆ ಹೊಲ್ಲ ।
ಬೇಡಿ ಉಂಬುವಗೆ ಬರ ಹೊಲ್ಲ, ದ್ವಿಜನಿಗೆ ।
ಕಾಡುನುಡಿ ಹೊಲ್ಲ ಸರ್ವಜ್ಞ ॥ ೯೮೯ ॥

ಕೆಟ್ಟರೆ ದ್ವಿಜರಿಂದ । ಕೆಟ್ಟವರು ಇನ್ನಿಲ್ಲ ।
ಕೆಟ್ಟದನು ಬಿಟ್ಟು ನಡೆದರೆ ಅವರಿಂದ ।
ನೆಟ್ಟನವರಿಲ್ಲ ! ಸರ್ವಜ್ಞ ॥ ೯೯೦ ॥

ಸ್ವಾರ್ಥಿಗಳು

ಕೊಟ್ಟಿಹರೆ ಹಾರುವರು । ಕುಟ್ಟುವರು ಅವರಂತೆ ।
ಬಿಟ್ಟರೆ ಓರೆ ಹಾಯುವರು ಹಾರುವರು ।
ನೆಟ್ಟನೆಯವರೆ? ಸರ್ವಜ್ಞ ॥ ೯೯೧ ॥

ಕೊಟ್ಟವರ ತಲೆ ಬೆನ್ನ । ತಟ್ಟುವರು ಹಾರುವರು ! ।
ಬಿಟ್ಟರೆ ಕುಟ್ಟಿ ಕೆಡಹುವರು ಹಾರುವರ ।
ಬಟ್ಟೆ ಬೇಡೆಂದ ! ಸರ್ವಜ್ಞ ॥ ೯೯೨ ॥

ಅರ್ಥ ಸಿಕ್ಕರೆ ಬಿಡರು । ವ್ಯರ್ಥದಿ ಶ್ರಮ ಬಡರ ।
ಸರ್ವಕ್ಕೆ ಪರರ ನೂಂಕಿಪರು, ವಿಪ್ರರಿಂ ।
ಸ್ವಾರ್ಥರಿನ್ನಿಲ್ಲ ಸರ್ವಜ್ಞ ॥ ೯೯೩ ॥

ಜ್ಯೋತಿಯಿಲ್ಲದ ಮನೆಯು । ರೀತಿಯಿಲ್ಲದ ಸತಿಯು ।
ನೀತಿಯಿಲ್ಲದ ವಿಪ್ರನು ಭಿಕ್ಷದ ।
ಪಾತ್ರೆಯೊಡೆದಂತೆ ಸರ್ವಜ್ಞ ॥ ೯೯೪ ॥

ಗೊರವನೂ ಸೂಳೆಯೂ । ಹರದಕ್ಕ ಸಾಲೆಯೂ ।
ತಿರಿವನು, ವೈದ್ಯ, ದ್ವಿಜ, ಗಣಿಕೆ ಇನ್ನೊಬ್ಬ ।
ರಿರವ ಸೈರಿಸರು ಸರ್ವಜ್ಞ ॥ ೯೯೫ ॥

ದ್ವಿಜನಿಂಗೆ ಸಾಮರ್ಥ್ಯ । ಭುಜಗಂಗೆ ಕಡು ನಿದ್ರೆ ।
ಗಜಪತಿಗೆ ಮದವು ಅತಿಗೂಡೆ ಲೋಕದ ।
ಪ್ರಜೆಯು ಬಾಳುವದೆ? ಸರ್ವಜ್ಞ ॥ ೯೯೬ ॥

ಹಾರುವರ ನಂಬಿದವ। ರಾರಾರು ಉಳಿದಿಹರು? ।
ಹಾರುವರ ನಂಬಿ ಭೂಪರು ಕೆಟ್ಟರಿ ।
ನ್ನಾರು ನಂಬುವರು? ಸರ್ವಜ್ಞ ॥ ೯೯೭ ॥

ಬಂಡುಣಿಗಳಂತಿಹರು । ಬಂಡ ನೆರೆಯಾಡುವರು ।
ಕಂಡುದನು ಹೊರಳಿ ನುಡಿವರು ಹಾರುವರು ।
ಭಂಡರೆಂದರಿಗು ಸರ್ವಜ್ಞ ॥ ೯೯೮ ॥

ಹಾರುವರು ಎಂಬವರು । ಹಾರಿಹರು ಗಗನಕ್ಕೆ ।
ಹಾರುವರ ಮಾರಿದವರಿಲ್ಲ, ಅವರೊಡನೆ ।
ಹೋರಬೇಡೆಂದ ಸರ್ವಜ್ಞ ॥ ೯೯೯ ॥

ಕೆಟ್ಟ ಹಾಲಿಂದ ಹುಳಿ । ಯಿಟ್ಟರ್ದ ತಿಳಿ ಲೇಸು ।
ಕೆಟ್ಟ ಹಾರುವನ ಬದುಕಿಂದ ಹೊಲೆಯನು ।
ನೆಟ್ಟನೇ ಲೇಸು ಸರ್ವಜ್ಞ ॥ ೧೦೦೦ ॥

ಹಾದಿಯು ಮನೆ ಹೊಲ್ಲ । ಬೇಡಿಯು ಸಸಿ ಹೊಲ್ಲ ।
ಹಾದರದ ಹೆಣ್ಣು ನೆರೆಹೊಲ್ಲ, ಹಳ್ಳಿಯಲಿ ।
ಭೇದಿಗನೆ ಹೊಲ್ಲ ಸರ್ವಜ್ಞ ॥ ೧೦೦೧ ॥

ಅಕ್ಕರವ ಕಲಿತಾತ । ಒಕ್ಕಲನು ತಿನಗಲಿತ ।
ಲೆಕ್ಕವನು ಕಲಿತ ಕರಣಿಕನು ನರಕದಲಿ ।
ಹೊಕ್ಕಾಡ ಕಲಿತ ಸರ್ವಜ್ಞ ॥ ೧೦೦೨ ॥

ಹಂಡಕ್ಕೆ ಹೊಲೆಯನು । ಕಂಡಕ್ಕೆ ಕಟುಗನು ।
ದಂಡಕ್ಕೆ ಕೃಷಿಕನು, ಹಾರುವನು, ದುಡಿದು ತಾ ।
ಪಿಂಡಕ್ಕೆ ಇಡುವ ಸರ್ವಜ್ಞ ॥ ೧೦೦೩ ॥

ಹಾರುವನು ಉಪಕಾರಿ । ಹಾರುವನು ಅಪಕಾರಿ ।
ಹಾರುವನು ತೋರ್ಪ ಬಹುದಾರಿ, ಮುನಿದರೆ ।
ಹಾರುವನೆ ಮಾರಿ ಸರ್ವಜ್ಞ ॥ ೧೦೦೪ ॥

ಹಾರುವರು ಎಂಬವರು । ಹಾರುವರೆ ಸ್ವರ್ಗಕ್ಕೆ? ।
ಸಾರತರ ನಿಜವನರಿಯದಲೆ ಮೋಕ್ಷದ ।
ದಾರಿಯವರ್ಗಹುದೆ? ಸರ್ವಜ್ಞ ॥ ೧೦೦೫ ॥

ಬ್ರಹ್ಮಸ್ವ ದೇವಸ್ವ । ಮಾನಿಸ್ವ ಹೊಕ್ಕಿಹರೆ ।
ಹಮ್ಮಗನು ನಾವ, ತಾ ನಾವ, ಆ ಮನೆಯು ।
ನಿರ್ಮೂಲವಕ್ಕು ಸರ್ವಜ್ಞ ॥ ೧೦೦೬ ॥

ಸೀತೆಯಿಂ ಹೆಣ್ಣಿಲ್ಲ । ಸೂತನಿಂದಾಳಿಲ್ಲ ।
ಮಾತಿನಲಿ ನೋತಗಿದಿರಿಲ್ಲ, ಶೂದ್ರಂಗೆ ।
ರೀತಿಯೇ ಇಲ್ಲ ಸರ್ವಜ್ಞ ॥ ೧೦೦೭ ॥

ಮಾದಿಗಗು ಕಮ್ಮೆಗೂ । ಭೇದ ಒಂದುಂಟಯ್ಯ ।
ಮಾದಿಗ ಕೊಲುವ ಆಗದರ, ಕಮ್ಮೆ ತನ ।
ಗಾದವರ ಕೊಲುವ ಸರ್ವಜ್ಞ ॥ ೧೦೦೮ ॥

ಕಮ್ಮೆಯನ ಚೇಳಿನ । ಹೊಮ್ಮರಡು ಒಂದಯ್ಯ! ।
ನೆಮ್ಮಿದರೆ ಚೇಳು ಹೊಡೆದಿಹುದು, ಕಮ್ಮೆ ತಾ ।
ನೆಮ್ಮದೆ ಹೊಡೆವ! ಸರ್ವಜ್ಞ ॥ ೧೦೦೯ ॥

ಆರ್ಮ್ಮಗೆ ಬಳಿಯಿಲ್ಲ। ಎರ್ಮ್ಮಗೆ ಚಳಿಯಿಲ್ಲ।
ಉರ್ಮ್ಮಳಿಸುವಾಗ ಮಳೆಯಿಲ್ಲ, ನನ್ನಿಯುದು।
ಕರ್ಮ್ಮಯಲಿ ಇಲ್ಲ ಸರ್ವಜ್ಞ ॥ ೧೦೧೦ ॥

ಜೋಗಯ್ಯ ಕರ್ಮ್ಮಯೊಳ। ಗಾಗದದು ವಿಶ್ವಾಸ।
ತಾಗುವ ತಗರು ಒರಲೋಡಿ ಬಾಪಿಯು।
ತೂಗು ಕೊಂಡಂತೆ ಸರ್ವಜ್ಞ ॥ ೧೦೧೧ ॥

## ೧೬. ಜೈನ ಪದ್ಧತಿ

### ಜೈನಮತ ಪ್ರಶಂಸೆ

ಸೃಷ್ಟಿಯಲಿ ಜಿನಧರ್ಮ। ಪಟ್ಟಗಿರುತಿರ್ಕ್ಕು।
ಕೆಟ್ಟರೆ ಕೆಡುಗು ಜಗವೆಲ್ಲ, ತಲೆಹೋವ।
ಅಟ್ಟಿಯಂತಿರ್ಕ್ಕು ಸರ್ವಜ್ಞ ॥ ೧೦೧೨ ॥

ಕೊಲುವ ಧರ್ಮವನೊಯ್ದು। ಒಲೆಯೊಳಗೆ ಇರ್ಕ್ಕುವ।
ಕೊಲಲಾಗದೆಂಬ ಜೈನನ ಮತವೆನ್ನ।
ತಲೆಯು ಮೇಲಿರಲಿ ಸರ್ವಜ್ಞ ॥ ೧೦೧೩ ॥

### ಜೈನಮತವು ಮತ್ತಿ ಹುಟ್ಟಿದ್ದು

ಆದಿಯಲಿ ಜಿನನಿಲ್ಲ। ವೇದದಲಿ ಹುಸಿಯಿಲ್ಲ।
ವಾದದಿಂದಾದ ಧನವಿಲ್ಲ, ಸ್ವರ್ಗ್ಗದಲಿ।
ಮಾದಿಗರೆ ಇಲ್ಲ ಸರ್ವಜ್ಞ ॥ ೧೦೧೪ ॥

### ಜೈನರು ಸುಳ್ಳರಾಗಲಾಗದು

ಮುತ್ತು ಮುದುಕಿಗೆ ಏಕೆ? । ತೊತ್ತೇಕೆ ಗುರುಗಳಿಗೆ ?।
ಬತ್ತಿದ ಕೆರೆಗೆ ಮಿಗವೇಕೆ? ಶ್ರವಣರಿಗೆ।
ಮಿಥ್ಯತನವೇಕೆ? ಸರ್ವಜ್ಞ ॥ ೧೦೧೫ ॥

ಮೊಸರು ಇಲ್ಲದ ಊಟ। ಪಸರವಿಲ್ಲದ ಹರದ।
ಹಸನವಿಲ್ಲದವಳ ರತಿಕೂಟ, ಜಿನನ ಬಾಯ್।
ಕಿಸುಕುಳದಂತೆ। ಸರ್ವಜ್ಞ ॥ ೧೦೧೬ ॥

ಉಪ್ಪು ಸಪ್ಪನೆಯಕ್ಕು । ಕರ್ಪುರವು ಕರಿದಕ್ಕು ।
ಸರ್ಪನಿಗೆ ಬಾಲವೆರಡಕ್ಕು, ಶ್ರವಣ ತಾ ।
ತಪ್ಪಾಡಿದಂದು । ಸರ್ವಜ್ಞ ॥ ೧೦೧೭ ॥

ಹೆರೆಗಳೆದ ಉರಗನ । ಗರಳ ತಾ ತಪ್ಪುವದೆ ? ।
ಪರತತ್ವ ಬೋಧೆಯರಿಯದೆ ಶ್ರವಣ ತಾ ।
ಸಿರಿಯ ತೊರೆದೇನು ? ಸರ್ವಜ್ಞ ॥ ೧೦೧೮ ॥

ಆಚಾರವಿಹುದೆಂದು । ಲೋಚ ಗುಂಡಿಗೆವಿಡಿದು ।
ಭೂಚರರದಿ ಸತ್ತ ನವಿಲಗರಿ ಪಿಡಿಯುವುದು ।
ನೀಚವಲ್ಲೇನು ? ಸರ್ವಜ್ಞ ॥ ೧೦೧೯ ॥

ಬಟ್ಟೆತಾಗಿಯೆ ಬೊಟ್ಟ । ನಿಟ್ಟು ಒಪ್ಪುವ ಜೈನ ।
ನೆಟ್ಟನೆ ಸ್ವರ್ಗ ಪಡೆಯುವಡೆ ಸಾಣೆ ಕಲ್ ।
ಕೆಟ್ಟಕೇಡೇನು ? ಸರ್ವಜ್ಞ ॥ ೧೦೨೦ ॥

## ಅಹಿಂಸಾ ವಾದ ನಿರ್ಣಯ

ಕೊಲ್ಲದಿಪ್ಪಾ ಧರ್ಮ । ವೆಲ್ಲರಿಗೆ ಸನುಮತವು ।
ಅಲ್ಲದನು ಮಾರಿ ಮಾಡುವನು ನರಕಕ್ಕೆ ।
ನಿಲ್ಲದೆ ಹೋಹ ಸರ್ವಜ್ಞ ॥ ೧೦೨೧ ॥

ಹೇನು ಕೂರೆಗಳನ್ನು । ತಾನಾಗಿ ಜಿನ ಕೊಲ್ಲ ।
ಸ್ಥಾನ ಪಲ್ಲಟವ ತಾ ಮಾಡಿ ಆ ಮೇಲೆ ।
ಏನಾದುದರಿಯ ! ಸರ್ವಜ್ಞ ॥ ೧೦೨೨ ॥

ಎಂತು ಪ್ರಾಣಿಯ ಕೊಲ್ಲ । ದಂತುಂಟು ಜಿನ ಧರ್ಮ ।
ಜಂತು ಬಸುರಲ್ಲಿ ಸಾಯಲುರೆ ಆ ಜೀವಿ ।
ಯಂತಾದ ಶ್ರವಣ ಸರ್ವಜ್ಞ ॥ ೧೦೨೩ ॥

ಎಂತು ಜೀವಿಯ ಕೊಲ್ಲ । ದಂತಿಹುದು ಜಿನ ಧರ್ಮ ।
ಜಂತುಗಳ ಹೆತ್ತು ಮರಳಿಯುವನು ಸಲಹಿ
ದಂತವನೆ ಜೈನ ಸರ್ವಜ್ಞ ॥ ೧೦೨೪ ॥

ಜೀವಿ ಜೀವಿಯ ತಿಂದು | ಜೀವಿಪುದು ಜಗವೆಲ್ಲ |
ಜೀವದಿಂ ಹೊರಗೆ ತಿಂಬವರ ನಾ ಕಾಣೆ |
ಜೀವವೀ ಜಗವು ! ಸರ್ವಜ್ಞ || ೧೦೧೫ ||

ಚರಜೀವವನು ತಿಂದು | ಚರಿಸುವದು ಜಗವರ್ಧ |
ಚರಿಸದ ಜೀವಿಗಳ ತಿಂದು ಜಗವರ್ಧ |
ಚರಿಸುವದು ನೋಡ ! ಸರ್ವಜ್ಞ || ೧೦೧೬ ||

ಎಂತು ತಪಸಿಗಳಂತೆ | ನಿಂತ ಫಲಜೀವಿಗಳ |
ಜಂತುವಲ್ಲೆಂದು ಜಿನತಿಂದು ಮತ್ತದನು |
ಸಂತೆಯೊಳಗಿಡುವ ! ಸರ್ವಜ್ಞ || ೧೦೧೭ ||

ಒಂದು ಜೀವವನೊಂದು | ತಿಂದು ಉಳಿದಿಹ ಜಗದೊ |
ಕೊಂದು ಕೊಲಲಾಗದಿಂತೆಂಬ ಜಿನಧರ್ಮ |
ನಿಂದಿಹುದು ಹೇಗೆ? ಸರ್ವಜ್ಞ || ೧೦೧೮ ||

ಜೀವಿ ಜೀವವ ತಿಂದು | ಜೀವಿಗಳ ಪುಟ್ಟಿಸಿರೆ |
ಸಾವು ಎಲ್ಲಿಹುದು ? ಸ್ವಾರ್ಥವೆ ಜಗದೊಳಗೆ |
ಸಾವೆಂದು ತಿಳಿಯೊ ! ಸರ್ವಜ್ಞ || ೧೦೧೯ ||

ಸಾವು ಜೀವಗಳೆರಡು | ಭಾವಿಸಲು ಒಂದಯ್ಯ ! |
ಜೀವಿಸಲು ಬೀಜ ಸಾವಂತೆ ಜಗಹಿತಕೆ |
ಸಾವುದೇ ಜೀವ ! ಸರ್ವಜ್ಞ || ೧೦೨೦ ||

## ೧೭. ಮೂರ್ಖರ ಪದ್ಧತಿ

### ಮೂರ್ಖನ ಲಕ್ಷಣ

ಮೂರ್ಖಂಗೆ ಬುದ್ಧಿಯನು | ನೂರ್ಕಾಲ ಪೇಳಿದರೆ |
ಗೋರ್ಕಲ್ಲಮೇಲೆ ಮಳೆಹುಯಿದರಾ ಕಲ್ಲು |
ಹೀರ್ಕೊಂಬುದುಂಟೆ ? ಸರ್ವಜ್ಞ || ೧೦೨೧ ||

ಮೂರ್ಖನೊಡನೆ ವಾದಿಸಬೇಡ

ಆರು ಬೆಟ್ಟವನೊಬ್ಬ । ಹಾರಬಹುದೆಂದಿಹರೆ ।
ಹಾರಬಹುದೆಂದು ಎನಬೇಕು, ಮೂರ್ಖನೊಡ ।
ಹೋರಟೆಯೆ ಸಲ್ಲ ಸರ್ವಜ್ಞ ॥ ೧೦೩೨ ॥

ಮೂರು ಗಾವುದವನ್ನು । ಹಾರಬಹುದೆಂದಿಹರೆ ।
ಹಾರಬಹುದೆಂದು ಎನಬೇಕು, ಮೂರ್ಖನೊಡ ।
ಹೋರಬೇಡೆಂದ ಸರ್ವಜ್ಞ ॥ ೧೦೩೩ ॥

ಒಲೆಗುಂಡನೊಬ್ಬನೆ । ಮೆಲಬಹುದು ಎಂದಿಹರೆ ।
ಮೆಲಬಹುದು ಎಂಬುವನೆ ಜಾಣ, ಮೂರ್ಖನ ।
ಗೆಲಲಾಗದಯ್ಯ । ಸರ್ವಜ್ಞ ॥ ೧೦೩೪ ॥

ಮೊಲನಾಯ ಬೆನ್ನಟ್ಟಿ । ಗೆಲಬಹುದು ಎಂದಿಹರೆ ।
ಗೆಲಬಹುದೆಂದು ಎನಬೇಕು, ಮೂರ್ಖನಲಿ ।
ಕಲಹ ಬೇಡೆಂದ ಸರ್ವಜ್ಞ ॥ ೧೦೩೫ ॥

ನೆಲವನ್ನು ಮುಗಿಲನ್ನು । ಹೊಲಿವರುಂಟೆಂದರವ ।
ಹೊಲಿವರು ಹೊಲಿವರೆನಬೇಕು, ಮೂರ್ಖನಲಿ ।
ಕಲಹ ಬೇಡೆಂದ ಸರ್ವಜ್ಞ ॥ ೧೦೩೬ ॥

ಬೆಟ್ಟವನು ಕೊಂಡೊಬ್ಬ । ನಿಟ್ಟಹನು ಎಂದಿಹರೆ ।
ಇಟ್ಟಹನೆಂದು ಎನಬೇಕು, ಮೂರ್ಖನ ।
ಬಟ್ಟೆ ಬೇಡೆಂದ ಸರ್ವಜ್ಞ ॥ ೧೦೩೭ ॥

ಹೊಳೆಯ ನೀರೊಬ್ಬನೆ । ಅಳೆಯಬಹುದೆಂದರವ ।
ಅಳೆಯಬಹುದೆಂದು ಎನಬೇಕು, ಮೂರ್ಖನ ।
ಕಳೆಯಲಳವಲ್ಲ ಸರ್ವಜ್ಞ ॥ ೧೦೩೮ ॥

ಒಂದನ್ನು ಎರಡೆಂಬ । ಹಂದಿ ಹೆಬ್ಬುಲಿಯೆಂಬ ।
ನಿಂದ ದೇಗುಲವು ಮರನೆಂಬ ಮೂರ್ಖ ತಾ ।
ನೆಂದಂತೆ ಎನ್ನಿ ಸರ್ವಜ್ಞ ॥ ೧೦೩೯ ॥

ಮೂರ್ಖರ ಸ್ನೇಹ ಬೇಡ

ಆಳ ಹೊಲ್ಲ ಆಡಿನ । ಕೆಳೆ ಹೊಲ್ಲ ಕೋಡಗನ ।
ಆಳು ಕೋಪ ಓವರೊಳು ಹೊಲ್ಲ, ಮೂರ್ಖನ ।
ಗೆಳೆತನವೆ ಹೊಲ್ಲ ಸರ್ವಜ್ಞ ॥ ೧೦೪೦ ॥

## ೧೮. ಕಾಲಜ್ಞಾನ ಪದ್ಧತಿ

ಬಸವ ಸ್ತುತಿ

ಬಸವನೆನಗೆ ನಿರೂ । ಪಿಸಿದ ಕಾಲಜ್ಞಾನ ।
ಭಸಿತವನಿಟ್ಟು ಮರ್ತ್ಯರಿರವನು ನಿಮ್ಮ ।
ಸಿಸುವಾಗಿ ಪೇಳ್ವೆ ಸರ್ವಜ್ಞ ॥ ೧೦೪೧ ॥

ಒಪ್ಪ ಭಸಿತವನಿಟ್ಟು । ಕಪ್ಪುರ ವೀಳೆಯ ಕೊಟ್ಟು ।
ಕಪ್ಪುಗೊರಳನ ಕರುಣದಿ ಇದನರಿದು ।
ಒಪ್ಪಿ ಹೇಳಿದನು ಸರ್ವಜ್ಞ ॥ ೧೦೪೨ ॥

ನಂಬಿ ಹೇಳುವೆ ಬಸವ । ನಿಂಬಿನ ಮಹಿಮೆಯನು ।
ಶಂಭುವಿನ ಕರುಣ ನಿಮಗುಂಟು, ನಾ ನಿಮ್ಮ ।
ನಂಬಿ ಹೇಳಿದೆನು ಸರ್ವಜ್ಞ ॥ ೧೦೪೩ ॥

ವೀರಬಸವಂತನಾಗಮನ

ವೀರಬಸವಂತನು । ಧೀರ ಬಿಜ್ಜಳ ತಾನು ।
ವಿಾರಿ ಕಲಿದೇವ ನಡೆದಾನು ಅವನೊಡನೆ ।
ಹೋರುವವರಿಲ್ಲ ಸರ್ವಜ್ಞ ॥ ೧೦೪೪ ॥

ಮಳೆಗಳನು ಕುಡಿದಿಹನು । ಬೆಳೆಗಳನು ಮುಕ್ಕಿಹನು ।
ಬಳಗಗಳನೆಲ್ಲ ಮುರಿದಿಹನು ಜಗದೊಳಗೆ ।
ಉಳಿವರಿನ್ನಿಲ್ಲ ಸರ್ವಜ್ಞ ॥ ೧೦೪೫ ॥

ಅಂದು ರಾಮನು ಬಂದು । ಸಂದುದಿರ್ಕ್ಕಾಸಿರದ ।
ಮುಂದೆ ಬಂದಿಹನು ವೀರಬಸವಂತ ತಾ ।
ಕುಂದದಿಳೆಗೆಂದ ಸರ್ವಜ್ಞ ॥ ೧೦೪೬ ॥

### ಬಸವಣ್ಣ ಚೆನ್ನಬಸವಣ್ಣನವರ ಪುನರಾಗಮನ

ಆಗಮಗಳಳಿದಾವು । ಗೂಗೆ ಮರಕಿಳಿದಾವು ।
ಕಾಗೆಗಳೆದ್ದು ಬಡಿದಾವು, ದೊರೆಗಳು ।
ಮೂಗರಾದಂದು ಸರ್ವಜ್ಞ ॥ ೧೦೪೭ ॥

ಜಲ್ಲಿಯಾ ಬಿಲ್ಲವರು । ಸಲ್ಲಿಸುತಲೆಲ್ಲವನು ।
ಕಲ್ಯಾಣದರಸು ಬಸವಣ್ಣ ಬರುವಾಗ ।
ಅಲ್ಲಿ ಚಲ್ಲಾಟ ಸರ್ವಜ್ಞ ॥ ೧೦೪೮ ॥

ಸಣ್ಣನೆಯ ನಾಮದ । ನುಣ್ಣನೆಯ ಮುಡಿಗಳ ।
ಅಣ್ಣಗಳಾಳಿಕೆಯು ಅಳಿದಾಗ ಚೆನ್ನಬಸ ।
ವಣ್ಣ ತಾ ಬರುವ ಸರ್ವಜ್ಞ ॥ ೧೦೪೯ ॥

ಇರಿವೆತ್ತು ಮಡಿವಲ್ಲಿ । ಕೆರೆ ಕಟ್ಟೆ ಒಡೆದೀತು ।
ಬರನಟ್ಟೆ ಬಡಿದು ಜನಮಡಿಯೆ, ಶಿವಶರಣ ।
ಬರುವದಕೆ ಕುರುಹು ಸರ್ವಜ್ಞ ॥ ೧೦೫೦ ॥

ಧಾರುಣಿಯು ನಡುಗುವದು ! । ಮೇರುವಲ್ಲಾಡುವದು ! ।
ವಾರಿನಿಧಿ ಬತ್ತಿ ಬಯಲಹುದು ! ಶಿವಭಕ್ತಿ ।
ಏರದಿಹುದಂದು ! ಸರ್ವಜ್ಞ ॥ ೧೦೫೧ ॥

ಒತ್ತಿದ ಜಗಳಕ್ಕೆ । ಸುತ್ತ ಮುತ್ತಿಗೆಯಾಗಿ ।
ತೊತ್ತಳಂ ತುಳಿದು ಕೊಲುವಾಗ ಉಳುವೆಯು ।
ಕರ್ತ ಬಂದಾನು ಸರ್ವಜ್ಞ ॥ ೧೦೫೨ ॥

ಹರನ ಗಿರಿಗುಡಿಗಳಲಿ । ಸುರೆ ಮಾಂಸ ಮಾರೀತು ।
ಶರಣರಿಗೆ ಹರಣ ಪಿರಿದಾಗಿ ಜಗದಲ್ಲಿ ।
ಹರದಾಳಿ ನೋಡ ಸರ್ವಜ್ಞ ॥ ೧೦೫೩ ॥

ನಂದಿಯು ದುರ್ಗವನು । ಅಂದದಲಿ ತೆಗೆದಾರು ।
ಅಂದದಲಿ ತೆಗೆದ ಆರನೆಯ ವರುಷಕ್ಕೆ ।
ಬಂದಾನು ಶರಣ ಸರ್ವಜ್ಞ ॥ ೧೦೫೪ ॥

ಮಾಧವನ ಪುರದಲ್ಲಿ । ಕಾದು ಲಗ್ಗೆಯ ಹೂಡಿ ।
ಮಾಧವನ ಪಡೆಯ ಸದೆ ಬಡೆದು ಕಲ್ಯಾಣ ।
ಹಾದಿ ಹಿಡಿದಾನು । ಸರ್ವಜ್ಞ || ೧೦೫೫ ||

ಇಕ್ಕೇರಿ ಸೀಮೆಯ । ಲೆಕ್ಕವನು ಹೇಳುವೆನು ।
ಇಕ್ಕೇರಿಯಳಿದ ದಶವರುಷದಂತ್ಯಕ್ಕೆ ।
ಮುಕ್ಕಣ್ಣ ಬರುವ । ಸರ್ವಜ್ಞ || ೧೦೫೬ ||

ಪೇಟೆಯ ಬಸ್ತಿಯನು । ಆಟದಲಿ ಒಡೆದಾರು ।
ಆಟದಲಿ ಒಡೆದ ಆರನೆಯ ವರುಷಕ್ಕೆ ।
ನೀಟಾಗಿ ಬರುವ ಸರ್ವಜ್ಞ || ೧೦೫೭ ||

ಬಸವ ಪೀರವು ಎದ್ದು । ಒನೆದು ನಾಣ್ಯವು ಹುಟ್ಟಿ ।
ಬಸವನ ಮುದ್ರೆ ಮೆರೆದಾವು, ಧರೆಯವಗೆ ।
ವಶವಾಗದಿಹುದೆ ಸರ್ವಜ್ಞ || ೧೦೫೮ ||

ವೀರಶರಭನ ಹೊಡೆದು । ಈರೈದು ವರುಷಕ್ಕೆ ।
ಧೀರ ನರಸಿಂಹ ನೆಲಸಲು ಬಸವಣ್ಣ ।
ಸಾರಿ ಬಂದಾನು ಸರ್ವಜ್ಞ || ೧೦೫೯ ||

ಎಂದು ಬಂದಾನೆಂದು । ಸಂದೇಹಗೊಳಬೇಡ ।
ತಂದೆ ಕಂದನ ಕೊಂದ ಕಡೆ ಬೇಸಿಗೆಯ ।
ಮುಂದೆ ಬಂದಾನು ಸರ್ವಜ್ಞ || ೧೦೬೦ ||

ಅರೆದಾರು ಮೆರೆದಾರು । ಉರಿದಾರು ಜಗದೊಳಗೆ ।
ಕುರಿಗಳ ತಲೆಯ ತರಿದಂತೆ ರಕುತವನು ।
ಸುರಿದಾರು ನೋಡ ಸರ್ವಜ್ಞ || ೧೦೬೧ ||

ಹೆಣ್ಣಿನ ದೆಸೆಯಿಂದ । ರಣ್ಯಕ್ಕೆ ನಡೆತಂದು ।
ಹಣ್ಣಿರಲು ಜಗಳ, ಪಶ್ಚಿಮದ ಮಂತ್ರಿಗಳ ।
ಅಣ್ಣ ಬಂದಾನು ಸರ್ವಜ್ಞ || ೧೦೬೨ ||

ಆನೆಗುಂದಿಯ ಅರಸ । ನಾನೆ ಕುದುರೆಯ ಕಟ್ಟಿ ।
ಮಾನ ಮನ್ನೆಯರು ಮಡಿಯಲಾನಗರವನು ।
ಹಾನರಾಳುವರು ಸರ್ವಜ್ಞ ॥ ೧೦೬೩ ॥

ಹೆತ್ತ ತಂದೆಯ ಕೊಂದು । ಮತ್ತತೆಯ ವಿರುಪಾಕ್ಷ ।
ಬತ್ತಲೆಯ ಹೆಣ್ಣಿಗೊಳಗಾಗೆ ರಾಜ್ಯದೊಳು ।
ಕತ್ತಲಾದೀತು ಸರ್ವಜ್ಞ ॥ ೧೦೬೪ ॥

ಕಲ್ಲುಕೋಟೆಯಲೊಬ್ಬ । ಬಲ್ಲಿದನು ಕೆರೆಕಟ್ಟಿ ।
ಗೊಲ್ಲಗೊಲ್ಲರಲಿ ಜಗಳದ್ದು ಜಗಕೆಲ್ಲ ।
ತಲ್ಲಣವೆಂದ ಸರ್ವಜ್ಞ ॥ ೧೦೬೫ ॥

ಅಚ್ಯುತನು ಪಟ್ಟಕ್ಕೆ । ನಿಶ್ಚಯಿಸಿ ನಿಂದಲ್ಲಿ ।
ಕಿಚ್ಚೆದ್ದು ಬೆಟ್ಟಕೂಂಡಂತೆ ಜಗವೆಲ್ಲ ।
ಹುಚ್ಚೆದ್ದು ಹೋಯ್ತು ಸರ್ವಜ್ಞ ॥ ೧೦೬೬ ॥

ಚೆಂದಿರಕ್ಕನ ಗಂಡ । ಬಂದು ತಾನರಸಾಗಿ ।
ಹಿಂದುಳಿದನೊತ್ತಿ ಸಂಧಾನದೊಳಗಿಪ್ಪ ।
ತ್ತೊಂದನಾಳುವನು ಸರ್ವಜ್ಞ ॥ ೧೦೬೭ ॥

ಚೆಂದಿರಕ್ಕನ ಗಂಡ । ಬಂದು ನಿಂದಿರಲಾಗಿ ।
ಮುಂದೆ ಆರುವತ್ತು ವರುಷಕ್ಕೆ ರಾಜ್ಯದ ।
ಸಂಧಾನವೆಂದ ಸರ್ವಜ್ಞ ॥ ೧೦೬೮ ॥

ಹರಿಯ ಹತ್ತವತಾರ । ಮರೆದವೆಂದೆನಬೇಕು ।
ಕುರುಹಿನ ಕೃಷ್ಣನವತಾರ ಹನ್ನೊಂದ ।
ಕರಿದಾದುದೆಂದ ಸರ್ವಜ್ಞ ॥ ೧೦೬೯ ॥

ಚಕ್ರಪಾಣಿಯ ದಂಡು । ನೊಕ್ಕೇರಿ ಬರುವಾಗ ।
ರಕ್ಕಸರು ಕರಿಯನೊಡಗೂಡಿ ದೊರೆಯನ್ನು ।
ತಿಕ್ಕಿಬಿಟ್ಟಾರು ಸರ್ವಜ್ಞ ॥ ೧೦೭೦ ॥

ಪಶುಪನಂದಿಯು ಕಡಿದು । ಬಿಸುಮಿಲ್ಲಗಳ ಮಾಡಿ ।
ಹಸು, ಕೋಳಿ, ಕುರಿಯು ಕಡಿಯೆ(ಲಾಹಂವೆಯಲಿ ।
ಕಿಸುಕುಳವಾಯ್ತು ಸರ್ವಜ್ಞ ॥ ೧೦೭೧ ॥

ಕುರುಬ ಕುಲದೊಳಗೊಬ್ಬ । ದರಣಿ ನಾಲಕ ಹುಟ್ಟಿ ।
ಉರವಣಿಸಿ ಕದನ ಹಣ್ಣಲಾಹಂವೆಗೆ ।
ಕರಿಯುನಟ್ಟಿಹರು ಸರ್ವಜ್ಞ ॥ ೧೦೭೨ ॥

ಅಶ್ವಪತಿ ಗಜಪತಿಯು । ವಿಶ್ವಸುತ ಹಂವೆಯಲಿ ।
ದುಸ್ಮಾನರೊಡನೆ ಹೊಡೆದಾಡೆ ನರಪತಿಗೆ ।
ಮಸಣವಹುದೆಂದ ಸರ್ವಜ್ಞ ॥ ೧೦೭೩ ॥

ನರರ ಬಲಿಗಳ ಕೊಟ್ಟು । ಕುರಿ ಕೋಣಗಳ ಕಡಿದು ।
ಸರುವ ಭಂಡಾರವನು ಒಡೆದು ಸರುವರ ।
ತಿರಗಳರಿದಾರು ಸರ್ವಜ್ಞ ॥ ೧೦೭೪ ॥

ಸುತ್ತ ಯೋಜನದೊಳಗೆ । ಸತ್ತ ಜನಗಳ ಸುತ್ತು ।
ಮುತ್ತಿದ್ದ ಹದ್ದು ಕಾಗೆಗಳ ರಾಶಿ ಕ ।
ಣ್ಣೆತ್ತಿ ನೋಡೆಂದ । ಸರ್ವಜ್ಞ ॥ ೧೦೭೫ ॥

## ಇತರ ಕಾಲಜ್ಞಾನಗಳು

ಸೂಳೆಯಲಿ ಮಗಹುಟ್ಟಿ । ಆಳುವನು ಮುನಿಪುರವ ।
ಕಾಳಗವಿಲ್ಲದವ ಮಡಿಯೆ ಪುರವೆಲ್ಲ ।
ಕೋಳು ಹೋದೀತು ಸರ್ವಜ್ಞ ॥ ೧೦೭೬ ॥

ಉತ್ತರದ ದಿಕ್ಕಿನಲಿ । ಹತ್ತೀತು ಹೆಬ್ಬೇಗೆ ।
ಸುತ್ತ ಒರಕೊಂಡು ಬರುವಾಗ ಜಗವೆಲ್ಲ ।
ಕತ್ತಲಾದೀತು ಸರ್ವಜ್ಞ ॥ ೧೦೭೭ ॥

ಚಂದ್ರಸೂರ್ಯರ ಗ್ರಹಣ । ಒಂದೆ ಮಾಸದಿ ಬಂದು ।
ತಂದೆಯನು ಕಂದನಿರಿದಂದು ಲೋಕಕ್ಕೆ ।
ಬಂದೀತು ಪ್ರಳಯ ಸರ್ವಜ್ಞ ॥ ೧೦೭೮ ॥

ಪಾತಾಳ ಗಂಗೆಯನು । ಓತು ಚಿಪ್ಪಿಲಿ ಮೊಗೆದು ।
ಭೂತಳವೆಲ್ಲವುರಿದೆದ್ದು ನುಂಡೊಬ್ಬ ।
ಪಾತ ಹುಟ್ಟುವನು ಸರ್ವಜ್ಞ ॥ ೧೦೭೯ ॥

ಪಟ್ಟವಿಲ್ಲದ ಶಿಶುವು । ಸೃಷ್ಟಿಯನು ಆಳೀತು ।
ಪಟ್ಟದರಸುಗಳು ಅಳಿದಾಗ ಜಗದವನ ।
ಪಟ್ಟಕಾಣಯ್ಯ ಸರ್ವಜ್ಞ ॥ ೧೦೮೦ ॥

ನಂದಿವಾಹನನಲ್ಲಿ । ಸಂದೇಹ ಪಡಬೇಡ ।
ನಂದನದಲೊಂದು ಕರಿಹುಟ್ಟಿ ಶರಣರು ।
ಬಂದುದಕೆ ಕುರುಹು ಸರ್ವಜ್ಞ ॥ ೧೦೮೧ ॥

ಸೂಳೆಯ ಮಗನೊಬ್ಬ । ಆಳುವನು ರಾಜ್ಯವನು ।
ಮೇಳದೊಳಗಿಪ್ಪ ನಾರಿ ಮಾತನು ಕೇಳಿ ।
ಕೋಳು ಹೋದಾನು ಸರ್ವಜ್ಞ ॥ ೧೦೮೨ ॥

ಎತ್ತು ಹೇರುವನಿಂದ । ತೊತ್ತಿನ ಮಗನಿಂದ ।
ಮುತ್ತು ಮಾರುವನ ದೆಸೆಯಿಂದ ಜಗಕೆಲ್ಲ ।
ಕುತ್ತು ಬಂದೀತು ಸರ್ವಜ್ಞ ॥ ೧೦೮೩ ॥

ನರಸಿಂಹನವತಾರ । ಹೊಲಸೆದ್ದು ಹೋದೀತು ।
ಅರಸುಗಳೆಲ್ಲ ಮತಿಗೆಡಲು ಆ ರಾಜ್ಯ ।
ಸೆರೆ ಸೂರೆ ಕಾಣೊ ಸರ್ವಜ್ಞ ॥ ೧೦೮೪ ॥

ಸಿಡಿಲು ಬಳಗದ ಕೋಟೆ । ಘಡಘಡಿಸಿ ರಚ್ಚೆದ್ದು ।
ಕಡೆಯ ಗಡಿ ಮಡಿದ ಮರುದಿನವೆ ಕರ್ನಾಟ ।
ಹುಡಿ ಹುಡಿಯೆಂದ ಸರ್ವಜ್ಞ ॥ ೧೦೮೫ ॥

ಬಂಟನ ತಮ್ಮಗೂ । ತುಂಟನಾದಳಿಯಗೂ ।
ಗಂಟಿಕ್ಕಿ ಜಗಳ ಹಣ್ಣಲು ಜಗಕೆಲ್ಲ ।
ಕಂಟಕವು ನೋಡ ಸರ್ವಜ್ಞ ॥ ೧೦೮೬ ॥

ನಂದಿಯ ಹೆಸರಿನವ । ನೊಂದು ರಾಜ್ಯವನಾಳಿ ।
ಬಂಧನ ಪಟ್ಟು ಭಯವಟ್ಟು ನೀರಿನೊಳು ।
ಸಂದು ಹೋದಾನು ಸರ್ವಜ್ಞ ॥ ೧೦೮೭ ॥

ಕಂದನಂ ನೆರೆವಿಡಿದು । ಬಂದಾನು ಪಟ್ಟಕ್ಕೆ ।
ನಿಂದು ರಾಜ್ಯವನು ಆಳುತ್ತ ಭೋಗದಾ ।
ನಂದದೊಳಗಿಹನು ಸರ್ವಜ್ಞ ॥ ೧೦೮೮ ॥

ಕುಲವಿಲ್ಲದವನೊಬ್ಬ । ಮಲೆನಾಡಿನೊಳು ಹುಟ್ಟಿ ।
ಸಲೆದಂಡು ತಂದು ಮುರಿದಿಕ್ಕಿದಾಮೇಲೆ ।
ನೆಲೆಗೆ ನಿಂದಾನು ಸರ್ವಜ್ಞ ॥ ೧೦೮೯ ॥

ಕಂಠೀವೀರಗೆ ಪಟ್ಟ । ಉಂಟಾದ ಕಾಲಕ್ಕೆ ।
ಕೆಂಟಕವಡರಿ ಎಲ್ಲೆಲ್ಲು ಜಗದೊಳಗೆ ।
ತಂಟೆಯಾದೀತು ಸರ್ವಜ್ಞ ॥ ೧೦೯೦ ॥

ಗೂಡು ಮೂರರ ಹಕ್ಕಿ । ಗೂಡೇರಿ ಕೆಲೆದಾವು ।
ಕಾಡು ಕಲ್ಲುಗಳು ಮೊರೆದಾವು, ಕಣ್ಣೀರ ।
ಕೋಡಿ ಹರಿದಾವು ಸರ್ವಜ್ಞ ॥ ೧೦೯೧ ॥

ಸಿಡಿದವನು ಕಲ್ಲಿನ । ಪಡೆಯೊಳಗೆ ಹೊಕ್ಕು ತಾ ।
ಕಡೆಗಾಲ ತನಗೆ ಬಂತೆಂದು ಕಪ್ಪವನು ।
ಕೊಡುವದೊಳಿತೆಂದ ಸರ್ವಜ್ಞ ॥ ೧೦೯೨ ॥

ಭೂತನ ಊರು ಬರಿ । ಮಾತೀಲಿ ಹೋದೀತು ।
ಮಾತಿನಲಿ ಹೋದ ಮರುದಿನವೆ ಅದಕೊಬ್ಬ ।
ದಾತ ಹುಟ್ಟುವನು ಸರ್ವಜ್ಞ ॥ ೧೦೯೩ ॥

ಕುಂಬಾರ ಹೊಟ್ಟೆಯಲಿ । ಪಿಂಜಾರ ತಾ ಹುಟ್ಟಿ ।
ಕುಂಭಿ ಕುಂಭಿಗಳನಳಿಯುತ್ತ ಕುಂಭಿನಿಯೊ ।
ಳಿಂಬುಗೊಂಡಾನು ಸರ್ವಜ್ಞ ॥ ೧೦೯೪ ॥

ಮುತ್ತೊಡೆದು ಹತ್ತಿರಲು । ಮತ್ತಾನೆ ಸತ್ತಿರಲು ।
ಹುತ್ತವನೇರಿ ನರಿ ಕೂಗೆ ಜಗಕೆಲ್ಲ ।
ಕುತ್ತು ಕಾಣಯ್ಯ । ಸರ್ವಜ್ಞ ॥ ೧೦೯೫ ॥
ಸಿಂಗಳದ ದೇಶದಿಂ । ದಂಗನೆಯು ಬಂದಾಳು ।
ಕಂಗಳುರೆ ಕುರುಡು, ಕಿವಿ ಮೂರು, ಅವಳಂಗ ।
ಸಂಗವೇ ಭಂಗ ಸರ್ವಜ್ಞ ॥ ೧೦೯೬ ॥

## ವಿವಿಧ ಪಟ್ಟಣಗಳ ನಾಶನ

ಆಂಗ್ಲದೇಶದಿಂ ಪಾಂ । ರಂಗೇರು ಬಂದು ಶ್ರೀ ।
ರಂಗಪಟ್ಟಣವ ತೆಗೆದೆಲ್ಲ ಜಗವನ್ನು ।
ಭಂಗಪಡಿಸುವರ ಸರ್ವಜ್ಞ ॥ ೧೦೯೭ ॥
ಚೆನ್ನಪಟ್ಟಣವ ನೀ । ತಣ್ಣಗೆಂದೆನಬೇಡ ।
ಚಿಣ್ಣೆಯಿಂ ಕೋಲು ಚಿಮ್ಮಿದಂತಾಪಟ್ಣ ।
ನುಣ್ಣಗಾಗಿಹುದು ಸರ್ವಜ್ಞ ॥ ೧೦೯೮ ॥
ತಾರಣ ಸಂವತ್ಸರದಿ । ಕಾರಣಗಳಾದಾವು ।
ವಾರಣಾಸಿಯಲಿ ಗುಡಿಗಟ್ಟಿ ಜೇಲೂರು ।
ತೋರಣದಿ ತುಂಬಿ ಸರ್ವಜ್ಞ ॥ ೧೦೯೯ ॥
ಸುತ್ತ ಕೋಟೆಯ ಮೇಲೆ । ಮತ್ತೆ ಕೋಟೆಯ ರಚಿಸಿ ।
ಮುತ್ತಯ್ದೆ ಮಗನು ಆಳಿದಾನು ಬಿದನೂರು ।
ಎತ್ತಿ ಹೋದೀತು ಸರ್ವಜ್ಞ ॥ ೧೧೦೦ ॥
ಬೊಮ್ಮನ ಗಿರಿಯಲ್ಲಿ । ಹೆಮ್ಮಗನು ತಂದೆಯು ।
ಹಮ್ಮಿನಸರಸ್ಸು ಸುರಿದಿಕ್ಕೆ ಮಲೆನಾಡು ।
ನಿರ್ಮೂಲವಕ್ಕು ಸರ್ವಜ್ಞ ॥ ೧೧೦೧ ॥
ರಂಗಪಟ್ಟಣದೊಳಗೆ । ರಂಗಭಕ್ತನು ಹುಟ್ಟಿ ।
ರಂಗನ ಪೂಜೆ ಕರಿಗೊಳ್ಳಲಾಪಟ್ಣ ।
ಭಂಗವಾದೀತು ಸರ್ವಜ್ಞ ॥ ೧೧೦೨ ॥

ಆನೆಗನ ಹಳ್ಳಿಯುಲಿ । ವಾನರನ ಪೆಸರವಗೆ ।
ಖಾನ ಖಾನರನು ಮಡುಹುತ್ತ ಪಟ್ಟಣಕೆ ।
ತಾನೆ ಬಂದಾನು ಸರ್ವಜ್ಞ ॥ ೧೧೦೩ ॥

ಚೋಳದ ದೇಶದಿಂ । ಚೋಳರುರೆ ಬಂದಾರು ।
ಮೇಳಯ್ಸಿ ಅರಸನೊಡಗೂಡಿ ಬಸ್ತಿಯನು ।
ಹಾಳುಮಾಡುವರು ಸರ್ವಜ್ಞ ॥ ೧೧೦೪ ॥

ಕಾವೇರಿ ಮಧುರೆಯುಲಿ । ದೇವರ ಸಭೆಗೂಡಿ ।
ಭಾವದೊಳು ಶುದ್ಧ ಶಿವ ಕಂದ ಬಸವಂತ ।
ದೇವ ತಾ ಬರುವ ಸರ್ವಜ್ಞ ॥ ೧೧೦೫ ॥

ದಕ್ಷಿಣದ ಅರಸಂಗೆ । ನೊಕ್ಕಿನ ತುರುಕರು ।
ಸಿಕ್ಕು ಸಿಕ್ಕಳಿದು ಜಗವೆಲ್ಲ ವಶವಹುದು ।
ಮುಕ್ಕಣ್ಣಗೆಂದ ಸರ್ವಜ್ಞ ॥ ೧೧೦೬ ॥

## ಆಂಗ್ಲೇಯರು

ಹೆಂಗಸರ ಹೋಲುವ । ಮಂಗನ ತಲೆಯುವರು ।
ಸಂಗಮಕೆ ಬಂದು ಸಿಂದಿರುತ ರಾಜ್ಯವನು ।
ನುಂಗಿ ಬಿಟ್ಟಾರು ಸರ್ವಜ್ಞ ॥ ೧೧೦೭ ॥

ಮಂಗಮುಖಿಗಳು ಶ್ರೀ । ರಂಗಕ್ಕೆ ಅಯ್ತಂದು ।
ಭಂಗವ ವಡಿಸಿ ನದೆಬಡಿದು ದೇಶವ ।
ನುಂಗಿಬಿಟ್ಟಾರು ಸರ್ವಜ್ಞ ॥ ೧೧೦೮ ॥

ರಂಗನ ವಟ್ಟಣಕೆ । ಹೆಂಗಸರ ಹೋಲುವ ।
ಮಂಗನ ಮುಖದ ಪುಣ್ಯಾತ್ಮರೈಯ್ತಂದು ।
ಸಿಂಗನಳಿದಾರು ಸರ್ವಜ್ಞ ॥ ೧೧೦೯ ॥

ಕಾಲ ಕುಪ್ಪಸದವರು । ಮೇಲೆ ಟೊಪ್ಪಿಗೆಯುವರು ।
ಬಾಲೆಯರ ಮುಖದ ಕಪಿಗಳು, ಶ್ರೀರಂಗ ।
ವಾಳಹೋದಾರು ಸರ್ವಜ್ಞ ॥ ೧೧೧೦ ॥

ರೈಲು

ಪಂಚಲೋಹದ ಕಂಬಿ । ಮುಂಚೆ ಭೂಮಿಗೆ ಹಾಸಿ ।
ಕಂಚಿನ ರಥವ ನಡಿಸುವರು ಆದರೋಟ ।
ಮಿಂಚು ಹೊಡೆದಂತೆ ಸರ್ವಜ್ಞ ॥ ೧೧೧ ॥

ತಂತಿ, ಉಗಿಬಂಡಿ

ಅಲ್ಲಿಗಲ್ಲಿಗೆ ಕಲ್ಲು । ಕಲ್ಲಿನ ಕಡೆ ತಂತಿ ।
ಬಲ್ಲಿದರ ರಥವು ಹೊಗೆಯುತ್ತ ಬರಲದರ ।
ನೊಲ್ಲು ಅರಿದೆಂದ! ಸರ್ವಜ್ಞ ॥ ೧೧೨ ॥

ಎತ್ತು ಇಲ್ಲದೆ ಬಂಡಿ । ಒತ್ತೊತ್ತಿ ನಡಿಸುವರು ।
ಸುತ್ತಲೂ ರಾಜ್ಯವಾಳುವರು ಕಡೆಯಲ್ಲಿ ।
ಮೃತ್ಯು ಹೊಂದುವರು ಸರ್ವಜ್ಞ ॥ ೧೧೩ ॥

## ೧೯ ಲೇಸು ಪದ್ಧತಿ

ಹಂಗಿನ ಹಾಲಿನಿಂ । ದಂಬಲಿಯು ತಿಳಿ ಲೇಸು ।
ಭಂಗಬಟ್ಟುಂಬ ಬಿಸಿಯಿಂದ ತಿರಿವರ ।
ಸಂಗವೇ ಲೇಸು ಸರ್ವಜ್ಞ ॥ ೧೧೪ ॥

ಜಾಜಿಯ ಹೂ ಲೇಸು । ತೇಜಿ ವಾಹನ ಲೇಸು ।
ರಾಜಮಂದಿರದೊಳಿರ ಲೇಸು, ತಪ್ಪುಗಳ ।
ಮಾಜುವದೆ ಲೇಸು ಸರ್ವಜ್ಞ ॥ ೧೧೫ ॥

ಸುಟ್ಟ ಬೆಳಸಿಯು ಲೇಸು । ಅಟ್ಟ ಬೋನವು ಲೇಸು ।
ಕಟ್ಟಾಣಿ ಸತಿಯು ಇರೆ ಲೇಸು, ನಡುವಿಗೆ ।
ದಟ್ಟಿ ಲೇಸೆಂದ ಸರ್ವಜ್ಞ ॥ ೧೧೬ ॥

ಹಸಿಯು ಅಲ್ಲವು ಲೇಸು । ಬಿಸಿಯ ಪಳಿದೆಯು ಲೇಸು ।
ಹುಸಿ ಲೇಸು ಕಳ್ಳಹೆಣ್ಣಿಂಗೆ, ಬೈಗಿನ ।
ಬಿಸಿಲು ಲೇಸೆಂದ ಸರ್ವಜ್ಞ ॥ ೧೧೭ ॥

ಉದ್ದಿನ ಒಡೆ ಲೇಸು । ಬುದ್ಧಿಯು ನುಡಿ ಲೇಸು ।
ಬಿದ್ದೊಡವೆ ಕಯ್ಗೆ ಬರ ಲೇಸು, ಶಿಶುವಿಗೆ ।
ಮುದ್ದಾಟ ಲೇಸು ಸರ್ವಜ್ಞ ॥ ೧೧೧೮ ॥

ಆಳಿ ಲೇಸು ಗೊಲ್ಲಂಗೆ । ಮಳೆ ಲೇಸು ಕಳ್ಳಂಗೆ ।
ಬಲೆ ಲೇಸು ಮೀನು ಹಿಡಿವಂಗೆ, ಕುರುಡಂಗೆ ।
ಸುಳಿದಾಟ ಲೇಸು ಸರ್ವಜ್ಞ ॥ ೧೧೧೯ ॥

ಅಕ್ಕಿಯೋಗರ ಲೇಸು । ಮೆಕ್ಕೆ ಹಿಂಡಿಯು ಲೇಸು ।
ಮಕ್ಕಳನು ಹೆರುವ ಸತಿ ಲೇಸು, ಜಗಕೆಲ್ಲ ।
ರೊಕ್ಕವೇ ಲೇಸು ಸರ್ವಜ್ಞ ॥ ೧೧೨೦ ॥

ಮಲ್ಲಿಗೆಯು ಹೂ ಲೇಸು । ಬಲ್ಲವರ ಕೆಳೆ ಲೇಸು ।
ನಿಲ್ಲದೆ ಕರೆವ ಹಸು ಲೇಸು, ಕೂರ್ಪವಳ ।
ಸೊಲ್ಲು ಲೇಸೆಂದ ಸರ್ವಜ್ಞ ॥ ೧೧೨೧ ॥

ಮಜ್ಜಿಗೂಟಕೆ ಲೇಸು । ಸಜ್ಜನಕೆ ಮಡಿ ಲೇಸು ।
ಕಜ್ಜಾಯ ತುಪ್ಪ ಉಣ ಲೇಸು, ಮನೆಗೊಬ್ಬ ।
ಅಜ್ಜಿ ಲೇಸೆಂದ ಸರ್ವಜ್ಞ ॥ ೧೧೨೨ ॥

ಹಸಿದರಂಬಲಿ ಲೇಸು । ಬಿಸಿಲಿಂಗೆ ಕೊಡೆ ಲೇಸು ।
ಬಸುರಿನ ಸೊಸೆಯು ಇರೆ ಲೇಸು, ಸಭೆಗೊಬ್ಬ ।
ರಸಿಕ ಲೇಸೆಂದ ಸರ್ವಜ್ಞ ॥ ೧೧೨೩ ॥

ಹರಳು ಉಂಗುರ ಲೇಸು । ಹುರಳಿ ಕುದುರೆಗೆ ಲೇಸು ।
ಮರಳು ನೆಲ ತೆಂಗಿಗಿರಲೇಸು, ಸ್ತ್ರೀಯರಿಗೆ ।
ಕುರುಳು ಲೇಸೆಂದ ಸರ್ವಜ್ಞ ॥ ೧೧೨೪ ॥

ಹುತ್ತ ಹಾವಿಗೆ ಲೇಸು । ಮುತ್ತು ಕೊರಳಿಗೆ ಲೇಸು ।
ಕತ್ತಿಯು ಹೇರು ತರ ಲೇಸು, ತುಪ್ಪದ ।
ತುತ್ತು ಲೇಸೆಂದ ಸರ್ವಜ್ಞ ॥ ೧೧೨೫ ॥

ಒನರುವ ತೊರೆ ಲೇಸು । ಹನನಾದ ಕರೆ ಲೇಸು ।
ವನರವಿರುಪವನ ನೆರೆ ಲೇಸು, ನಾಗರವು ।
ವಸುಧೆಗೆ ಲೇಸು ಸರ್ವಜ್ಞ ॥ ೧೧೨೬ ॥

ಇಂಬಿನ ಮನೆ ಲೇಸು । ಶಂಭುವಿನ ದಯೆ ಲೇಸು ।
ನಂಬುಗೆಯನೀವ ನೃಪ ಲೇಸು, ಕರೆ ಬಾವಿ ।
ತುಂಬಿರಲು ಲೇಸು ಸರ್ವಜ್ಞ ॥ ೧೧೨೭ ॥

ಜಾಣೆಯ ನುಡಿ ಲೇಸು । ವೀಣೆಯ ಸ್ವರ ಲೇಸು ।
ಮಾಣದಲೆ ವದನ ಶುಚಿ ಲೇಸು, ಕೂರ್ಪವರ ।
ಕಾಣುವದೆ ಲೇಸು ಸರ್ವಜ್ಞ ॥ ೧೧೨೮ ॥

ಬಾಳೆಯ ವನ ಲೇಸು । ಮಾಳಿಗೆಯ ಮನೆ ಲೇಸು ।
ಬಾಳುವರೆ ಕೆಂಚ ಸತಿ ಲೇಸು, ಮೆಲ್ಲಲ್ಕೆ ।
ಹೋಳಿಗೆಯು ಲೇಸು ಸರ್ವಜ್ಞ ॥ ೧೧೨೯ ॥

ಹರಕು ಹೋಳಿಗೆ ಲೇಸು । ಮುರುಕ ಹಪ್ಪಳ ಲೇಸು ।
ಕುರುಕುರು ಕಡಲೆ ಬಲು ಲೇಸು, ವಾಯುಸದ ।
ಸುರುಕು ಲೇಸೆಂದ ಸರ್ವಜ್ಞ ॥ ೧೧೩೦ ॥

ಕರಿಕೆ ಕುದುರೆಗೆ ಲೇಸು । ಮುರುಕು ಹೆಣ್ಣಿಗೆ ಲೇಸು ।
ಅರಿಕೆಯುಳ್ಳವರ ಕೆಳೆ ಲೇಸು, ಸೇವಿಗೆಯ ।
ಸುರುಕು ಲೇಸೆಂದ ಸರ್ವಜ್ಞ ॥ ೧೧೩೧ ॥

ಕಾಸು ವೆಚ್ಚಕೆ ಲೇಸು । ದೋಸೆ ಹಾಲಿಗೆ ಲೇಸು ।
ಕೂಸಿಗೆ ತಾಯಿಯಿರೆ ಲೇಸು, ಹರೆಯದಗೆ ।
ಮೀಸೆ ಲೇಸೆಂದ ಸರ್ವಜ್ಞ ॥ ೧೧೩೨ ॥

ಗಿಡ್ಡ ಹೆಂಡತಿ ಲೇಸು । ಮಡ್ಡಿ ಕುದುರೆಗ ಲೇಸು ।
ಬಡ್ಡಿಯ ಸಾಲ ಕೊಡೆಲೇಸು, ಹಿರಿಯರಿಗೆ ।
ಗಡ್ಡ ಲೇಸೆಂದ ಸರ್ವಜ್ಞ ॥ ೧೧೩೩ ॥

ಮಂಜಿನಿಂ ಮಳೆ ಲೇಸು । ಪಂಜು ಇರುಳಲಿ ಲೇಸು ।
ಪಂಜರವು ಲೇಸು ಅರಗಿಳಿಗೆ, ಜಾಡಂಗೆ ।
ಗಂಜಿ ಲೇಸೆಂದ ಸರ್ವಜ್ಞ ॥ ೧೧೩೪ ॥

ಗಾಜು ನೋಟಕೆ ಲೇಸು । ಮೋಜು ಇರುಳಲಿ ಲೇಸು ।
ರಾಜಾಂಗ ವಸ್ತ್ರ ಉಡ ಲೇಸು, ಊಟಕ್ಕೆ ।
ರಾಜಾನ್ನ ಲೇಸು ಸರ್ವಜ್ಞ ॥ ೧೧೩೫ ॥

ಜ್ಞಾನಿಗೆ ಗುಣ ಲೇಸು । ಮಾನಿನಿಗೆ ಪತಿ ಲೇಸು ।
ಸ್ವಾನುಭಾವಿಗಳ ನುಡಿ ಲೇಸು, ಎಲ್ಲಕು ನಿ ।
ಧಾನಿಯೆ ಲೇಸು ಸರ್ವಜ್ಞ ॥ ೧೧೩೬ ॥

ತುಪ್ಪ ಓಗರ ಲೇಸು । ಉಪ್ಪರಿಗೆ ಮನೆ ಲೇಸು ।
ಅಪ್ಪಬಾರೆಂಬ ಮಗ ಲೇಸು ಊರೊಳಗೆ ।
ಚಿಪ್ಪಿಗನು ಲೇಸು ಸರ್ವಜ್ಞ ॥ ೧೧೩೭ ॥

ಕಂಚಿಯ ಫಲ ಲೇಸು । ಮಿಂಚು ಮುಗಿಲಿಗೆ ಲೇಸು ।
ಕೆಂಚನೆಯ ಸತಿಯು ಇರೆ ಲೇಸು, ಊರಿಂಗೆ ।
ಪಂಚಾಳ ಲೇಸು ಸರ್ವಜ್ಞ ॥ ೧೧೩೮ ॥

ಎಮ್ಮೆ ಹಯನವು ಲೇಸು । ಕಮ್ಮನಾಮ್ಲವು ಲೇಸು ।
ನಮ್ಮನೆ ಒಡವೆ ಬರೆಲೇಸು, ಊರಿಂಗೆ ।
ಕಮ್ಮಾರ ಲೇಸು ಸರ್ವಜ್ಞ ॥ ೧೧೩೯ ॥

ಹಡಗು ಗಾಳಿಗೆ ಲೇಸು । ಗುಡುಗು ಮಳೆ ಒರೆ ಲೇಸು ।
ಒಡಹುಟ್ಟಿದವರು ಇರಲೇಸು, ಊರಿಂಗೆ ।
ಬಡಿಗ ಲೇಸೆಂದ ಸರ್ವಜ್ಞ ॥ ೧೧೪೦ ॥

ಅಂಬು ಬಿಲ್ಲಿಗೆ ಲೇಸು । ಇಂಬು ಕೋಣೆಗೆ ಲೇಸು ।
ಸಂಬಾರ ಲೇಸು ಸಾರಿಗೆ, ಊರಿಂಗೆ ।
ಕುಂಬಾರ ಲೇಸು ಸರ್ವಜ್ಞ ॥ ೧೧೪೧ ॥

ಆಗನೆ ಊರಿಗೆ ಲೇಸು । ನೊಗಸು ಬಾಳುವೆ ಲೇಸು ।
ಬೊಗನೆಯುಳ್ಳವರ ಕೆಳೆ ಲೇಸು, ಊರಿಂಗೆ ।
ಆಗಸ ಲೇಸೆಂದ ಸರ್ವಜ್ಞ ॥ ೧೧೪೨ ॥

ಜಾಣ ಜಾಣಗೆ ಲೇಸು । ಕೋಣ ಕೋಣಗೆ ಲೇಸು ।
ನಾಣ್ಯವದು ಲೇಸು ಹರದಂಗೆ, ಊರಿಂಗೆ ।
ಗಾಣಿಗನು ಲೇಸು ಸರ್ವಜ್ಞ ॥ ೧೧೪೩ ॥

ಅಕ್ಕಿಬೋನವು ಲೇಸು । ಸಿಕ್ಕ ನೆರೆ ಬಿಡೆ ಲೇಸು ।
ಹಕ್ಕಿಗಳೊಳಗೆ ಗಿಳಿ ಲೇಸು, ಊರಿಗೊ ।
ಬ್ಬಕ್ಕನಾಲೆಂದ ಸರ್ವಜ್ಞ ॥ ೧೧೪೪ ॥

## ೨೦ ಹೊಲ್ಲ ಪದ್ಧತಿ

ಕಣಿಕ ನೆನೆದರೆ ಹೊಲ್ಲ । ಕುಣಿಕೆ ಹರಿದರೆ ಹೊಲ್ಲ ।
ಕಣುಕಟ್ಟು ಹೊಲ್ಲ ಅರಿದರಲಿ, ಚಿಕ್ಕೆಗಳ ।
ಎಣಿಸುವದ ಹೊಲ್ಲ ಸರ್ವಜ್ಞ ॥ ೧೧೪೫ ॥

ಕರಿಕೆಯು ಹೊಲ ಹೊಲ್ಲ । ಅರಿಕೆ ಹಾದರ ಹೊಲ್ಲ ।
ಇರುಕಿನಲಿ ಸಿಲುಕಿ ಇರಹೊಲ್ಲ, ನಿದ್ದೆಯುಲಿ ।
ಗೊರಕೆಯೇ ಹೊಲ್ಲ ಸರ್ವಜ್ಞ ॥ ೧೧೪೬ ॥

ವನಕೆ ಬಾವುಲಿ ಹೊಲ್ಲ । ಜನಕೆ ಬಂಧನ ಹೊಲ್ಲ ।
ಕನಕವುಳ್ಳವರ ಹಗೆ ಹೊಲ್ಲ, ಗೂಬೆಗೆ ।
ದಿನಕರನೆ ಹೊಲ್ಲ ಸರ್ವಜ್ಞ ॥ ೧೧೪೭ ॥

ಹರಳು ಹಾದಿಗೆ ಹೊಲ್ಲ । ಮರುಳ ಮನೆಯೊಳು ಹೊಲ್ಲ ।
ಇರುಳೊಳಗೆ ಪಯಣ ಬರ ಹೊಲ್ಲ, ಆಗದಲಿ ।
ಸರಸವೇ ಹೊಲ್ಲ ಸರ್ವಜ್ಞ ॥ ೧೧೪೮ ॥

ಉಪ್ಪಿಲ್ಲದುಣ ಹೊಲ್ಲ । ಮುಪ್ಪು ಬಡವಗೆ ಹೊಲ್ಲ ।
ತಪ್ಪ ತಾ ನುಡಿವ ಸತಿ ಹೊಲ್ಲ, ಒಪ್ಪಿರಲು ।
ತಪ್ಪುವದೆ ಹೊಲ್ಲ ಸರ್ವಜ್ಞ ॥ ೧೧೪೯ ॥

ಸಂತೆಯ ಮನೆ ಹೊಲ್ಲ । ಚಿಂತೆಯ ತನು ಹೊಲ್ಲ ।
ಎಂತೊಲ್ಲದವಳ ರತಿ ಹೊಲ್ಲ, ಬಾಳುವರಿ ।
ಗಂತಕನೆ ಹೊಲ್ಲ ಸರ್ವಜ್ಞ ॥ ೧೧೫೦ ॥

ನೋರುವ ಮನೆ ಹೊಲ್ಲ । ಜಾರೆ ಸತಿಯಿರಹೊಲ್ಲ ।
ಹೋರುವ ನೊಸೆಯ ನೆರೆಹೊಲ್ಲ, ಕನ್ನದ ।
ಸೂರೆಯೇ ಹೊಲ್ಲ ಸರ್ವಜ್ಞ ॥ ೧೧೫೧ ॥

ಸನ್ತೆಸಾಲಕೆ ಹೊಲ್ಲ । ಕೊನ್ತ ಡೊಂಕಲು ಹೊಲ್ಲ ।
ಬೊನ್ತೆ ಹಚ್ಚಡವ ಹೊದೆ ಹೊಲ್ಲ, ಆಗಲು ।
ಚಿನ್ತೆಯೇ ಹೊಲ್ಲ ಸರ್ವಜ್ಞ ॥ ೧೧೫೨ ॥

ಮಗಳ ಮಕ್ಕಳು ಹೊಲ್ಲ । ಹಗೆಯವರ ಗೆಣೆಹೊಲ್ಲ ।
ಜಗಳವಾಡುವಳ ನೆರೆಹೊಲ್ಲ, ಮೂಗಿಗೆ ।
ನೆಗಡಿ ಹೊಲ್ಲೆಂದ ಸರ್ವಜ್ಞ ॥ ೧೧೫೩ ॥

ಮೋಟಿತ್ತ ಕೊಳ ಹೊಲ್ಲ । ನೋಟ ಬೇಟವು ಹೊಲ್ಲ ।
ತಾಟಗಿತ್ತಿಯ ನೆರೆ ಹೊಲ್ಲ, ಕಜ್ಜಿಯ ।
ಕಾಟವೆ ಹೊಲ್ಲ ಸರ್ವಜ್ಞ ॥ ೧೧೫೪ ॥

ವಿಸಹೊಲ್ಲ ಇಟ್ಟಿಯ । ಕುಸಿ ಹೊಲ್ಲ ಕಟ್ಟಡದ ।
ಹುಸಿ ಹೊಲ್ಲ ಕೂರ್ಪರೆಡೆಯಲ್ಲಿ, ಏರಿಕೆಯ ।
ಬಿಸಿಲು ಹೊಲ್ಲೆಂದ ಸರ್ವಜ್ಞ ॥ ೧೧೫೫ ॥

ಹಂದೆ ಭಟರೊಳು ಹೊಲ್ಲ । ನಿಂದೆಯ ನುಡಿ ಹೊಲ್ಲ ।
ಕುಂದುಗುಲದವಳ ತರಹೊಲ್ಲ, ಉರಿಯೊಳಗೆ ।
ನಿಂದಿರಲು ಹೊಲ್ಲ ಸರ್ವಜ್ಞ ॥ ೧೧೫೬ ॥

ಕದನ ನೆರೆಯಲಿ ಹೊಲ್ಲ । ವದನ ನಾರಲು ಹೊಲ್ಲ ।
ಬದನೆ ರೋಗದಲಿ ಉಣ ಹೊಲ್ಲ, ಹಗೆಗಳ ।
ಸದನವೇ ಹೊಲ್ಲ ಸರ್ವಜ್ಞ ॥ ೧೧೫೭ ॥

ಬರಕೆ ಬುತ್ತಿಯು ಹೊಲ್ಲ। ನೆರಕೆಯ ಮನೆ ಹೊಲ್ಲ।
ಕರೆ ಕರೆಯ ಕೂಳನುಣ ಹೊಲ್ಲ, ಕಜ್ಜಿಯನು।
ಕೆರಕೊಳ್ಳ ಹೊಲ್ಲ ಸರ್ವಜ್ಞ ॥ ೧೧೫೮ ॥

ಹುತ್ತ ಹಿತ್ತಲು ಹೊಲ್ಲ। ಬೆತ್ತ ಭೂತಕೆ ಹೊಲ್ಲ।
ಒತ್ತಿಗೊಂಬಳಿಗೆ ತುರಿಹೊಲ್ಲ, ಒಣಕೂಳ।
ತುತ್ತು ತಾ ಹೊಲ್ಲ ಸರ್ವಜ್ಞ ॥ ೧೧೫೯ ॥

ಚಿತ್ತದ ಹೊಲ ಹೊಲ್ಲ। ಮತ್ತದ ಮನೆ ಹೊಲ್ಲ।
ಎತ್ತ ಬಂದತ್ತ ತಿರುಗುವ ಮೃಗ ಹೊಲ್ಲ।
ಬತ್ತಲಿರ ಹೊಲ್ಲ ಸರ್ವಜ್ಞ ॥ ೧೧೬೦ ॥

ಒಗರು ಫಲ ತಿನ ಹೊಲ್ಲ। ಬೊಗರೆ ಜಲ ಹೊಗ ಹೊಲ್ಲ।
ಬೊಗಳುವ ನಾಯ ನೆರೆ ಹೊಲ್ಲ, ಮನೆಯಲಿ।
ಜಗಳವೇ ಹೊಲ್ಲ। ಸರ್ವಜ್ಞ ॥ ೧೧೬೧ ॥

## ೨೧. ನೀತಿ ಪದ್ಧತಿ

### ಧರ್ಮನೀತಿ

#### ಪಾಪಪುಣ್ಯ

ಪುಣ್ಯಪಾಪಗಳೆಂಬ। ತಿಣ್ಣ ಭೇದಗಳಿಂದ।
ತಣ್ಣಗೀ ಜಗವು ನಡೆದಿಹುದು ಅಲ್ಲದಡೆ।
ನುಣ್ಣಗಾಗಿಹುದು ಸರ್ವಜ್ಞ ॥ ೧೧೬೨ ॥

ಮುನ್ನ ಮಾಡಿದ ಪಾಪ। ಹೊನ್ನಿಂದ ಪೋಪುದೆ?।
ಹೊನ್ನಿನ ಪುಣ್ಯವದು ಬೇರೆ, ಪಾಪ ತಾ।
ಮುನ್ನಿನಂತಿಹುದು ಸರ್ವಜ್ಞ ॥ ೧೧೬೩ ॥

ಕಿರಿಯಂದಿನಾಪಾಪ। ನೆರೆ ಬಂದು ಹೋದೀತೆ?।
ಅರಿವಿಂಗೆ ಹಿರಿದು ಕಿರಿದಿಲ್ಲ, ಇದನು ನೀ।
ನರಿದು ನೋಡೆಂದ। ಸರ್ವಜ್ಞ ॥ ೧೧೬೪ ॥

ಹಿಂದೆ ಪಾಪವ ಮಾಡಿ । ಮುಂದೆ ಪುಣ್ಯವು ಹೇಗೆ? ।
ಹಿಂದು ಮುಂದರಿದು ನಡೆಯದಿರೆ ನರಕದಲಿ ।
ಬೆಂದು ನಾಯುವದು ಸರ್ವಜ್ಞ ॥ ೧೧೬೫ ॥

ಹರೆಯಲ್ಲಿನಾಪಾವ । ಕೆರೆಯಲ್ಲಿ ಪೋಪುದೇ? ।
ಒರೆಗಲ್ಲಿನಂತೆ ವಿಧಿಯಿರಲು, ನೀತಿಯು ।
ಇರವು ಬೇರೆಂದ । ಸರ್ವಜ್ಞ ॥ ೧೧೬೬ ॥

ಅರಿಯದೆಸಗಿದ ಪಾವ । ಅರಿತರದು ತನಗೊಳಿತು ।
ಅರಿತರಿತು ಮಾಡಿ ಮರೆತರದು ನಯನವನು ।
ಇರಿದುಕೊಂಡಂತೆ ಸರ್ವಜ್ಞ ॥ ೧೧೬೭ ॥

ಅರಿತು ಮಾಡಿದ ಪಾಪ। ಮರೆತರದು ಪೋಪುದೇ? ।
ಮರೆತರೆ ಮರವ ಬಿಡಿಸುವದು, ಕೊರತೆಯದು ।
ಅರಿತು ನೋಡೆಂದ ಸರ್ವಜ್ಞ ॥ ೧೧೬೮ ॥

ಪುಣ್ಯತನಗುಳ್ಳನಕ । ಮನ್ನಣೆಯು ಪಿರಿದಕ್ಕು ।
ಹಣ್ಣಿದ ಕಾರ್ಯ ಫಲವಕ್ಕು, ಮುಟ್ಟಿದ ।
ಮಣ್ಣು ಹೊನ್ನಕ್ಕು ಸರ್ವಜ್ಞ ॥ ೧೧೬೯ ॥

ತೋಡಿರ್ದ ಬಾವಿಂಗೆ । ಕೂಡಿರ್ದ ಜಲಸಾಕ್ಷಿ ।
ಮಾಡಿರ್ದಕೆಲ್ಲ ಮನಸಾಕ್ಷಿ, ಸರ್ವಕು ।
ಮೃಡನೆ ತಾ ಸಾಕ್ಷಿ । ಸರ್ವಜ್ಞ ॥ ೧೧೭೦ ॥

ಸತ್ಯ

ಸತ್ಯನುಡಿದತ್ತರೂ । ಸುತನೊಬ್ಬ ಸತ್ತರೂ ।
ಸತ್ಯವನು ಬಿಡದ ಹರಿಚಂದ್ರ ಜಗದೊಳಗೆ ।
ಸ್ತುತ್ಯನಾಗಿಹನು ಸರ್ವಜ್ಞ ॥ ೧೧೭೧ ॥

ಸತ್ಯವೆಂಬುದು ತಾನು । ನಿತ್ಯದಲಿ ಮೆರೆದಿಹುದು ।
ಮಿಥ್ಯಸತ್ಯವನು ಬೆರೆದರೂ ಇಹಪರದಿ ।
ಸತ್ಯಕ್ಕೆ ಜಯವು ಸರ್ವಜ್ಞ ॥ ೧೧೭೨ ॥

ಬತ್ತಿಯೆಣ್ಣೆಗಳೆರಡು । ಹೊತ್ತಿ ಬೆಳಗುವ ತೆರದಿ ।
ಸತ್ಯ ನೀತಿಗಳು ಬೆಳಗಿಹವು, ಜೋಡಗಲೆ ।
ಕತ್ತಲೀಜಗವು ಸರ್ವಜ್ಞ ॥ ೧೧೭೩ ॥

ಸತ್ಯರಿಗೆ ಧರೆಯೆಲ್ಲ। ಮಸ್ತಕವನೆರಗುವದು ।
ಹೆತ್ತ ತಾಯ್ಮಗನ ಕರೆವಂತೆ ಶಿವನವರ ।
ನೆತ್ತಿಕೊಂಬುವನು ಸರ್ವಜ್ಞ ॥ ೧೧೭೪ ॥

ಕುಂದನಳಿದವ ದೈವ । ಬಂಧ ಕಳೆದವ ದೈವ ।
ನೊಂದು ತಾ ನೊಯಿಸದವ ದೈವ ಹುಸಿಯದನು ।
ಇಂದುಧರನೆಂದ ಸರ್ವಜ್ಞ ॥ ೧೧೭೫ ॥

ಸುಳ್ಳು

ಹುಸಿವನಿಂದ್ಯೆನೂರು । ಪಶುವ ಕೊಂದವ ಲೇಸು ।
ಸಿಸುವಧೆಯ ಮಾಡಿದವ ಲೇಸು, ಮರೆಯಲಿ ।
ದ್ದೆನೆದರೂ ಲೇಸು ಸರ್ವಜ್ಞ ॥ ೧೧೭೬ ॥

ಹಾಲಿನ ಹಸು ಲೇಸು । ಶೀಲದ ಶಿಶು ಲೇಸು ।
ಬಾಲೆ ಸಜ್ಜನೆಯು ಬಲು ಲೇಸು, ಹುಸಿಯದ।
ನಾಲಗೆಯೆ ಲೇಸು ಸರ್ವಜ್ಞ ॥ ೧೧೭೭ ॥

ಆಡಿ ಹುಸಿಯಲು ಹೊಲ್ಲ । ಕೂಡಿ ತಪ್ಪಲು ಹೊಲ್ಲ ।
ಕಾಡುವ ನೆಂಟ ಬರ ಹೊಲ್ಲ, ಸಟೆಯ ತಾ ।
ನಾಡುವದೆ ಹೊಲ್ಲ ಸರ್ವಜ್ಞ ॥ ೧೧೭೮ ॥

ಕಾಲು ಹೋದರೆ ಹೊಲ್ಲ । ಬಾಲೆ ಮುದುಕಗೆ ಹೊಲ್ಲ ।
ನಾಲಿಗೆಯಲೆರಡು ನುಡಿ ಹೊಲ್ಲ, ಸಮರದಲಿ ।
ನೋಲುವದೆ ಹೊಲ್ಲ ಸರ್ವಜ್ಞ ॥ ೧೧೭೯ ॥

ದಿಟವೆ ಪುಣ್ಯದ ಪುಂಜ । ಸಟೆಯೆ ಪಾಪದ ಬೀಜ ।
ಕುಟಿಲ ವಂಚನೆಗೆ ಪೋಗದಿರು, ನಿಜದಿ ಪಿಡಿ ।
ಘಟವನೆಚ್ಚರದಿ ಸರ್ವಜ್ಞ ॥ ೧೧೮೦ ॥

ಹೇಸಿಯ ಪೇಳ್ವುದರಿಂದ । ಹಸಿದು ಸಾವುದು ಲೇಸು ॥
ಹುಸಿದು ಮೆರೆಯುವನ ಬದುಕಿಂದ ಹಂದಿಯು ।
ಇಸಿಯು ಲೇಸೆಂದ ಸರ್ವಜ್ಞ ॥ ೧೧೮೧ ॥
ಹುಸಿವಾತ ದೇಗುಲದ । ದೆಸೆಯತ್ತ ಮುಂತಾಗಿ ।
ನೊಸಲೆತ್ತಿ ಕರವ ಮುಗಿದಿಹರೆ ಆನಿತುದ್ದ ।
ಹುಸಿವನೆಂದರಿಗು ಸರ್ವಜ್ಞ ॥ ೧೧೮೨ ॥

ಕಳ್ಳತನ

ಕಷ್ಟಗಳು ಓಡಿಬರಲಿ । ಪ್ಟಕ್ಕೆ ಭಯವೇಕೆ? ।
ಶಿಷ್ಟಂಗೆ ತೊದಲು ನುಡಿಯೇಕೆ ? ಕಳ್ಳಂಗೆ ।
ದಟ್ಟಡಿಯದೇಕೆ ? ಸರ್ವಜ್ಞ ॥ ೧೧೮೩ ॥
ನಿದ್ದೆಯಲಿ ಬುದ್ಧಿಲ್ಲ । ಭದ್ರೆಗಂ ತಾಯಿಲ್ಲ ।
ಕದ್ದುಂಬುವಂಗೆ ಬದುಕಿಲ್ಲ, ಮರಣಕ್ಕೆ ।
ಮದ್ದುಗಳೆ ಇಲ್ಲ ಸರ್ವಜ್ಞ ॥ ೧೧೮೪ ॥
ಕೆಂಪಿನ ದಾಸಾಳ । ಕೆಂಪುಂಟು ಕಂಪಿಲ್ಲ ।
ಕೆಂಪಿನವರಲ್ಲಿ ಗುಣವಿಲ್ಲ, ಕಳ್ಳ ತಾ ।
ಕೆಂಪಿರ್ದಡೇನು ಸರ್ವಜ್ಞ ॥ ೧೧೮೫ ॥
ಒಳ್ಳೆಯನು ಇರದೂರು । ಕಳ್ಳನೊಡನಾಟವು ।
ಸುಳ್ಳನ ಮಾತು, ಇವು ಮೂರು, ಕೆಸರೊಳಗೆ ।
ಮುಳ್ಳು ತುಳಿದಂತೆ ಸರ್ವಜ್ಞ ॥ ೧೧೮೬ ॥
ಕಳ್ಳತನ ಮೋಸಗಳು । ಸುಳ್ಳಿನ ಮೂಲವವು ।
ಕಳ್ಳ, ಕೈಗಳ್ಳ, ಮೈಗಳ್ಳನೊಮ್ಮೆ ತಾ ।
ಕೊಳ್ಳಗಾಣುವನು ! ಸರ್ವಜ್ಞ ॥ ೧೧೮೭ ॥

ಅನ್ಯಾಯ

ನ್ಯಾಯದಲಿ ನಡೆದು ಆ । ನ್ಯಾಯವೇ ಬಂದಿಹುದು ।
ನಾಯಿಗಳು ಆರು ಇರುವನಕ ನರಕೊಂದು ।
ನಾಯಿ ಹಿಂಡೆಂದ ಸರ್ವಜ್ಞ ॥ ೧೧೮೮ ॥

ಪ್ರಾಣ ಹಿಂಸೆ

ತಾಯ ಮುಂದಣ ಸಿಸುವ । ತಾಯನಗಲಿಸಿ ಕೊಲುವ ।
ತಾಯನೇ ಕೊಂದು ತಿನುವಾತ ತನ್ನಯ ।
ತಾಯ ಕೊಂದಂತೆ ಸರ್ವಜ್ಞ ॥ ೧೧೮೯ ॥

ಕೊಂದು ತಿನ್ನುವ ಕಂದ । ಕೊಂದನೆಂದೆನಬೇಡ ।
ನೊಂದಂತೆ ನೋವನರಿಯದ ನರನಂದು ।
ಕೊಂದಿಹುದೆ ನಿಜವು ಸರ್ವಜ್ಞ ॥ ೧೧೯೦ ॥

ಕತ್ತಲೆಯ ಮಕ್ಕಳು

ಬೆಕ್ಕಿಲಿಯು ಗೂಬೆಯೂ । ಚಿಕ್ಕಾಡು ತಗುಣೆಯೂ ।
ರಕ್ಕಸ, ಕಳ್ಳ, ಜಾರರುರೆ ಕತ್ತಲೆಯ ।
ಮಕ್ಕಳೆಂದರಿಗು ಸರ್ವಜ್ಞ ॥ ೧೧೯೧ ॥

ನರಹತ್ಯ

ನರಹತ್ಯವೆಂಬುವದು । ನರಕದ ನಡುಮನೆಯು ।
ಗುರು, ಭ್ರೂಣ, ಹತ್ಯ, ಸ್ತ್ರೀಹತ್ಯ, ಮಾಡಿದನ ।
ಇರವು ರೌರವವು ಸರ್ವಜ್ಞ ॥ ೧೧೯೨ ॥

ಕಲಹ

ಬಲವಂತರಾದವರು । ಕಲಹದಿಂ ಕೆಟ್ಟಿಹರು ।
ಬಲವಂತ ಬಲಿಯು ದುರ್ಯೋಧನಾದಿಗಳು ।
ಛಲದಲುಳಿದಿಹರೆ? ಸರ್ವಜ್ಞ ॥ ೧೧೯೩ ॥

ಕಾಮ

ಅಂದು ಕಾಮನ ಹರನು । ಕೊಂದನೆಂಬುದು ಪುಸಿಯು ।
ಇಂದು ವದನೆಯರ ಕಡೆಗಣ್ಣ ನೋಟದಿ ।
ನಿಂದಿಹನು ಸ್ಮರನು ಸರ್ವಜ್ಞ ॥ ೧೧೯೪ ॥

ಮುಟ್ಟಿದಂತಿರಬೇಕು । ಮುಟ್ಟದಲೆ ಇರಬೇಕು ।
ಮುಟ್ಟಿಯೂ ಮುಟ್ಟದಿರಬೇಕು ಪರಸ್ತ್ರೀಯ ।
ಮುಟ್ಟಿದವ ಕೆಟ್ಟ ಸರ್ವಜ್ಞ ॥ ೧೧೯೫ ॥

ಮುಟ್ಟದಲೆ ಇರಬೇಕು । ಮುಟ್ಟಿನೋಡಲು ಬೇಕು ।
ಮುಟ್ಟಿದರೆ ಮುಟ್ಟು, ಸತಿಯನು, ಪರಸತಿಯ ।
ಮುಟ್ಟಲೇಬೇಡ । ಸರ್ವಜ್ಞ ॥ ೧೧೯೬ ॥

ಪರಸ್ತ್ರೀಯ ಗಮನದಿಂ । ಪರಲೋಕವದು ಹಾನಿ ।
ಸಿರಿತಗ್ಗಿ ತಲೆಯು ತೊಲಗಿತಾರಾವಣಗೆ ।
ನರಲೋಕದಲ್ಲಿ ಸರ್ವಜ್ಞ ॥ ೧೧೯೭ ॥

ಒಂದು ಒಂಭತ್ತು ತಲೆ । ಸಂದ ತೋಳಿಪ್ಪತ್ತು ।
ಬಂಧುಗಳನೆಲ್ಲ ಕೆಡಿಸಿತ್ತು, ಪತಿವ್ರತೆಯ ।
ತಂದ ಕಾರಣದಿ ಸರ್ವಜ್ಞ ॥ ೧೧೯೮ ॥

ಈರೈದು ತಲೆಯುಳ್ಳ । ಧೀರ ರಾವಣ ಮಡಿದ ।
ವೀರ ಕೀಚಕನು ಗಡ ಸತ್ತ, ಪರಸತಿಯ ।
ಸಾರ ಬೇಡೆಂದ ಸರ್ವಜ್ಞ ॥ ೧೧೯೯ ॥

ಆಗಳೇಳು ಸಾಸಿರವು । ಮುಗಿಲು ಮುಟ್ಟುವ ಕೋಟೆ ।
ಹಗಲೆದ್ದು ಹತ್ತು ತಲೆಯಾತ ಪರಸತಿಯ ।
ನೆಗೆದು ತಾ ಕೆಟ್ಟ ಸರ್ವಜ್ಞ ॥ ೧೨೦೦ ॥

ಎಂಟೆರಡು ತಲೆಯುಳ್ಳ । ಬಂಟ ರಾವಣ ಕೆಟ್ಟ ।
ತುಂಟ ಕೀಚಕನು ಕೆಯ್ದುಗೆದ ಪರಸತಿಯ ।
ನಂಟುಬೇಡೆಂದ ಸರ್ವಜ್ಞ ॥ ೧೨೦೧ ॥

ಸುರಪ ಹಂಸನು ಶಶಿಯು । ಕರಕರದ ರಾವಣನು ।
ವರಕೀಚಕಾದಿ ಬಲಯುತರು ಕೆಟ್ಟಿಹರು ।
ಪರಸತಿಯ ಪಿಡಿದು ಸರ್ವಜ್ಞ ॥ ೧೨೦೨ ॥

ನಾರಿಯುನು ಜಾರೆಯುನು । ಸಾರಿದರೆ ನೆರೆ ಕೇಡು ।
ನಾರಿಯಿಂ ಕೆಟ್ಟ ದಶಕಂಠ, ಪಾಂಡವರು ।
ಜಾರೆಯಿಂ ಕೆಡರೆ ಸರ್ವಜ್ಞ ॥ ೧೨೦೩ ॥

ಹಸ್ತಿಬಲ ಭೀಮ ತಾ । ಕಸ್ತ್ರಿಯಲಿ ಸಿಂಹಬಲ ।
ನಸ್ತ್ರಿಯನು ಮುರಿದು ಮಡುಹಿದನು ಹಾದರದ ।
ಪ್ರಸ್ತವೇ ಬೇಡ ಸರ್ವಜ್ಞ ॥ ೧೨೦೪ ॥

ಹಸ್ತದಲಿ ಭೀಮಬಲ । ಕಸ್ತ್ರಿಯಲಿ ಕಾಮಬಲ ।
ಕುಸ್ತ್ರಿಯಲಿ ಕೀಚಕನು ಮಡಿದ, ಪರಸತಿಯ ।
ಪ್ರಸ್ತವೇ ಬೇಡ ಸರ್ವಜ್ಞ ॥ ೧೨೦೫ ॥

ಸರಸವೆಗ್ಗಳಹೊಲ್ಲ । ಹೊರಸು ಕಿಗ್ಗಳ ಹೊಲ್ಲ ।
ಅರಸಾಳು ಮನೆಗೆ ಬರಹೊಲ್ಲ, ಪರಸತಿಯ ।
ಸರಸವೇ ಹೊಲ್ಲ ಸರ್ವಜ್ಞ ॥ ೧೨೦೬ ॥

ಮೊಬ್ಬಿನಲಿ ಕೊಬ್ಬದಿರು । ಉಬ್ಬಿ ನೀ ಬೀಳದಿರು ।
ಒಬ್ಬರಲಿ ಬಾಳ ಬಂದಲ್ಲಿ ಪರಸತಿಯು ।
ತಬ್ಬ ಬೇಡೆಂದ ಸರ್ವಜ್ಞ ॥ ೧೨೦೭ ॥

ತುರುಕನ ನೆರೆ ಹೊಲ್ಲ । ಹರದನ ಕೆಳೆ ಹೊಲ್ಲ ।
ತಿರಿಗೂಳನಟ್ಟು ಉಣಹೊಲ್ಲ, ಪರಸತಿಯ ।
ಸರಸವೇ ಹೊಲ್ಲ ಸರ್ವಜ್ಞ ॥ ೧೨೦೮ ॥

ಒಡಲ ಹಿಡಿದಾಡದಿರು । ನುಡಿಯ ಹೋಗಾಡದಿರು ।
ನಡೆಯೊಳೆಚ್ಚರವ ಬಿಡದಿರು, ಪರಸತಿಯ ।
ಕಡೆಗೆ ನೋಡದಿರು ಸರ್ವಜ್ಞ ॥ ೧೨೦೯ ॥

ಬೇಡ ಕಾಯದೆ ಕೆಟ್ಟ । ಜೇಡ ನೇಯದೆ ಕೆಟ್ಟ ।
ನೋಡದಲೆ ಕೆಟ್ಟ ಕೃಷಿಕನು, ಸತಿಯ ಬಿ ।
ಟ್ಟಾಡಿದವ ಕೆಟ್ಟ ಸರ್ವಜ್ಞ ॥ ೧೨೧೦ ॥

ಕೊಟ್ಟು ಮರುಗಲು ಬೇಡ । ಬಿಟ್ಟು ಹಿಡಿಯಲು ಬೇಡ ।
ಕೆಟ್ಟ ನಡೆಯುವಳ ನೆರೆ ಬೇಡ, ಪರಸತಿಯ ।
ಮುಟ್ಟಬೇಡೆಂದ ಸರ್ವಜ್ಞ ॥ ೧೨೧ ॥

ಜಾರತ್ವವೆಂಬುವದು । ಕ್ಷೀರ ಸಕ್ಕರೆಯಂತೆ ।
ಊರಲ್ಲಿ ಒಬ್ಬರರಿತಿಹರೆ ಬೇವಿನ ।
ಸಾರದಂತಿಹುದು ಸರ್ವಜ್ಞ ॥ ೧೨೨ ॥

ಹಾದರವು ಮುಚ್ಚಿದರೆ । ಕಾದಾರಿದಮೃತವು ।
ಹೋದುದನು ಒಬ್ಬರರಿದಿಹರೆ ಕಬ್ಬಿನವ ।
ಕಾದು ಎಳೆದಂತೆ ಸರ್ವಜ್ಞ ॥ ೧೨೩ ॥

ಪುರುಷ ಕಂಡರೆ ಕೊಲುವ । ಅರಸು ದಂಡವ ಕೊಂಬ ।
ನರರು ಸುರರೆಲ್ಲ ಮುನಿದಿಹರು, ಅಂತ್ಯಕ್ಕೆ ।
ನರಕ ಪರಸತಿಯು ಸರ್ವಜ್ಞ ॥ ೧೨೪ ॥

ಎಡವಿ ಬೊಟ್ಟೊಡೆದರೂ । ಕೆಡಹಿ ಕಡು ಬಡಿದರೂ ।
ನಡು ಬೆನ್ನಿನಲಗು ಮುರಿದರೂ ಹಾದರದ ।
ಕಡುಹು ಬಿಡದೆಂದ ಸರ್ವಜ್ಞ ॥ ೧೨೫ ॥

ಹಣವಳಿದು ಹೋದರೂ । ಹೆಣ ಬೀಳ ಹೊಡೆದರೂ ।
ಮೊಣಕಾಲ ಗಣಿಕೆ ಮುರಿದರೂ ಹಾದರದ ।
ಕುಣಿಕೆ ಬಿಡದೆಂದ ಸರ್ವಜ್ಞ ॥ ೧೨೬ ॥

ಅನ್ಯ ಸತಿಯನು ಕಂಡು । ತನ್ನ ಹೆತ್ತವಳೆಂದು ।
ಮನ್ನಿಸಿ ನಡೆವ ಪುರುಷಂಗೆ ಇಹಪರದಿ ।
ಮುನ್ನ ಭಯವಿಲ್ಲ ಸರ್ವಜ್ಞ ॥ ೧೨೭ ॥

## ಪಾತಿವ್ರತ್ಯ

ಹಣಗುಣವು ಬಲವುಳ್ಳ । ರಣಧೀರ ರಾವಣನ ।
ತೃಣವೆಂದು ಬಗೆದ ಪತಿವ್ರತೆ ಸೀತೆಗೆ ।
ಎಣೆಯಾರು ಹೇಳು ಸರ್ವಜ್ಞ ॥ ೧೨೮ ॥

ಮಾಳಿಗೆಯ ಮನೆ ಲೇಸು । ಗೂಳಿ ಪಶುವದು ಲೇಸು ।
ಈಳೆಯ ಹಿತ್ತಲಿರಲೇಸು, ಪತಿವ್ರತೆಯ ।
ಬಾಳು ಲೇಸೆಂದ ಸರ್ವಜ್ಞ ॥ ೧೨೯ ॥

ಅನ್ಯ ಪುರುಷನ ಕಂಡು । ತನ್ನ ಪಡೆದವನೆಂದು ।
ಮನ್ನಿಸಿ ನಡೆವ ಸತಿಯಳಿಗೆ ಸ್ವರ್ಗದೊಳು ।
ಹೊನ್ನಿನ ಮನೆಯು ಸರ್ವಜ್ಞ ॥ ೧೩೦ ॥

ಹೆತ್ತವರಿಗೆ ಬೆಲೆಯಿಲ್ಲ

ಮುತ್ತು ನೀರಲಿ ಹುಟ್ಟಿ । ಹತ್ತು ಸಾಸಿರ ಹಡೆಗು ।
ಹತ್ತು ಚಿಪ್ಪೊಂದು ಹಣವಿಲ್ಲ, ತಾಯ್ತಂದೆ ।
ಎತ್ತಣವರೆಂದ ಸರ್ವಜ್ಞ ॥ ೧೩೧ ॥

ಹಿರಿಯರಿಗೆ ಸನ್ಮಾನ

ತಂದೆತಾಯಿಗಳ ಘನ । ದಿಂದ ವಂದಿಸುವಂಗೆ ।
ಬಂದ ಕುತ್ತಗಳು ಬಯಲಾಗಿ ಸ್ವರ್ಗವದು ।
ಮುಂದೆ ಬಂದಕ್ಕು ಸರ್ವಜ್ಞ ॥ ೧೩೨ ॥

ಗುರುಗಳಿಗೆ ಹಿರಿಯರಿಗೆ । ಶಿರಬಾಗಿ ಎರಗಿದರೆ ।
ನರಸುರರು ಒಲಿದು ಸಿರಿಸುರಿದು ಕೈಲಾಸ ।
ಕರತಲಾಮಲಕ ಸರ್ವಜ್ಞ ॥ ೧೩೩ ॥

ಆವರೆಂದರವನು ತಾ । ನವರಂತೆ ಆಗುವನು ।
ಆವರೆನ್ನದವನು ಜಗದೊಳಗೆ ಬೆಂದಿರ್ದ ।
ಅವರೆಯಂತಕ್ಕು ಸರ್ವಜ್ಞ ॥ ೧೩೪ ॥

ಈಶತ್ವವಿಲ್ಲದಲೆ । ಈಶ್ವರನು ಎನಿಸಿಹನೆ? ।
ಈಶನಾನೀಶನೆನಬೇಡ ಜಗದಿ ಮಾ ।
ನೀಶನೇ ಈಶ! ಸರ್ವಜ್ಞ ॥ ೧೩೫ ॥

ತೆಂಗಿಂಗೆ ಹಿರಿಯರಿಗೆ । ಹಂಗು ಮಾಡಲೆ ಬೇಕು ।
ತೆಂಗಿನ ಮೊದಲಿಂಗೆ ನೀರೆರೆಯೆ ತುದಿಯಲ್ಲಿ ।
ಹಿಂಗದೀವಂತೆ ಸರ್ವಜ್ಞ ॥ ೧೨೬ ॥

### ಪರನಿಂದೆ

ರಾಗ ಯೋಗಿಗೆ ಹೊಲ್ಲ। ಭೋಗ ರೋಗಿಗೆ ಹೊಲ್ಲ।
ಓಗರವು ಎಣ್ಣೆ ಉಣಹೊಲ್ಲ, ಪರನಿಂದೆ ।
ಆಗಲು ಹೊಲ್ಲ ಸರ್ವಜ್ಞ ॥ ೧೨೭ ॥

ಮಾಡಿದುದನೊಪ್ಪದನ । ಮೂಢನಾಗಿಪ್ಪವನ ।
ಕೂಡಿ ತಾ ಮಾಡಿ ಇದಿರಾಡಿಕೊಳ್ಳುವನ ।
ನೋಡಿದರೆ ತೊಲಗು ಸರ್ವಜ್ಞ ॥ ೧೨೮ ॥

### ಲೋಭಿ

ನುಡಿಸುವದಸತ್ಯವನು । ಕೆಡಿಸುವದು ಧರ್ಮವನು ।
ಮುಡಿಸುವದು ಕಟ್ಟೆ ಒಡಲನು, ಲೋಭದ ।
ಗಡಣ ಕಾಣಯ್ಯ ಸರ್ವಜ್ಞ ॥ ೧೨೯ ॥

ಒಡಹುಟ್ಟಿದವ ಭಾಗ । ದೊಡವೆಯನು ಕೇಳಿಹರೆ ।
ಕೊಡದೆ ಕದನದಲಿ ಮಡಿದಿಹರೆ ಅದನು ತ ।
ನ್ನೊಡನೆ ಹೊಳುವರೆ ? ಸರ್ವಜ್ಞ ॥ ೧೩೦ ॥

ಲೋಭದಿಂ ಕೌರವನು । ಲಾಭವನು ಪಡೆದಿಹನೆ? ।
ನಾಭಿಯಿಂ ಕೆಳಗೆ ಎರಡೂರ ಕೊಂಬಾಗ ।
ಲಾಭ ಬಂದಿಹುದೆ ಸರ್ವಜ್ಞ ॥ ೧೩೧ ॥

ಆಶೆಯುತಿ ಕೇಡೆಂದು । ಹೇಸಿ ನಾಚುತಲಿಕ್ಕು !
ಆಶೆಯನು ಬಿಡದೆ ಅಭಿಮಾನಕ್ಹೋರಿದರೆ ।
ಗಾಸಿಯಾಗಿಕ್ಕು ಸರ್ವಜ್ಞ ॥ ೧೩೨ ॥

### ಗರ್ವ

ಉದ್ದುರುಟು ಮಾತಾಡಿ ಇದ್ದುದನು ಹೋಗಾಡಿ ।
ಉದ್ದನ ಮರದ ತುದಿಗೇರಿ ತಲೆಯೂರಿ ।
ಬಿದ್ದು ಸತ್ತಂತೆ ಸರ್ವಜ್ಞ ॥ ೧೨೩೩ ॥

ಅಂಧಕನು ನಿಂದಿರಲು ಮುಂದೆ ಬಪ್ಪರ ಕಾಣ ।
ಬಂದರೆ ಬಾಯೆಂದೆನದಿರ್ಪ ಗರುವಿಯು ।
ದಂದುಗವೆ ಬೇಡ ಸರ್ವಜ್ಞ ॥ ೧೨೩೪ ॥

### ವೈರ

ಜಾತಿ ಜಾತಿಗೆ ವೈರ । ನೀತಿ ಮೂರ್ಖಗೆ ವೈರ ।
ಪಾತಕವು ವೈರ ಸುಜನರ್ಗೆ, ಅರಿದಂಗೆ ।
ಏತರದು ವೈರ? ಸರ್ವಜ್ಞ ॥ ೧೨೩೫ ॥

### ನೀತಿಯ ನೆಲೆ

ನೀತ ದೇಶದ ಮಧ್ಯೆ । ನೀತಿಯ ಮನೆಯಿಹುದು ।
ಪಾತಕರಿಗಹುದು ನೆರೆಮನೆಯು, ಅರಮನೆ ವು ।
ನೀತರಿಗದೆಂದ ಸರ್ವಜ್ಞ ॥ ೧೨೩೬ ॥

## ವ್ಯವಹಾರ ನೀತಿ

### ದುಡ್ಡೆ ದೊಡ್ಡಪ್ಪ

ಧನಕನಕವುಳ್ಳನಕ । ದಿನಕರನ ವೋಲಕ್ಕು ।
ಧನಕನಕ ಹೋದ ಮರುದಿನ ಹಾಳೂರ ।
ಶುನಕನಂತಕ್ಕು ಸರ್ವಜ್ಞ ॥ ೧೨೩೭ ॥

ಎರಡು ಹಣವುಳ್ಳನಕ । ಗರುಡನಂತಿರುತಿಕ್ಕು ।
ಎರಡು ಹಣ ಮುಗಿದ ಮರುದಿನ ಮುದಿನಾಯ ।
ತೆರಡಿನಂತಕ್ಕು ಸರ್ವಜ್ಞ ॥ ೧೨೩೮ ॥

ನಾಲ್ಕು ಹಣವುಳ್ಳನಕ। ವಾಲ್ಕೆಯಲಿ ಮೆರೆದಿಕ್ಕು।
ನಾಲ್ಕು ಹಣ ಹೋದ ಮರುದಿನ ಕೋಳದಲಿ।
ಸಿಲ್ಕಿದಂತಕ್ಕು ಸರ್ವಜ್ಞ ॥ ೧೨೯ ॥

ಎಂಟು ಹಣವುಳ್ಳನಕ। ಬಂಟನೆಂದೆನಿಸಿಕ್ಕು।
ಎಂಟು ಹಣ ಹೋದ ಮರುದಿನ ಹುಳು ತಿಂದ।
ದಂಟಿನಂತಿಕ್ಕು ಸರ್ವಜ್ಞ ॥ ೧೩೦ ॥

ಸಿರಿಯಣ್ಣನುಳ್ಳನಕ। ಹಿರಿಯಣ್ಣ ನೆನಸಿಪ್ಪ।
ಸಿರಿಯಣ್ಣ ಹೋದ ಮರುದಿನ ಹಿರಿಯಣ್ಣ।
ನರಿಯಣ್ಣನೆಂದ ಸರ್ವಜ್ಞ ॥ ೧೩೧ ॥

ಮಡದಿ ಮಕ್ಕಳ ಮಮತೆ। ಒಡಲೊಡವೆಯಿರುವನಕ।
ಒಡಲೊಡವೆ ಕೆಡೆದ ಮರುದಿನವೆ ಅವರೆಲ್ಲ।
ಕಡೆಗೆ ನಾರಿಹರು ಸರ್ವಜ್ಞ ॥ ೧೩೨ ॥

ಅಪಕಾರಕ್ಕೆ ಉಪಕಾರ

ಮುನಿವಂಗೆ ಮುನಿಯದಿರು। ಕಿನಿವಂಗೆ ಕಿನಿಯದಿರು।
ಮನಸಿಜಾರಿಯನು ಮರೆಯದಿರು, ಶಿವಕೃಪೆಯು।
ಘನಕೆ ಘನವಕ್ಕು ಸರ್ವಜ್ಞ ॥ ೧೩೩ ॥

ಮುನಿವರನು ನೆನೆಯುತಿರು!। ವಿನಯದಲಿ ನಡೆಯುತಿರು!।
ವನಿತೆಯರ ಬಲೆಗೆ ಸಿಲುಕದಿರು! ಸಿರಿ ಸುಖವು।
ಮನದಣಿಯಲಕ್ಕು! ಸರ್ವಜ್ಞ ॥ ೧೩೪ ॥

ಆರಯ್ದು ನುಡಿವವನು। ಆರಯ್ದು ನಡೆವವನು।
ಆರಯ್ದು ಪದವನಿಡುವವನು ಲೋಕಕ್ಕೆ।
ಆರಾಧ್ಯನಕ್ಕು ಸರ್ವಜ್ಞ ॥ ೧೩೫ ॥

ಕೇಡನೊಬ್ಬಗೆ ಬಗೆದು। ಕೇಡು ತಪ್ಪದು ತನಗೆ।
ನೋಡಿ ಕೆಂಡವನು ಹಿಡಿದೊಗೆಯೆ ತನ್ನ ಕೈ।
ಕೂಡ ಬೆಂದಂತೆ ಸರ್ವಜ್ಞ ॥ ೧೩೬ ॥

ಕಂಡದ್ದಾಡಿದರೆ ಕೆಂಡ

ಕಂಡುದನು ಆಡೆ ಭೂ । ಮಂಡಲವು ಮುನಿಯುವದು ।
ಕೊಂಡಾಡುತಿಚ್ಛೆ ನುಡಿದಿಹರೆ ಜಗವೆಲ್ಲ ।
ಮುಂಡಾಡುತಿಹುದು ಸರ್ವಜ್ಞ ॥ ೧೨೪೭ ॥

ಕಂಡುದನು ಆಡಿದಡೆ । ಕೆಂಡವಾಗುವದೇಕೆ? ।
ಮಂಡಲದೊಳಗೆ ಜಾರದಿಹ ಮನುಜರನು ।
ಕಂಡಿರುವದುಂಟೆ? ಸರ್ವಜ್ಞ ॥ ೧೨೪೮ ॥

ಕಂಡಂತೆ ಹೇಳಿದರೆ । ಕೆಂಡವಾಗುವರು ಭೂ ।
ಮಂಡಲದೊಳಗೆ ಕಂಡಿತವನಾಡುವರ ।
ಕಂಡಿಹುದೆ ಕಷ್ಟ ಸರ್ವಜ್ಞ ॥ ೧೨೪೯ ॥

ಭಂಡಗಳ ನುಡಿಯುವ । ದಿಂಡೆಯನ ಹಿಡಿತಂದು ।
ಖಂಡಿಸಿರಿ ಎಂದರವನೊಡನೆ ಹಿಂಡೆಲ್ಲ ।
ಒಂದಾಗಿ ಹರಿಗು ಸರ್ವಜ್ಞ ॥ ೧೨೫೦ ॥

ಮೆಚ್ಚಿಸುವಡೊಲಿದವರ । ಇಚ್ಛೆಯನೆ ನುಡಿಯುವದು ।
ತುಚ್ಛದಿಂದಾರ ನುಡಿದಿಹರೆ ಅವನಿರವು ।
ಬಿಚ್ಚುವಂತಕ್ಕು ಸರ್ವಜ್ಞ ॥ ೧೨೫೧ ॥

ಯಾರನ್ನೂ ನಂಬಬೇಡ

ಎಂತಿರಲು ಪರರ ನೀ । ಮುಂತೆ ನಂಬಲು ಬೇಡ ।
ಕುಂತಿ ಹೆಮ್ಮಗನ ಕೊಲಿಸಿದಳು, ಮಾನವರ ।
ನೆಂತು ನಂಬುವದು ! ಸರ್ವಜ್ಞ ॥ ೧೨೫೨ ॥

ಆರ ನೆರೆ ನಂಬುವಡೆ । ಆರಯ್ದು ನಂಬುವದು ।
ನಾರಯಣನಿಂದ ಬಲಿಕೆಟ್ಟ ಭಿಕ್ಷವರ ।
ನಾರು ನಂಬುವದು ! ಸರ್ವಜ್ಞ ॥ ೧೨೫೩ ॥

### ಪರರ ತಪ್ಪು ಪ್ರವರ್ತ

ತನ್ನ ದೋಷವ ನೂರ । ಬೆನ್ನ ಹಿಂದಕೆ ಇರಿಸಿ ।
ಅನ್ಯನೊಂದಕ್ಕೆ ಹುಲಿಯಪ್ಪ ಮಾನವನು ।
ಕುನ್ನಿಯಲ್ಲೇನು ? ಸರ್ವಜ್ಞ ॥ ೧೨೫೪ ॥

### ಪರೋಪಕಾರಿಗೆ ಪುನರ್ಜನ್ಮವಿಲ್ಲ

ಹೊಟ್ಟೆಗುಣ ಕೊಟ್ಟವಗೆ । ಸಿಟ್ಟ ನೆರೆ ಬಿಟ್ಟವಗೆ ।
ಬಟ್ಟೆಯು ಮುಳ್ಳ ಸುಟ್ಟವಗೆ ಬಹು ಭವದ ।
ಹುಟ್ಟು ತಾನಿಲ್ಲ ಸರ್ವಜ್ಞ ॥ ೧೨೫೫ ॥

### ಮನುಷ್ಯರಿಗೆ ಭಯಪಡಬೇಡ

ನಿಶ್ಚಯವ ಬಿಡದೊಬ್ಬ । ರಿಚ್ಚೆಯಲಿ ನುಡಿಯದಿರು ।
ನೆಚ್ಚಿ ಒಂದೂರೊಳಿರದಿರು ಶಿವ, ನಿನ್ನ ।
ಇಚ್ಛೆಯೊಳಗಿಹನು ಸರ್ವಜ್ಞ ॥ ೧೨೫೬ ॥

### ಕೇಳಿದರೆ ಬುದ್ಧಿ

ಹೇಳಿದರೆ ಕೇಳುವನ । ಕೀಳವದು ಕರ ಲೇಸು ।
ಹೇಳಿದರೆ ಕೇಳದಿರುವವನ ಮಾಳಿಗೆಯು ।
ಕೀಳಗು ಕಷ್ಟ ಸರ್ವಜ್ಞ ॥ ೧೨೫೭ ॥

ಕೇಳುವವರಿದ್ದಿಹರೆ । ಹೇಳುವದು ಬುದ್ಧಿಯನು ।
ಕೋಳದಲಿ ಬಿದ್ದು ನರಳುವಗೆ ಬುದ್ಧಿಯನು ।
ಹೇಳಿ ಫಲವೇನು ? ಸರ್ವಜ್ಞ ॥ ೧೨೫೮ ॥

### ಉತ್ತಮರು ಕೆಟ್ಟರೆ ಕಷ್ಟ

ಉತ್ತರೆಯು ಬರೆತಿಹರೆ । ಹೆತ್ತ ತಾಯ್ತೊರೆದಿಹರೆ ।
ಉತ್ತಮರು ತಪ್ಪಿ ನಡೆದಿಹರೆ ಲೋಕ ತಾ ।
ನೆತ್ತ ಸಾರುವದು ಸರ್ವಜ್ಞ ॥ ೧೨೫೯ ॥

ತತ್ವಮಸಿ ಹುಸಿದಿಹರೆ। ಉತ್ತಮರು ಕುಸಿದಿಹರೆ।
ನಿತ್ಯರು ಕೇಡ ಬಗೆದಿಹರೆ ಸತ್ಯವ।
ನೆತ್ತಲರಸುವದು! ಸರ್ವಜ್ಞ ॥ ೧೨೬೦ ॥

ಸತ್ಯರೂ ಹುಸಿಯುವಡೆ। ಒತ್ತಿ ಹರಿದಡೆ ಶರಧಿ।
ಸ್ತುತ್ಯ ತ್ಯಾಗಿಗಳು ಕಳುವರೆ ಪ್ರಜೆಯು ತಾ।
ನೆತ್ತ ಬಾಳುವದು! ಸರ್ವಜ್ಞ ॥ ೧೨೬೧ ॥

ಪಕ್ಷಪಾತ

ಉಳ್ಳವನು ನುಡಿದಿಹರೆ। ಒಳ್ಳಿತೆಂದೆನ್ನುವರು।
ಇಲ್ಲದ ಬಡವ ನುಡಿದಿಹರೆ ತುತ್ತಿಟ್ಟು।
ಕಲ್ಲು ಕಡಿದಂತೆ ಸರ್ವಜ್ಞ ॥ ೧೨೬೨ ॥

ಇಲ್ಲದವನಹುದಾಡೆ। ಬಲ್ಲಂತೆ ಬೊಗಳುವರು।
ಬಲ್ಲಿದನಲ್ಲದನು ಆಡಿದರು ಎಲ್ಲವರು।
ಬೆಲ್ಲವೆಂಬುವರು ಸರ್ವಜ್ಞ ॥ ೧೨೬೩ ॥

ಬಡವನಿದ್ದುದನಾಡೆ। ಕಡೆಗೆ ಪೋಗೆಂಬುವರು!
ಒಡವೆಯುಳ್ಳವರು ಸುಡುಗಾಡ ನುಡಿದರೂ।
ಪೊಡವಿಯೊಳಗಧಿಕ! ಸರ್ವಜ್ಞ ॥ ೧೨೬೪ ॥

ಬಲ್ಲಿದನು ನುಡಿದಿಹರೆ। ಬೆಲ್ಲವನು ಮೆದ್ದಂತೆ।
ಇಲ್ಲದ ಬಡವ ನುಡಿದರೆ ಬಾಯಿಂದ।
ಜೊಲ್ಲುಬಿದ್ದಂತೆ! ಸರ್ವಜ್ಞ ॥ ೧೨೬೫ ॥

ಬಡವನೊಳ್ಳೆಯ ಮಾತ। ನುಡಿದರಲ್ಲೆಂಬುವರು।
ಪೊಡವೀಶ ಪೊಳ್ಳುಗೆಡೆದರೂ ಕೈವಾರಿ।
ಕಡು ನಗುತಲಿಹರು ಸರ್ವಜ್ಞ ॥ ೧೨೬೬ ॥

ಮಡಿಯನುಟ್ಟವರನ್ನು। ನುಡಿಸುವರು ವಿನಯದಲಿ।
ಒಡಹುಟ್ಟಿದವರು ಅರುವೆಯನು ಉಟ್ಟಿಹರೆ।
ನುಡಿಸ ನಾಚುವರು ಸರ್ವಜ್ಞ ॥ ೧೨೬೭ ॥

ಕರ್ಮದ ಸಮಸ್ಯೆ

ತಪ್ಪು ಮಾಡದ ಮನುಜ | ಗೊಪ್ಪುವದೆ ಸಂಕೋಲೆ ? |
ತಪ್ಪು ಮಾಡಿದಗೆ ಸೆರೆಯು ಸಂಕೋಲೆಗಳು |
ಬಪ್ಪುದೇ ಸರಿಯು ! ಸರ್ವಜ್ಞ || ೧೨೬೮ ||

ತಪ್ಪು ಮಾಡಿದವಂಗೆ | ಒಪ್ಪುವದು ಸಂಕೋಲೆ |
ತಪ್ಪಿಲ್ಲದಿಪ್ಪ ಶರಣಂಗೆ ಸಂಕೋಲೆ |
ಬಪ್ಪುದದೇಕೆ? ಸರ್ವಜ್ಞ || ೧೨೬೯ ||

## ವಿವಿಧ ವಿಷಯಂಗಳು

ಹೆಣ್ಣು

ಹೆಣ್ಣನ್ನು ಹೊನ್ನನ್ನು | ಹಣ್ಣಾದ ಮರಗಳನು |
ಕಣ್ಣಿನಲಿ ಕಂಡು ಮನದಲ್ಲಿ ಬಯಸದಿಹ |
ಅಣ್ಣಗಳು ಯಾರು ಸರ್ವಜ್ಞ || ೧೨೭೦ ||

ಯತಿಯು ತಪಗಳು ಕೆಡುಗು | ಪತಿಯು ಪ್ರೇಮವು ಕೆಡುಗು |
ಮತಿವಂತರೆದ್ದು ಗತಿ ಕೆಡುಗು, ರತಿದೇವಿ |
ಶ್ರುತಿಯು ಕೇಳಿದರೆ ಸರ್ವಜ್ಞ || ೧೨೭೧ ||

ವಚನದೊಳಗೆಲ್ಲವರು | ಶುಚಿ, ವೀರ, ಸಾಧುಗಳು
ಕುಚ, ಶಸ್ತ್ರ, ಹೇಮ ನೊಂಕಿದರೆ ಲೋಕದೊಳ |
ಗಚಲದವರಾರು ? ಸರ್ವಜ್ಞ || ೧೨೭೨ ||

ಎಲ್ಲವರು ಹಿರಿಯವರು ! | ಬಲ್ಲವರು ! ಗರುವರರು ! |
ನಲ್ಲಳುರೆ ಮುಂದೆ ಸುಳಿದರೆ ಲೋಕದೊಳ |
ಗೊಲ್ಲದವರಾರು? ಸರ್ವಜ್ಞ || ೧೨೭೩ ||

ಹೊನ್ನು

ಯತಿಗಳಿಗೆ ಮತಿಗೆಡಗು | ಸತಿಯು ಸಜ್ಜನೆ ಕೆಡುಗು |
ಸ್ಥಿತಿವಂತರಿದ್ದು ಭ್ರಮೆಗೊಳಗು ಹೊನ್ನೆಂಬ ||
ಶ್ರುತಿಯು ಕೇಳಿದರೆ ಸರ್ವಜ್ಞ || ೧೨೭೪ ||

ಮೆರೆಸುವದು ಅನ್ಯರನು । ಮರೆಸುವದು ತನ್ನವರ ।
ಇರಿಸುವದು ತನ್ನ ಇದಿರನು, ಹೊನ್ನಿನ ।
ತರವ ನೋಡೆಂದ ಸರ್ವಜ್ಞ ॥ ೧೨೭೫ ॥

ಚೆಲುವನಾದಡದೇನು ? । ಬಲವಂತನಾಗೇನು ? ॥
ಕುಲವೀರನಾಗಿ ಫಲವೇನು ? ಮಹಲಕ್ಷ್ಮಿ ।
ತೊಲಗಿ ಹೋಗಿರಲು ! ಸರ್ವಜ್ಞ ॥ ೧೨೭೬ ॥

ಲೋಕಕ್ಕವಶ್ಯತಾ । ನೇಕಾಕಿ ಹೊಂಬೇರು ।
ನಾಕಕದು ಬೇರು ಪುಣ್ಯದಿಂದಲ್ಲದಡೆ ।
ಪಾತಕಕೆ ಬೇರು ! ಸರ್ವಜ್ಞ ॥ ೧೨೭೭ ॥

ಮಣ್ಣು

ಹೆಣ್ಣಿಗೂ ಮಣ್ಣಿಗೂ । ಉಣ್ಣದುರಿಯಲು ಬೇಡ ।
ಹೆಣ್ಣಿಂದ ಕೆಟ್ಟ ದಶಕಂಠ, ಕೌರವನು ।
ಮಣ್ಣಿಂದ ಕೆಡನೆ ? ಸರ್ವಜ್ಞ ॥ ೧೨೭೮ ॥

ಮಣ್ಣು ಬಿಟ್ಟವ ದೈವ । ಹೊನ್ನು ಬಿಟ್ಟವ ದೈವ ।
ಹೆಣ್ಣು ನೆರೆ ಬಿಟ್ಟರವ ದೈವ, ಜಗಕೆ ಮು ।
ಕ್ಕಣ್ಣನೇ ದೈವ ಸರ್ವಜ್ಞ ॥ ೧೨೭೯ ॥

ಕಣ್ಣು

ಕಣ್ಣಿನಿಂದಲೆ ಪುಣ್ಯ । ಕಣ್ಣಿನಿಂದಲೆ ಪಾಪ ।
ಕಣ್ಣಿನಿಂದಿಹವು ಪರವಕ್ಕು, ಲೋಕಕ್ಕೆ ।
ಕಣ್ಣೆ ಕಾರಣವು ಸರ್ವಜ್ಞ ॥ ೧೨೮೦ ॥

ಕಣ್ಣು ಸಣ್ಣದು ಆಗಿ । ಹಣ್ಣದಿಹುದೊಂದಿಲ್ಲ ।
ತಣ್ಣಗಿಹ ಮನವನುರಿಸುವದು ಇದನು ಕೊಂ ।
ದಣ್ಣಗಳು ಯಾರು ಸರ್ವಜ್ಞ ॥ ೧೨೮೧ ॥

ಕಣ್ಣು ನಾಲಿಗೆ ಮನವು । ತನ್ನದೆಂದೆನಬೇಡ ।
ಅನ್ಯರು ಕೊಂದರೆನಬೇಡ ಇವು ಮೂರು ।
ತನ್ನ ಕೊಲ್ಲುವವು ಸರ್ವಜ್ಞ ॥ ೧೨೮೨ ॥

### ಕೆಟ್ಟ ನಾಲಗೆ

ಮೆಟ್ಟಿರಿಯೆ ಜೀವ ತಾ । ತಟ್ಟನೇ ಹೋಗಿಹುದು ।
ಕಟ್ಟೆ ನಾಲಗೆಯುಲಿರಿದಿಹರೆ ಕಾದು ನೀ ।
ರಟ್ಟೆ ಹೋದಂತೆ ಸರ್ವಜ್ಞ ॥ ೧೨೮೩ ॥

ಸುರಿಗೆಯುಲಿ ಇರಿದೇರು । ಬರಿಯೆ ಒಂದೆಡೆಗಹುದು ।
ಜರಿವ ನಾಲಗೆಯುಲಿರಿದೇರು ಸರ್ವಾಂಗ ।
ಬರೆಯು ಕೊಟ್ಟಂತೆ ಸರ್ವಜ್ಞ ॥ ೧೨೮೪ ॥

ಗಂಹರವ ಹೊಕ್ಕಿರ್ದು । ಸಿಂಹಗಳನಿರಿಯುವದು ।
ಸಂಹರವ ಮಾಡಿ ತರಿಯುವದು ಮೆತ್ತನ ।
ಜಿಂಹ್ವೆ ಕಾಣಯ್ಯ ಸರ್ವಜ್ಞ ॥ ೧೨೮೫ ॥

ಕತ್ತಿಲಾದಾ ಗಾಯು । ಮತ್ತಿರದೆ ಮಾಯುವದು ।
ಸುತ್ತಲಾಡುತಿಹ ಜಿಹ್ವೆಯು ಗಾಯುವು ।
ನಿತ್ಯಕು ಬಿಡದು ಸರ್ವಜ್ಞ ॥ ೧೨೮೬ ॥

### ನಾಮುಕರಣ

ಬಂಧು ಬಳಗವು ಕೂಡಿ । ಹೊಂದಿ ಜೋಗುಳ ಪಾಡಿ ।
ಹಿಂದೆ ಸತ್ತವರ ಹೆಸರಿಟ್ಟು ಗುಗ್ಗರಿಯು ।
ತಿಂದು ಹೋಗುವರು ಸರ್ವಜ್ಞ ॥ ೧೨೮೭ ॥

### ಶಿಶು

ಭೂಪತಿಗೆ ದಳ ಲೇಸು । ಆಪತ್ತಿಗಣ ಲೇಸು ।
ಕೋಪವನು ಕಳೆವ ಸತಿ ಲೇಸು, ಶಿಶುನಿಗೆ ।
ಜೋಪಾನ ಲೇಸು ಸರ್ವಜ್ಞ ॥ ೧೨೮೮ ॥

### ಮಗು

ತುರುಕನ ನೆರೆ ಹೊಲ್ಲ । ಹರುಕನ ಕೆಳೆ ಹೊಲ್ಲ ।
ಮುರುಕ ಮಾಡುವಳ ನಗೆ ಹೊಲ್ಲ, ಮಗುವಿಗೆ ।
ಕರಕನ್ನ ಹೊಲ್ಲ ಸರ್ವಜ್ಞ ॥ ೧೨೮೯ ॥

### ಮಾನವ ಸ್ಥಿತಿತ್ರಯ

ಕ್ರೀಡೆಯಲಿ ಬಾಲತ್ವ । ಪ್ರೌಢಿಯಲಿ ತರುಣತ್ವ ।
ಗಾಢ ಚಿಂತೆಯ‍ಲಿ ವೃದ್ಧತ್ವದಿಂ ಸುಡು ।
ಗಾಡಿಗೆಡೆಯುಹರು ಸರ್ವಜ್ಞ ॥ ೧೨೯೦ ॥

### ನಿದ್ದೆ

ಬಿಲ್ಲು ಕೈಯನೆ ಗೈದು । ಮೆಲ್ಲನೆಯೆ ಒರಗಿದರೆ ।
ಚೆಲ್ವಿನ ಹಾಸು, ತಲೆದಿಂಬು, ನಿದ್ರೆ ಬಂ ।
ದಲ್ಲಿಯೇ ನೋಡ ಸರ್ವಜ್ಞ ॥ ೧೨೯೧ ॥

ಕಂಚಿನ ನುಡಿ ಚೆಂದ । ಕೆಂಚನೆಯ ಸತಿ ಚೆಂದ ।
ಕುಂಚಿಗೆಯು ಚೆಂದ ಶಿಶುವಿಂಗೆ, ಶಯನಕ್ಕೆ ।
ಮಂಚವೇ ಚೆಂದ ಸರ್ವಜ್ಞ ॥ ೧೨೯೨ ॥

ವದನೆ ಯೋಗಿಗೆ ಹೊಲ್ಲ । ಬದನೆ ರೋಗಿಗೆ ಹೊಲ್ಲ ।
ಕದನವದು ಹೊಲ್ಲ ನೆರಯಲಿ, ನಿದ್ದೆಗೆ ।
ತುದಿಗಟ್ಟೆ ಹೊಲ್ಲ ಸರ್ವಜ್ಞ ॥ ೧೨೯೩ ॥

### ಮರಣ

ಮೃತ್ಯು ದೇವತೆಯೆತ್ತಿ । ಹೊತ್ತು ತಾನಾಡಿಸುತ ।
ತುತ್ತು ಇದ್ದಲ್ಲಿ ಒಯ್ದುಣಿಸಿ ಕಡೆಯಲ್ಲಿ ।
ಹೊತ್ತು ಚೆಲ್ಲುವಳು ಸರ್ವಜ್ಞ ॥ ೧೨೯೪ ॥

### ಅಫೀಮು

ಮದ್ದ ಮೆಲ್ಲುವನು ಪ್ರ । ಬುದ್ಧನೆಂದೆನಬೇಡ ।
ಮುದ್ದು ಸಂಕಟವ ಹೆಚ್ಚಿಸಲು ಹೆಡಕತ್ತ ।
ಗುದ್ದಿ ಕೊಳುತಿಹನು ಸರ್ವಜ್ಞ ॥ ೧೨೯೫ ॥

## ಮದ್ಯಪಾನ

ಸುರೆಯು ಸೇವಿಸುವವನ । ಸುರಿಗೆಯನು ಪಿಡಿದವನ ।
ದೊರೆಯೊಲುಮೆಗಾಗಿ ಹೆಣಗುವನ ಕಾಯುವದು ।
ಸೊರಗಿ ಸಾಯುವದು! ಸರ್ವಜ್ಞ ॥ ೧೨೯೬ ॥

ಸುರೆಯು ಸೇವಿಸುವಂಗೆ । ಸಿರಿಗರವು ಪಿಡಿದಂಗೆ ।
ದೊರೆಯಲ್ಲಿ ತೇಜ ಪಡೆದಂಗೆ ಶಿರವಿಹುದು ।
ಸ್ಥಿರವಲ್ಲ ನೋಡ ಸರ್ವಜ್ಞ ॥ ೧೨೯೭ ॥

ಸುರೆಯು ಹಿರಿದುಂಡವಗೆ । ಉರಿಯು ನೋಲ್ದುಡುಕುವಗೆ ।
ಹರಿಯುವ ಹಾವು, ಪರನಾರಿ ಪಿಡಿದಂಗ ।
ಮರಣದ ನೆರಳು ಸರ್ವಜ್ಞ ॥ ೧೨೯೮ ॥

ಸಿಂದಿಯನು ಸೇವಿಪನು । ಹಂದಿಯಂತಿರುತಿಹನು ।
ಹಂದಿಯೊಂದೆಡೆಗೆ ಉಪಕಾರಿ ಕುಡಿಕನು ।
ಹಂದಿಗೂ ಕಷ್ಟ ಸರ್ವಜ್ಞ ॥ ೧೨೯೯ ॥

ಹೆಂಡವನು ಕುಡಿಕುಡಿದು । ಕಂಡವರ ತಾ ಜರಿದು ।
ಬಂಡುನುಡಿಗಳಿಗೆ ನಾಚದ ನೀಚನ ।
ಕಂಡಿಹರೆ ತೊಲಗು ಸರ್ವಜ್ಞ ॥ ೧೩೦೦ ॥

## ನೀರಾಪಾನ

ನೀಚಜನ ನೆರೆಯಿಂದ । ಈಚಲದ ಮರ ಲೇಸು ।
ಈಚಲೊಂದೆಡೆಗೆ ಉಪಕಾರಿ ನೀಚ ತಾ ।
ಈಚಲಿಂ ಕಷ್ಟ ಸರ್ವಜ್ಞ ॥ ೧೩೦೧ ॥

ಈಚಲದ ಮರದವ್ವ । ಊಚ ನೋಲೆವಾಲುಣಿಸಿ !
ನೀಚ ರುಜೆಗಳನು ನೀಗಿಸಲು ಸಿನ್ನಂಗ ।
ಲಾಚಿ ಕರೆದಿಹಳು ಸರ್ವಜ್ಞ ॥ ೧೩೦೨ ॥

ಮದ್ಯಪಾನವ ಮಾಡಿ। ಇದ್ದುದೆಲ್ಲವ ನೀಗಿ।
ಬಿದ್ದು ಬರುವವನ ಸದ್ದಡಗಿ ಸಂತಾನ।
ಮೆದ್ದು ಹೋದುವದು। ಸರ್ವಜ್ಞ ॥ ೧೩೦೩ ॥

ಭಂಗಿ

ಅಂಗಿ ಅರಿವೆಯು ಮಾರಿ। ಭಂಗಿಯನು ತಾ ಸೇದಿ।
ಮಂಗನಂದದಿ ಕುಣಿವಾತ ಭವ ಭವದಿ।
ಭಂಗಗೊಳುತಿಹನು ಸರ್ವಜ್ಞ ೧೩೦೪ ॥

ಭಂಗಿಯನು ಸೇದುವನ। ಭಂಗವನು ಏನೆಂಬೆ।
ಭಂಗಿಯ ಗುಂಗು ತಲೆಗೇರಲಾಡುತಿಹ।
ಮಂಗನಂತಿಹನು ಸರ್ವಜ್ಞ ॥ ೧೩೦೫ ॥

ತಂಬಾಕ

ಹೊಗೆಯ ತಿಂಬುವದೊಂದು। ಸುಗುಣವೆಂದೆನಬೇಡ।
ಹೊಗೆಯ ಕುಡಿದೆಲೆಯನಗಿವ ಬಾಯ್ನಿಂದಿಯು।
ಲಗಳೆಯಂತಿಹುದು ಸರ್ವಜ್ಞ ೧೩೦೬ ॥

ತಾಂಬೂಲ

ಗಾಳಿ ದೂಳಿಯ ದಿನಕೆ। ಮಾಳಿಗೆಯ ಮನೆ ಲೇಸು।
ಹೋಳಿಗೆ ತುಪ್ಪ ಉಣಲೇಸು, ಬಾಯಿಗೆ।
ವೀಳೆಯವು ಲೇಸು ಸರ್ವಜ್ಞ ॥ ೧೩೦೭ ॥

ವೀಳೆಯಿಲ್ಲದ ಬಾಯಿ। ಕೂಳು ಕಾಣದ ನಾಯಿ।
ಬಾಳೆಗಳು ಇಲ್ಲದೆಲೆದೋಟ, ಪಾತರದ।
ಮೇಳ ಮುರಿದಂತೆ ಸರ್ವಜ್ಞ ॥ ೧೩೦೮ ॥

ಎಲೆಯ ಮೆಲ್ಲದ ಬಾಯಿ। ತಲೆಹೋದ ಮುಂಡವು।
ಎಲೆ ಮೆದ್ದು ಒರಲು ಬೀದಿಯೊಳಗೀರ್ರೈದು।
ತಲೆಯನಂತಕ್ಕು ಸರ್ವಜ್ಞ ॥ ೧೩೦೯ ॥

ಒಡಕಿನ ಮನೆ

ಅಡಿಕೆ ಕಾಣದ ಬಾಯಿ । ಕಡುಕವಿಲ್ಲದ ಕಿವಿಯು ।
ಒಡಕಿನ ಮನೆಯು ನಿಲುಕದ ಫಲಕೆ ನರಿ ।
ಮಿಡುಕಿ ಸತ್ತಂತೆ । ಸರ್ವಜ್ಞ ॥ ೧೩೧೦ ॥

ನೆತ್ತ

ನೆತ್ತವೂ ಕುತ್ತವೂ । ಹತ್ತಿದೊಡೆ ಅಳವಲ್ಲ ।
ಕುತ್ತದಿಂ ದೇಹ ಬಡವಕ್ಕು, ನೆತ್ತದಿಂ ।
ಬತ್ತಲೆಯಕ್ಕು ಸರ್ವಜ್ಞ ॥ ೧೩೧೧ ॥

ಆಡಿ ನಳ ಕೆಟ್ಟ, ಮ । ತ್ತಾಡಿ ಧರ್ಮಜ ಕೆಟ್ಟ ।
ನೋಡಿದ ನಾಲ್ವರು ತಿರಿದುಣಲು ನೆತ್ತವನು ।
ಆಡಬೇಡೆಂದ ಸರ್ವಜ್ಞ ॥ ೧೩೧೨ ॥

ಆಡಿದವರಿದ್ದಂತೆ । ನೋಡಿದವ ತಾ ಕೆಟ್ಟ ।
ಬೇಡುವವ ಕೆಟ್ಟ, ನೆತ್ತವನು ಆಡುವರ ।
ಕೂಡಿದವ ಕೆಟ್ಟ ಸರ್ವಜ್ಞ ॥ ೧೩೧೩ ॥

ನೆತ್ತವದು ಒಳಿತೆಂದು । ನಿತ್ಯವಾಡಲು ಬೇಡ ।
ನೆತ್ತದಿಂ ಕುತ್ತ ಮುತ್ತಿ ಬರೆ ಸುತ್ತರಿದು ।
ಕತ್ತಲಾಗಿಹುದು ಸರ್ವಜ್ಞ ॥ ೧೩೧೪ ॥

ಹೇವ

ಜಾವಕ್ಕೆ ಬದುಕುವರೆ । ಹೇವಕ್ಕೆ ಬದುಕುವದು ।
ರಾವಣನು ಸತ್ತನೆನಬೇಡ, ರಾಮಂಗೆ ।
ಹೇವ ಬಿಟ್ಟಿಹುದೆ ? ಸರ್ವಜ್ಞ ॥ ೧೩೧೫ ॥

ಬಲವಂತ ನಾನೆಂದು । ಬಲಿದು ಹೋರಲು ಬೇಡ ।
ಬಲವಂತ ವಾಲಿ ಶ್ರೀರಾಮನೊಡನಾಡಿ ।
ಛಲದಿಂದ ಕೆಟ್ಟ ಸರ್ವಜ್ಞ ॥ ೧೩೧೬ ॥

## ಲಂಚ

ಸೊಡರು ಲಂಚವ ಕೊಂಡು । ಕೊಡುವದೊಪ್ಪುಚಿ ಬೆಳಗ ।
ಪೊಡವಿಗೆ ಸೂರ್ಯ ಬೆಳಗೀವೊಲ್ಲಂಚವನು ।
ಹಿಡಿಯುವನವ ಧರ್ಮಿ ಸರ್ವಜ್ಞ ॥ ೧೩೧೭ ॥

## ವಿದ್ಯೆ

ವಿದ್ಯಕ್ಕೆ ಕಡೆಯಿಲ್ಲ । ಬುದ್ಧಿಗೆ ಬೆಲೆಯಿಲ್ಲ ।
ಛಿದ್ರಿಸುವವಗೆ ಗತಿಯಿಲ್ಲ, ಮರಣಕ್ಕೆ ।
ಮದ್ದುಗಳಿಲ್ಲ ಸರ್ವಜ್ಞ ॥ ೧೩೧೮ ॥

ವಿದ್ಯವುಳ್ಳನ ಮುಖವು । ಮುದ್ದು ಬರುವಂತಿಕ್ಕು ।
ವಿದ್ಯವಿಲ್ಲದನ ಬರಿಮುಖವು ಹಾಳೂರ ।
ಹದ್ದಿನಂತಕ್ಕು ಸರ್ವಜ್ಞ ॥ ೧೩೧೯ ॥

ಬುದ್ಧಿವಂತರ ಕೂಟ । ವೆದ್ದು ಹಾರುವ ಹದ್ದು ।
ಬುದ್ಧಿಯಿಲ್ಲದರ ನೆರೆ ಕೂಟ ಕೊರಳೊಳಗೆ ।
ಗುದ್ದಿಯಿದ್ದಂತೆ ಸರ್ವಜ್ಞ ॥ ೧೩೨೦ ॥

ಒಡಲೊಳಡಗಿದ ವಿದ್ಯೆ । ಒಡಗೂಡಿ ಬರುತಿರಲು ।
ಒಡಹುಟ್ಟಿದವರು, ಕಳ್ಳರು, ನೃಪರದನು ।
ಪಡೆಯರೆಂತೆಂದ ಸರ್ವಜ್ಞ ॥ ೧೩೨೧ ॥

ವಿದ್ಯವೇ ತಾಯ್ತಂದೆ । ಬುದ್ಧಿಯೇ ಸೋದರನು ।
ಅಧ್ಯಾನಕಾದರವ ನೆಂಟ, ಸುಖದಿ ತಾ ।
ನಿದ್ದುದೇ ರಾಜ್ಯ ಸರ್ವಜ್ಞ ॥ ೧೩೨೨ ॥

ಇದ್ದಲ್ಲಿ ಸಲುವ ಹೋ । ಗಿದ್ದಲ್ಲಿಯೂ ಸಲುವ ।
ವಿದ್ಯವ ಕಲಿತ ಬಡವ ತಾ ಗಿರಿಯ ಮೇ ।
ಲಿದ್ದರೂ ಸಲುವ ಸರ್ವಜ್ಞ ॥ ೧೩೨೩ ॥

### ಬುದ್ಧಿಗಿಂತ ಅನುಭಾವ ಶ್ರೇಷ್ಠ

ವನಕೆ ಕೋಕಿಲೆ ಲೇಸು। ಮನಕೆ ಹರುಷವು ಲೇಸು।
ಕನಕವುಳ್ಳವನ ಕೆಳೆ ಲೇಸು, ವಿದ್ಯೆಕೆ।
ವಿನಯು ಲೇಸೆಂದ ಸರ್ವಜ್ಞ ॥ ॥ ೧೩೩೪ ॥

ಜನಕೆ ರಂಜನೆ ಲೇಸು। ವನಕೆ ಪುಷ್ಪವು ಲೇಸು।
ಧನಕಿಂದ ಬುದ್ಧಿನೆರೆ ಲೇಸು, ಬುದ್ಧಿಯಿಂ।
ಅನುಭಾವ ಲೇಸು ಸರ್ವಜ್ಞ ॥ ೧೩೩೫ ॥

### ಉದ್ಯೋಗ

ಉದ್ಯೋಗವುಳ್ಳವನ। ಹೊದ್ದುವುದು ಸಿರಿ ಬಂದು।
ಉದ್ಯೋಗವಿಲ್ಲದಿರುವವನ ಕರದೊಳಗೆ।
ಇದ್ದುದೂ ಪೋಕು ಸರ್ವಜ್ಞ ॥ ೧೩೩೬ ॥

ಉದ್ಯೋಗವಿರುವವನು। ಬಿದ್ದಲ್ಲಿ ಬಿದ್ದಿರನು।
ಹದ್ದು ನೆವನವನು ಈಡಾಡಿ ಹಾವ ಕೊಂ।
ಡೆದ್ದು ಹೋದಂತೆ ಸರ್ವಜ್ಞ ॥ ೧೩೩೭ ॥

ಅಲಸಿಕೆಯುಲಿರುವಂಗೆ। ಕಲಸಲಂಬಲಿಯಿಲ್ಲ।
ಕೆಲಸಕ್ಕೆ ಅಲಸದಿರುವಂಗೆ ಬೇರಿಂದ।
ಹಲಸು ಕಾತಂತೆ ಸರ್ವಜ್ಞ ॥ ೧೩೩೮ ॥

ಹೋರುವ ಸತಿಯಿಂದ। ಸೋರುವ ಮನೆಯಿಂದ।
ಪೂರೈಸದವನ ಬದುಕಿಂದ ಕೊಂಡೊಯ್ವ।
ಮಾರಿ ಲೇಸೆಂದ ಸರ್ವಜ್ಞ ॥ ೧೩೩೯ ॥

### ಸಾಧನೆ

ಚಿರೆವಂಗೆ ಭೋಗವೂ। ಮೊರೆವಂಗೆ ರಾಗವೂ।
ಬರೆವಂಗೆ ಓದು ಬರುವಂತೆ ಸಾಧಿಪಗೆ।
ಬಾರದಿಹುದುಂಟೆ? ಸರ್ವಜ್ಞ । ೧೩೪೦ ॥

### ಗಾಯನವೂ ಗಾಯಕನೂ

ಅರ್ಥವಿಲ್ಲದ ಹಾಡು । ವ್ಯರ್ಥ ಸಾಸಿರವಿದ್ದು ।
ಆರ್ತಿಯಿಂ ಕತ್ತೆಯುರಚಿದಡದರಲ್ಲಿ ।
ಅರ್ಥವುಂಟೆಂದ ಸರ್ವಜ್ಞ ॥ ೧೩೩೧ ॥

ಪ್ರಾಸವಿಲ್ಲದೆ ಪದವ । ತಾನು ಹಾಡಿದಡೇನು ? ।
ಸಾಸುವೆ ಎಣ್ಣೆ ಹದಮಾಡಿ ಕಣ್ಣನು ।
ಹೊಸಿಕೊಂಡಂತೆ ಸರ್ವಜ್ಞ ॥ ೧೩೩೨ ॥

ಆಯೆಂದು ಅಳುಗೂಸು । ಜೋಯೆಂದು ತೂಗಿದರೆ ।
ತಾಯ ಹಂಬಲವ ಮರೆಸುವದು ಶಿಶುಗಾನ ।
ದಾಯತವ ನೋಡ ಸರ್ವಜ್ಞ ॥ ೧೩೩೩ ॥

ಶ್ವಾನ ಬಾಲವು ಡೊಂಕು ಊನನ ನಡೆ ಡೊಂಕು ।
ಮುನಿದ ಮಾನಿನಿಯ ಮನ ಡೊಂಕು, ಗಾಯಕನು ।
ತಾನೆ ಡೊಂಕೆಂದ ಸರ್ವಜ್ಞ ॥ ೧೩೩೪ ॥

### ಓದು

ಓದಿದ ಓದು ತಾ । ಮೇದ ಕಬ್ಬಿನ ಸಿಪ್ಪೆ ।
ಓದಿನ ಒಡಲನರಿದಿಹರೆ ಸಿಪ್ಪೆ ಕ ।
ಬ್ಬಾದಂತೆ ಕಾಣೊ । ಸರ್ವಜ್ಞ ॥ ೧೩೩೫ ॥

### ಸಮಯೋಚಿತ ಮಾತು

ತಿಂದು ಗಾದಿಯ ಮೇಲೆ । ಬಂದು ಗುರು ಚೀಳ್ವಂತೆ ।
ಬಂದ ಪ್ರಸ್ತಾವಕೊದಗಿದರೆ ಆ ಮಾತ ।
ನೊಂದೆನ್ನಬಹುದೆ? ಸರ್ವಜ್ಞ ॥ ೧೩೩೬ ॥

ಪ್ರಸ್ತಾವಕೊದಗಿದ । ಕತ್ತೆ ಮದಕರಿಯಂತೆ ।
ಪ್ರಸ್ತಾವ ತೀರ್ದ ಬಳಿಕತ್ತ ಮದಕರಿಯು ।
ಕತ್ತೆಗು ಕಷ್ಟ ಸರ್ವಜ್ಞ ॥ ೧೩೩೭ ॥

ಪ್ರಸ್ತಕ್ಕೆ ನುಡಿದಿಹರೆ । ಬೆಸ್ತಂತೆ ಇರಬೇಕು ।
ಪ್ರಸ್ತವ ತಪ್ಪಿ ನುಡಿದಿಹರೆ ನಡುಬೆನ್ನಿ ।
ನಸ್ತಿ ಮುರಿದಂತೆ ಸರ್ವಜ್ಞ ॥ ೧೩೩೮ ॥

ಪ್ರಸ್ತವನು ನುಡಿಯ ಪ್ರ । ಶಸ್ತವಾಗಿರಬೇಕು ।
ಪ್ರಸ್ತವನು ತಪ್ಪಿ ನುಡಿದರೆ ದೇವಾಂಗ ।
ದುಸ್ತು ಬಿದ್ದಂತೆ ಸರ್ವಜ್ಞ ॥ ೧೩೩೯ ॥

ಹೊತ್ತಿಗೊದಗದ ಮಾತು । ಹತ್ತು ಸಾಸಿರ ವ್ಯರ್ಥ ।
ಕತ್ತೆ ಕೂಗಿದರೆ ಫಲವುಂಟು, ಬರಿಮಾತು
ಕತ್ತೆಗು ಕಷ್ಟ ಸರ್ವಜ್ಞ ॥ ೧೩೪೦ ॥

ಹೊಲಬನರಿಯದ ಮಾತು । ತಲೆಬೇನೆ ಎದ್ದಂತೆ ।
ಹೊಲಬರಿತು ಒಂದ ನುಡಿದರೆ ಅದು ದಿವ್ಯ ।
ಫಲ ಪಕ್ವದಂತೆ ಸರ್ವಜ್ಞ ॥ ೧೩೪೧ ॥

ಮಾತಿನ ಮರ್ಮ

ಮಾತು ಮಾತಿಗೆ ಆತು । ಮಾತು ಕೋಟಿಗಳುಂಟು ।
ಮಾತಾಡಿ ಮನಕೆ ಮುನಿಸಕ್ಕು, ಮಾತಿನಲಿ ।
ನೋತವನೆ ಜಾಣ ಸರ್ವಜ್ಞ ॥ ೧೩೪೨ ॥

ಮಾತಿನಿಂ ನಗೆನುಡಿಯು । ಮಾತಿನಿಂ ಹಗೆ ಕೊಲೆಯು ।
ಮಾತಿನಿಂ ಸರ್ವ ಸಂಪದವು ಲೋಕಕ್ಕೆ ।
ಮಾತೆ ಮಾಣಿಕವು ಸರ್ವಜ್ಞ ॥ ೧೩೪೩ ॥

ಮಾತು ಬಲ್ಲಾತಂಗೆ । ಯೇತವದು ಸುರಿದಂತೆ ।
ಮಾತಾಡಲರಿಯದಾತಂಗೆ ಬರಿಯೇತ ।
ನೇತಾಡಿದಂತೆ ಸರ್ವಜ್ಞ ॥ ೧೩೪೪ ॥

ಇರಿದಂಗೆ ನೂರು ಮಾ । ತರಿದಂಗೆ ಸಾಸಿರವು ।
ಬರೆವಂಗೆ ನೊಮ್ಮು ಸರಿಪಾಲು ಹಿರಿಯ ಮಾ ।
ತರಿಯದೆ ಕೆಟ್ಟ ಸರ್ವಜ್ಞ ॥ ೧೩೪೫ ॥

ಮೆಲ್ಲನೆಯೆ ಸುರಿ ನೀರು । ಕಲ್ಲ ಭೇದಿಸಲಕ್ಕು ।
ಸೊಲ್ಲರಿತು ನುಡಿವ ಒಳ್ನುಡಿಯು ಬಲ್ಲಂದ ।
ನಲ್ಲವೆನಿಸುವದು । ಸರ್ವಜ್ಞ ॥ ೧೩೪೬ ॥

ಕಲ್ಲಮೇಲಿನ ನೀರು । ಮೆಲ್ಲನೆಯೆ ಸರಿದಂತೆ ।
ಸೊಲ್ಲನಾರೈದು ನುಡಿವನ ಜಾಣ್ಮೆಯು ।
ಎಲ್ಲಕ್ಕು ಮಿಗಿಲು ಸರ್ವಜ್ಞ ॥ ೧೩೪೭ ॥

ಮಾತು ಬಲ್ಲಹ ತಾನು । ಸೋತು ಹೋಹುದು ಲೇಸು ।
ಮಾತಿಂಗೆ ಮಾತು ಮಥಿಸಲ್ಕೆ ವಿಧಿ ಬಂದು ।
ಆತುಕೊಂಡಿಹುದು ಸರ್ವಜ್ಞ ॥ ೧೩೪೮ ॥

ಚಾಳಕನ ನಗೆನುಡಿಯು । ಮಾಳಿಗೆಯು ಮುರಿದಂತೆ ।
ಬಾಳು ಉಳ್ಳವರ ಬಿರುನುಡಿಯು, ಜೀಳ್ವನೆಯು ।
ಏಳಿಗಾದಂತೆ ಸರ್ವಜ್ಞ ॥ ೧೩೪೯ ॥

ರಸಿಕನಾಡಿದ ಮಾತು । ಶಶಿಯುದಿಸಿ ಬಂದಂತೆ ।
ರಸಿಕನಲ್ಲದನ ಬರಿಮಾತು ಕಿವಿಗೆ ಕೂರ್ ।
ದಸಿಯು ಬಡಿದಂತೆ ಸರ್ವಜ್ಞ ॥ ೧೩೫೦ ॥

ಹೊತ್ತಿಗೊದಗಿದ ಮಾತು । ಸತ್ತವನು ಎದ್ದಂತೆ ।
ಹೊತ್ತಾಗಿ ನುಡಿದ ಮಾತು ಕೈ ಜಾರಿದ ।
ಮುತ್ತಿನಂತಿಹುದು ಸರ್ವಜ್ಞ ॥ ೧೩೫೧ ॥

ಕಾದ ಕಬ್ಬುನವು ತಾ । ಹೊಯ್ದೊಡನೆ ಕೂಡುವದು ।
ಹೋದಲ್ಲಿ ಮಾತ ಮರೆದಡೆ ಕಬ್ಬುನವು ।
ಕಾದಾರಿದಂತೆ ಸರ್ವಜ್ಞ ॥ ೧೩೫೨ ॥

ಮಾತು ಬಲ್ಲಾತಂಗೆ । ಮಾತೊಂದು ಮಾಣಿಕವು ।
ಮಾತ ತಾನರಿಯದಧಮಂಗೆ ಮಾಣಿಕವು ।
ತೂತು ಬಿದ್ದಂತೆ ಸರ್ವಜ್ಞ ॥ ೧೩೫೩ ॥

ಮಾತು ಮಾಣಿಕ ಮುತ್ತು । ಮಾತು ತಾ ಸದರವು ।
ಮಾತಾಡಿದಂತೆ ನಡೆದರೆ ಕೈಲಾಸ ।
ಕಾತನೇ ಒಡೆಯ । ಸರ್ವಜ್ಞ ॥ ೧೩೫೪ ॥

ಮಾತಿಂಗೆ ಮಾತುಗಳು । ಓತು ಸಾಸಿರವುಂಟು ।
ಮಾತಾಡಿದಂತೆ ನಡೆದಾತ ಜಗವನ್ನು ।
ಕೊತಲ್ಲಿ ಆಳ್ವ ಸರ್ವಜ್ಞ ॥ ೧೩೫೫ ॥

ನಗೆ

ಕತ್ತೆಯರಚಿದಡಲ್ಲಿ । ತೊತ್ತು ಹಾಡಿದಡಲ್ಲಿ ।
ಮತ್ತೆ ಕುಲರಸಿಕನಿರುವಲ್ಲಿ ಕಡು ನಗೆಯು ।
ಹುತ್ತು ಕಾಣಯ್ಯ ಸರ್ವಜ್ಞ ॥ ೧೩೫೬ ॥

ಬೇಸಾಯ

ಕೋಟಿ ವಿದ್ಯೆಗಳಲ್ಲಿ । ಮೇಟಿ ವಿದ್ಯವೆ ಮೇಲು ।
ಮೇಟಿಯಿಂ ರಾಟೆ ನಡೆದುದಲ್ಲದೆ ದೇಶ ।
ದಾಟವೆ ಕೆಡುಗು ಸರ್ವಜ್ಞ ॥ ೧೩೫೭ ॥

ಎತ್ತಿನ್ಮೊ ಹೂಡುವದು । ಉತ್ತೊಮ್ಮೆ ಹರಗುವದು ।
ಬಿತ್ತೊಮ್ಮೆ ಹರಗಿ ಕಳೆದೆಗೆದರಾಬೆಳೆಯು ।
ಎತ್ತಗೈಯುದ್ದ ಸರ್ವಜ್ಞ ॥ ೧೩೫೮ ॥

ಉತ್ತೊಮ್ಮೆ ಹರಗದಲೆ । ಬಿತ್ತೊಮ್ಮೆ ನೋಡದಲೆ ।
ಹೊತ್ತೇರಿ ಹೊಲಕೆ ಹೋದರೆ ಅವ ತನ್ನ ।
ನೆತ್ತರವ ಸುಡುವ ಸರ್ವಜ್ಞ ॥ ೧೩೫೯ ॥

ನಲ್ಲೆತ್ತು ಬಂಡಿ ಬಲ । ವಿಲ್ಲದ ಆರಂಬ ।
ಕಲ್ಲು ಕಸಗಳನು ಬಿಟ್ಟಾತ ಹೊಲದೊಳಗೆ ।
ಹುಲ್ಲನೇ ಬೆಳೆವ ಸರ್ವಜ್ಞ ॥ ೧೩೬೦ ॥

ಹರಗದ ಎತ್ತಾಗಿ | ಬರಡಾದ ಹಯನಾಗಿ |
ಹರಟೆ ಹೊಡೆಯುವ ಮಗನಾಗೆ ಹೊಲದಲ್ಲಿ |
ಕರಡವೇ ಬೆಳೆಗು ಸರ್ವಜ್ಞ || ೧೩೬೧ ||

ದಂಡು ಇಲ್ಲದ ಅರಸು । ಕೊಂಡವಿಲ್ಲದ ಹೋಮ |
ಬಂಡಿಯಿಲ್ಲದನ ಬೇಸಾಯ, ತಲೆ ಹೋದ |
ಮುಂಡದಂತಿಕ್ಕು ಸರ್ವಜ್ಞ || ೧೩೬೨ ||

ಹದಬೆದೆಯಲಾರಂಬ । ಕದನದಲಿ ಕೂರಂಬ ।
ನದಿಯ ಹಾಯುವಲಿ ಹರುಗೋಲ ಮರೆದಾತ ।
ವಿಧಿಯ ಬೈದೇನು? ಸರ್ವಜ್ಞ || ೧೩೬೩ ||

ಬೆಕ್ಕು ಮನೆಯೊಳು ಲೇಸು । ಮುಕ್ಕು ಕಲ್ಲಿಗೆ ಲೇಸು ।
ನಕ್ಕು ನಗಿಸುವ ನುಡಿ ಲೇಸು, ಊರಿಂಗೆ |
ಒಕ್ಕಲಿಗ ಲೇಸು ಸರ್ವಜ್ಞ || ೧೩೬೪ ||

ಹೈನ ( ತುರು ಕರು )

ತುರುಕರುವು ಇರದೂರು । ನರಕ ಭಾಜನವಕ್ಕು |
ತುರುಕರುಂಟಾದರುಣಲುಂಟು, ಜಗಕೆಲ್ಲ ।
ತುರುಕರುವೆ ದೈವ ಸರ್ವಜ್ಞ || ೧೩೬೫ ||

ಬೇಸಿಗೆ

ಕಾಲದೊಳು ಮಳೆಗಾಲ | ಮಾಲೆಯೊಳು ಮಲ್ಲಿಗೆಯು |
ಕಾಲವಾರರಲಿ ಕಡುಚೆಲುವ ಬೇಸಗೆಯು |
ಕಾಲವೇ ಲೇಸು ಸರ್ವಜ್ಞ || ೧೩೬೬ ||

ಬಾಲೆ ಬೋಳಿಯು ಹೊಲ್ಲ | ಮಾಲೆ ಕೋಲಣಿ ಹೊಲ್ಲ ।
ಕಾಲವಾರರಲಿ ಉಮ್ಮಳಿಪ ಬೇಸಗೆಯು ।
ಕಾಲವೇ ಹೊಲ್ಲ ಸರ್ವಜ್ಞ || ೧೩೬೭ ||

ಅಂಗನೆಯು ಗುಣಿಯಾಗಿ | ಅಂಗಳದಿ ಹೊರಸಾಗಿ |
ತಂಗಾಳಿ ಜೊನ್ನದಿರುಳಾಗಿ ಬೇಸಗೆಯು |
ಹಿಂಗಡೇ ಇರಲಿ ಸರ್ವಜ್ಞ || ೧೩೬೮ ||

ಬಡತನ

ತುಂಬಿದ ಕೆರೆ ಬಾವಿ | ತುಂಬಿದಂತಿರುವದೆ ? |
ನಂಬಿರಬೇಡ ಲಕ್ಷ್ಮಿಯನು | ಬಡತನವು |
ಬೆಂಬಿಡದೆ ಬಹುದು ಸರ್ವಜ್ಞ || ೧೩೬೯ ||

ಬಡವ

ಉದ್ದಾದ ಮೊಲೆ ಹೊಲ್ಲ | ಇದ್ದೂರ ಹಗೆ ಹೊಲ್ಲ |
ತಿದ್ದದ ಹೋರಿ ಉಳಹೊಲ್ಲ, ಬಡವಂಗೆ |
ಬಿದ್ದ ನಡು ಹೊಲ್ಲ ಸರ್ವಜ್ಞ || ೧೩೭೦ ||

ಶೀತದಲಿ ಹಿಮ ಹೊಲ್ಲ | ಕೀತಿರುವ ವ್ರಣ ಹೊಲ್ಲ |
ಪಾತಕನ ನೆರೆಯಲಿರಹೊಲ್ಲ, ಬಡವ ತಾ |
ಕೂತಿರಲು ಹೊಲ್ಲ ಸರ್ವಜ್ಞ || ೧೩೭೧ ||

ಒಡಕ ಮಡಿಕೆಯು ಹೊಲ್ಲ | ಕುಡಿಕ ನೆರೆಯೊಳು ಹೊಲ್ಲ |
ಒಡಕಿನ ಮನೆಯೊಳಿರಹೊಲ್ಲ, ಬಡವಗೆ |
ಸಿಡುಕು ತಾ ಹೊಲ್ಲ ಸರ್ವಜ್ಞ || ೧೩೭೨ ||

ಹುಣಿಸೆಯಿಂ ನೊರೆವಾಲು | ಗಣಿಕೆಯಿಂ ಹಿರಿತನವು |
ಮೆಣಸಿನಿಂ ಕದಳಿ ಕೆಡುವಂತೆ ಬಡವ ತಾ |
ನಣಸಿನಿಂ ಕೆಡುಗು ಸರ್ವಜ್ಞ || ೧೩೭೩ ||

ಅಡಿಗಟ್ಟಣವೇಕೆ | ಬೋಡಂಗೆ ಕಬ್ಬೇಕೆ |
ಕೋಡಗನ ಕೈಗೆ ಬಳೆಯೇಕೆ ಬಡವಂಗೆ |
ನಾಡ ಮಾತೇಕೆ ಸರ್ವಜ್ಞ || ೧೩೭೪ ||

ಆಡಿ ಅಳುಪಲು ಹೊಲ್ಲ । ಕೂಡಿ ತಪ್ಪಲು ಹೊಲ್ಲ ।
ಕಾಡುವ ನೆಂಟ ಬರಹೊಲ್ಲ, ಧನಹೀನ ।
ನಾಡುವದೆ ಹೊಲ್ಲ ಸರ್ವಜ್ಞ ॥ ೧೩೭೫ ॥

ಕಳ್ಳ ನಾರಿಗೆ ಹೊಲ್ಲ । ಮುಳ್ಳು ಕಾಲಿಗೆ ಹೊಲ್ಲ ।
ಕೊಳ್ಳಿಯ ಬೆಳಕಿಲುಣಹೊಲ್ಲ, ಬಡವ ತಾ ।
ಸುಳ್ಳಾಡಹೊಲ್ಲ ಸರ್ವಜ್ಞ ॥ ೧೩೭೬ ॥

ಉದ್ದು ಮುದ್ದಿಗೆ ಹೊಲ್ಲ । ನಿದ್ದೆ ಯೋಗಿಗೆ ಹೊಲ್ಲ ।
ಬಿದ್ದಿರಲು ಹೊಲ್ಲ ಉದ್ಯೋಗಿ, ಬಡವಂಗೆ ।
ಗುದ್ದಾಟ ಹೊಲ್ಲ ಸರ್ವಜ್ಞ ॥ ೧೩೭೭ ॥

ಸಾಲ ಬಡವಗೆ ಹೊಲ್ಲ । ಸೋಲು ಜೂಜಿಗೆ ಹೊಲ್ಲ ।
ಬಾಲರು ಬೆನ್ನಿಲಿರ ಹೊಲ್ಲ, ಬಡವಂಗೆ ।
ಓಲಗವೆ ಹೊಲ್ಲ ಸರ್ವಜ್ಞ ॥ ೧೩೭೮ ॥

ಇದ್ದಿಲೂ ಬಡವನೂ । ಬಿದ್ದಲ್ಲಿ ಕರಕಷ್ಟ ।
ಇದ್ದಿಲೊಂದೆಡೆಗೆ ಉಪಕಾರಿ, ಬಡವ ತಾ ।
ನಿದ್ದಲ್ಲಿ ಕಷ್ಟ ಸರ್ವಜ್ಞ ॥ ೧೩೭೯ ॥

ಬಡವ ಬಟ್ಟೆಯ ಹೋಗ । ಲೊಡನೆ ಸಂಗಡವೇಕೆ ।
ಬಡತನವೆಂಬ ಹುಲಿಗೂಡಿ ಬರುವಾಗ ।
ನುಡಿಸುವವರಿಲ್ಲ ! ಸರ್ವಜ್ಞ ॥ ೧೩೮೦ ॥

**ತೆಲುಗ**

ಅಡಿಕೆಯನು ಪೋಕೆಂಬ । ಮಡಿಕೆಯನು ಕುಂಡೆಂಬ ।
ಒಡೆವೆಯನು ಇಟ್ಟು ಜೂಜೆಂಬ ತೆಲುಗನ ।
ನುಡಿಯ ನೋಡೆಂದ' ಸರ್ವಜ್ಞ ॥ ೧೩೮೧ ॥

ಅಕ್ಕಿಯನು ಬೀಯೆಂಬ । ಬೆಕ್ಕನ್ನು ಪಿಲ್ಲೆಂಬ ।
ಚೊಕ್ಕಟದ ತೇಜಿ ಗುರ್ರೆಂಬ ತೆಲುಗನ ।
ಸೊಕ್ಕ ನೋಡೆಂದ ಸರ್ವಜ್ಞ ॥ ೧೩೮೨ ॥

### ತಿಗುಳ (ತಮಿಳ)

ಅಂಡೆಯಲಿ ಕರೆಯುವರು । ಕುಂಡೆಯಲಿ ಹೊರುತಿಹರು ।
ಗಂಡನುಳ್ಳಾಕೆ ಅವಳೆಂಬ ತಿಗುಳರನು ।
ಗುಂಡಿಗಿಕ್ಕೆಂದ ಸರ್ವಜ್ಞ ॥ ೧೩೮೩ ॥

ಕಾಯಿಗೆ ಕರಿಯೆಂಬ । ಕೋಳಿಗೆ ಚೋರೆಂಬ ।
ಮಾಯದ ಮಕ್ಕಳುಡು ಎಂಬ ತಿಗುಳರ ।
ಗಾಳಿ ಬೇಡೆಂದ ಸರ್ವಜ್ಞ ॥ ೧೩೮೪ ॥

ಕಾಳ ಕೂಟದ ವಿಷವು । ಚೇಳು, ನಂಬಿದ ಹಗೆಯು ।
ಹಾಳೂರ ಚುರಚಿ, ನಸುಗುನ್ನಿ, ತಿಗುಳರ ।
ಗಾಳಿ ಬೇಡೆಂದ । ಸರ್ವಜ್ಞ ॥ ೧೩೮೫ ॥

ತಿಗುಳ ಜನ ಗೆಣೆಯಿಂದ । ಬೊಗಳುವ ಶುನಿ ಲೇಸು ।
ಮುಗುಳಿಯ ಮರದ ನೆರಳಿಂದ ನುಂಗುವ ।
ನೆಗಳು ಲೇಸೆಂದ ಸರ್ವಜ್ಞ ॥ ೧೩೮೬ ॥

### ತೊತ್ತು

ಮುತ್ತು ಮಾಣಿಕವೇಕೆ । ಮತ್ತೆ ಕುರುಳುಗಳೇಕೆ ।
ಉತ್ತಮದ ಉಡಿಗೆ ಉಡಲೇಕೆ ? ನಿಡುಗೇಶ ।
ತೊತ್ತಿಗೇಕೆಂದ । ಸರ್ವಜ್ಞ ॥ ೧೩೮೭ ॥

ಹರಳು ಕಾಲಿಗೆ ಹೊಲ್ಲ । ಹುರುಳಿ ಕತ್ತೆಗೆ ಹೊಲ್ಲ ।
ಇರುಳೊಳು ಪಯಣ ಬರಹೊಲ್ಲ, ತೊತ್ತಿಂಗೆ ।
ಕುರುಳು ತಾ ಹೊಲ್ಲ ಸರ್ವಜ್ಞ ॥ ೧೩೮೮ ॥

ಮುತ್ತು ಮೂಗುತಿಯೇಕೆ । ಮತ್ತೆ ಹರಳುಗಳೇಕೆ ।
ಕತ್ತೆಯ ಕೊಳೆಗೆ ಮಡಿಯೇಕೆ, ದೊರೆತನವು ।
ತೊತ್ತಿಗೇಕೆಂದ ಸರ್ವಜ್ಞ ॥ ೧೩೮೯ ॥

### ಸಾಲಗಾರ

ಸಾಲವನು ತರುವಾಗ । ಹಾಲುಬೋನುಂಡಂತೆ ।
ಸಾಲಿಗನು ಬಂದು ಕೇಳಿದರೆ ಕುಂಡೆಗೆ ।
ಚೇಳು ಕಡಿದಂತೆ ಸರ್ವಜ್ಞ ॥ ೧೩೯೦ ॥

ಸಾಲವನು ಕೊಂಬಾಗ । ಹಾಲು ಹಣ್ಣುಂಡಂತೆ ।
ಸಾಲಿಗನು ಬಂದು ಎಳೆವಾಗ ಕಿಬ್ಬದಿಯ ।
ಕೀಲು ಮುರಿದಂತೆ ಸರ್ವಜ್ಞ ॥ ೧೩೯೧ ॥

ಬೆಂದಿರಲು ಸಾಲವನು । ತಂದು ತಿಂಬುದು ಸುಖವು ।
ತಂದಂತೆ ಹಿಂದೆ ಕೊಡುವಾಗ ಹೇರಿಟ್ಟಿ ।
ಬಂದು ಬಡಿದಂತೆ ಸರ್ವಜ್ಞ ॥ ೧೩೯೨ ॥

ನಂಬುಗೆಯು ಇರುವನಕ । ಕೊಂಬುವುದು ಸಾಲವನು ।
ನಂಬುಗೆಯು ಕೆಟ್ಟ ಬಳಿಕ ತಾ ಬೇಗೆಯಲಿ ।
ಬೆಂದು ಸತ್ತಂತೆ ಸರ್ವಜ್ಞ ॥ ೧೩೯೩ ॥

ನೂರು ಹಣ ಸಿಗುವನಕ । ಮೀರಿ ವಿನಯದಲಿಪ್ಪ ।
ನೂರರೊಳ್ಮೂರ ಕೇಳಿದರೆ ಸಾಲಿಗನು ।
ತೂರುವನು ಮಣ್ಣ! ಸರ್ವಜ್ಞ ॥ ೧೩೯೪ ॥

ಕೊಂಬುತ್ತ ಸಾಲವನು । ತಿಂಬುವನು ಲೇಸಾಗಿ ।
ಬೆಂಬಲವಿಡಿದು ಬಂದರೆ ದೇಗುಲದ ।
ಕಂಬದಂತಿಹನು ಸರ್ವಜ್ಞ ॥ ೧೩೯೫ ॥

ಬೋರಾಡಿ ಸಾಲವನು । ಹಾರಾಡಿ ಒಯ್ಯುವನು ।
ಈರಾಡಿ ಬಂದು ಕೇಳಿದರೆ ಸಾಲಿಗನು ।
ಚೀರಾಡಿ ಕೊಡನು ಸರ್ವಜ್ಞ ॥ ೧೩೯೬ ॥

ಬೆಂಡಿರದೆ ಮುಳುಗಿದರು । ಗುಂಡೆದ್ದು ತೇಲಿದರು ।
ಬಂಡಿಯು ನೊಗವು ಚಿಗಿತರೂ ಸಾಲಿಗನು ।
ಕೊಂಡದ್ದು ಕೊಡನು ಸರ್ವಜ್ಞ ॥ ೧೩೯೭ ॥

ಇತ್ತುದನು ಈಯದನ | ಮೃತ್ಯುವೊಯ್ಯದೆ ಬಿಡದು |
ಹತ್ತಿರ್ದ್ದ ಲಕ್ಷ್ಮಿ ತೊಲಗಿ ತಾ ಹುಟ್ಟುವನು |
ತೊತ್ತಾಗಿ ಮುಂದೆ ಸರ್ವಜ್ಞ ॥ ೧೩೯೮ ॥

ಒಳ್ಳೆಯ ಮಾತಿಂಗೆ | ಉಳ್ಳೊಡವೆ ಕೊಡೆನೆಂದು |
ಬೊಳ್ಳಿಟ್ಟು ಬೊಗಳಿ ಹುಸಿದು ಸಾಲವ ನುಂಗಿ |
ಇಲ್ಲೆನುತಲಿಹನು ಸರ್ವಜ್ಞ ॥ ೧೩೯೯ ॥

ಕಡ ತಂದೆನಲ್ಲದೆ | ಹಿಡಿಕಳವ ಕದ್ದೆನೇ? |
ತಡವಲುರೆ ಬೈದು ತೆಗೆದಾನು ಸಾಲಿಗನು |
ನಡುವೆ ಜಗಳವನು ಸರ್ವಜ್ಞ ॥ ೧೪೦೦ ॥

ತಡಗೊಂಡೆನಲ್ಲದೆ | ಹಿಡಿಯೆ ನಾ ಕದ್ದೆನೆ? |
ತೊಡಚಲ್ಕೆ ಬೈದು ಕಳುಹುವ ಸಾಲಿಗನು |
ಕೊಡುವದೇ ಕಷ್ಟ ಸರ್ವಜ್ಞ ॥ ೧೪೦೧ ॥

ಇದ್ದೂರ ಸಾಲ ಹೇ | ಗಿದ್ದರೂ ಕೊಳಬೇಡ |
ಇದ್ದುದನು ಸೆಳೆದು ಸಾಲ ಕೊಟ್ಟವ ಗುದ್ದಿ |
ಒದ್ದು ಕೇಳುವನು ಸರ್ವಜ್ಞ ॥ ೧೪೦೨ ॥

ಬೇರೂರ ಸಾಲವನು | ನೂರನಾದರು ಕೊಳ್ಳು |
ಮೂರಾರು ವರುಷಕವಬಂದ ದಾರಿಯಲಿ |
ಸಾರಿ ಹೋಗುವನು ಸರ್ವಜ್ಞ ॥ ೧೪೦೩ ॥

ಗಡ್ಡವಿಲ್ಲದ ಮೋರೆ | ದುಡ್ಡು ಇಲ್ಲದ ಚೀಲ |
ಬಡ್ಡಿಯು ಸಾಲ ತೆರುವವನ ಬಾಳುವೆಯು |
ಅಡ್ಡಕ್ಕು ಬೇಡ ಸರ್ವಜ್ಞ ॥ ೧೪೦೪ ॥

ಜೇರವನು ಕೊಟ್ಟಾತ | ಹೋರುವನು ಚೀರುವನು |
ಮೀರಿದರೆ ಕಲ್ಲ ಹೊರಿಸುವನು ಕೇಶವನು |
ಗೀರಿಕೊಂಡಾನು ಸರ್ವಜ್ಞ ॥ ೧೪೦೫ ॥

ಉದ್ದರಿಯು ಕೊಟ್ಟಣ್ಣ । ಹದ್ದಾದ ಹಾವಾದ ।
ಎದ್ದೆದ್ದು ಬರುವ ನಾಯಾದ, ಹುತ್ತದ ।
ಗೊದ್ದದಂತಾದ ! ಸರ್ವಜ್ಞ ॥ ೧೪೦೬ ॥

ಇಲ್ಲದಿಹ ಕಾಲಕ್ಕೆ । ಹೊಲ್ಲಹನು ಜನರಿಂಗೆ ।
ಅಲ್ಲದ ಗುಣದ ಅರಸಿಂಗೆ, ಸಾಲಕ್ಕೆ ।
ಕಲ್ಲೆದೆಯು ಬೇಕು ಸರ್ವಜ್ಞ ॥ ೧೪೦೭ ॥

ನಂಬಿಕೆಯು ಉಳ್ಳನಕ । ಕೊಂಬುವುದು ಸಾಲವನು ।
ನಂಬಿಕೆಯು ಕೆಟ್ಟ ಬಳಿಕ ಬೆಂದಾವಿಗೆಯ ।
ಕುಂಭದಂತಿಹನು ಸರ್ವಜ್ಞ ॥ ೧೪೦೮ ॥

ಹಾಲು ಬೋನವು ಲೇಸು । ಮಾಲೆ ಕೊರಳಿಗೆ ಲೇಸು ।
ಸಾಲವಿಲ್ಲದನ ಮನೆ ಲೇಸು, ಬಾಲರ ।
ಲೀಲೆ ಲೇಸೆಂದ ಸರ್ವಜ್ಞ ॥ ೧೪೦೯ ॥

ಅಕ್ಕಸಾಲಿಗ

ಅಕ್ಕಸಾಲೆಯನೂರಿ । ಗೊಕ್ಕಲೆಂದೆನಬೇಡ ।
ಬೆಕ್ಕು ಬಂದಿಲಿಯ ಹಿಡಿವಂತೆ ಊರಿಗವ ।
ರಕ್ಕಸನು ನೋಡ ಸರ್ವಜ್ಞ ॥ ೧೪೧೦ ॥

ಹಣವಿಗೊಂದೀಸ ವಿ । ಪ್ಪಣಕೊಂದು ಬೇಳೆಯನು ।
ತ್ರಿಣಯನ ಮಕುಟವಾದರೂ ಅಕಸಾಲೆ ।
ಟೊಣೆಯದೆ ಬಿಡನು ಸರ್ವಜ್ಞ ॥ ೧೪೧೧ ॥

ಕಡುಗಾಸಿ ಚಿಮ್ಮಾಡಿ । ಕುಡಿ ಮಗುಚಿ ಕತ್ತರಿಸಿ ।
ಪೊಡೆವೆಡೆಗಳೊಳಗೆ ಸಿಡಿಸಿದನು ಸಂವಳಿಸಿ ।
ಪಡೆವ ಪ್ರತಿವೆರಸಿ ಸರ್ವಜ್ಞ ॥ ೧೪೧೨ ॥

ನೆವದೊಳೆಡೆಯಾಡಿಸುತ । ತವೆ ಸಖನ ನುಡಿಯಿಸುತ ।
ಕವಿದಿರಲು ಒಗೆದ ಚಿನ್ನವನು ಪ್ರತಿವೆರಸಿ ।
ತವಕದಲಿ ತೆಗೆವ ಸರ್ವಜ್ಞ ॥ ೧೪೧೩ ॥

ಬೂದಿಯೊಳು ಹುದುಗಿಸುತ । ವೇದಿಸುತ ಮರೆಮಾಡಿ
ಕಾರಿರ್ದ್ದ ಚಿನ್ನದೊಳು ಬೆರಸಿ ಒರೆಹಚ್ಚಿ ।
ಊದುತಲಿ ಟೊಣೆವ ಸರ್ವಜ್ಞ ॥ ೧೪೧೪ ॥

ತೆಗೆದತ್ತಲಿಳಿಯುವುದು । ಮಿಗಲತ್ತಲೇರಿಹುದು ।
ಬಗೆಯೆ ರಸ ತುಂಬ ಬಹುಸಂಚಲದ ತ್ರಾಸ ।
ನೆಗಹಲೆ ಬೇಡ ಸರ್ವಜ್ಞ ॥ ೧೬೧೫ ॥

ಅಕ್ಕಸಾಲೆಯ ಮಗುವು । ಚಿಕ್ಕದೆಂದೆನಬೇಡ ।
ಚಿಕ್ಕಟವು ಮೈಯ ಕಡಿವಂತೆ ಚಿಮ್ಮಟವ ।
ನಿಕ್ಕುತಲೆ ಕಳುವ ಸರ್ವಜ್ಞ ॥ ೧೪೧೬ ॥

ಸಂಚಕವನೀಯದಲೆ । ಲಂಚಕರ ಹೊಗಿಸದಲೆ ।
ಅಂಚಿತವನೊದರಿ ಕಳುಹಿದರೆ ಆಕಸಾಲೆ ।
ವಂಚಿಸಲಿಕರಿಯ ಸರ್ವಜ್ಞ ॥ ೧೪೧೭ ॥

ಬಡಿಗ

ಅಡ್ಡ ಬಡ್ಡಿಯು ಹೊಲ್ಲ । ಗಿಡ್ಡ ಬಾಗಿಲು ಹೊಲ್ಲ ।
ಹೆಡ್ಡರೊಡನಾಟ ತರವಲ್ಲ ಬಡಿಗ ತಾ ।
ದೊಡ್ಡನಿರ ಹೊಲ್ಲ ಸರ್ವಜ್ಞ ॥ ೧೬೧೮ ॥

ಬಣಜಿಗ

ಹಣಜಿ ಬತ್ತವು ಅಲ್ಲ । ಅಣಬೆ ಸತ್ತಿಗೆಯಲ್ಲ ।
ಕಣಕದ ಕಲ್ಲು ಮಣಿಯಲ್ಲ, ಬಣಜಿಗನು ।
ಗುಣವಂತನಲ್ಲ ಸರ್ವಜ್ಞ ॥ ೧೪೧೯ ॥

ಎಳ್ಳು ಗಾಣಿಗ ಬಲ್ಲ । ಸುಳ್ಳು ಸಿಂಪಿಗ ಬಲ್ಲ ।
ಕಳ್ಳರನು ಬಲ್ಲ ತಳವಾರ, ಬಣಜಿಗನು ।
ಎಲ್ಲವನು ಬಲ್ಲ ಸರ್ವಜ್ಞ ॥ ೧೪೨೦ ॥

### ಹರದ

ಕಟ್ಟ್ಯಾನೆ ಬಾವಿಗಂ । ಕೊಟ್ಟ್ಯಾನೆ ಸೂಳೆಗಂ ।
ಹೊಟ್ಟೆಯು ಆಶೆ ಬಡವಂಗೆ, ಹರದಂಗೆ ।
ಪಟ್ಟಣದ ಆಶೆ ಸರ್ವಜ್ಞ ॥ ೧೪೨೧ ॥

ಮೆಟ್ಟ್ಯಾನೆ ಕಾಲಿಂಗೆ । ಹೊಟ್ಟ್ಯಾನೆ ಆವಿಂಗೆ ।
ಬೆಟ್ಟಗಳ ಆಸೆ ಮೃಗಗಳಿಗೆ, ಹರದಂಗೆ ।
ಇಟ್ಟೆಡೆಗಳಾಶೆ ಸರ್ವಜ್ಞ ॥ ೧೪೨೨ ॥

ಕೊಂಬು ಹೋರಿಗೆ ಲೇಸು । ತುಂಬು ಕೇರಿಗೆ ಲೇಸು ।
ಕುಂಬಾರ ಲೇಸು ಊರಿಂಗೆ, ಹರದಂಗೆ ।
ನಂಬುಗೆಯೆ ಲೇಸು ಸರ್ವಜ್ಞ ॥ ೧೪೨೩ ॥

ಹರದನ ಮಾತನ್ನು । ಹಿರಿದು ನಂಬಲು ಬೇಡ ।
ಗರಗಸದೊಡನೆ ಮರಹೋರಿ ತನ್ನತಾ ।
ನಿರಿದುಕೊಂಡಂತೆ ಸರ್ವಜ್ಞ ॥ ೧೪೨೪ ॥

### ಪಂಚಾಳ

ಪಂಚಾಳರಯ್ಯವರು । ವಂಚನೆಗೆ ಗುರುವರರು ।
ಕಿಂಚಿತ್ತು ನಂಬಿ ಕೆಡಬೇಡ ತಿಗುಣಿಯು ।
ಮಂಚದಂತಿಹರು ಸರ್ವಜ್ಞ ॥ ೧೪೨೫ ॥

ಕಳ್ಳನೂ ಒಳ್ಳಿದನು । ಎಲ್ಲ ಜಾತಿಯೊಳಿಹರು ।
ಕಳ್ಳನೊಂದೆಡೆಗೆ ಉಪಕಾರಿ, ಪಂಚಾಳ ।
ನೆಲ್ಲರಲಿ ಕಳ್ಳ । ಸರ್ವಜ್ಞ ॥ ೧೯೨೬ ॥

### ಜಾಲಗಾರ

ನಾಲಿಗನು ಮೇಣಕ್ಕ । ಸಾಲೆಯುಲಿ ನಂಬಿಕೆಯು ।
ಜಾಲಗಾರನಲಿ ದಯೆ, ಧರ್ಮ, ಮುನ್ನಾವ ।
ಕಾಲಕ್ಕು ಇಲ್ಲ ಸರ್ವಜ್ಞ ॥ ೧೪೨೭ ॥

ಹಟಗಾರ

ಮಟಪತಿಗೆ ಕೊರಗಿಲ್ಲ । ಕಟುಗಂಗೆ ಮರುಗಿಲ್ಲ ।
ಪಟವೆಂಬುದಕ್ಕೆ ನೆರಳಿಲ್ಲ, ಹಟಗಾರ ।
ಕುಟಿಲನೆಂದರಿಗು ಸರ್ವಜ್ಞ || ೧೪೨೮ ||

ಹೇಡಿ

ಹೆಂಡತಿಗೆ ಅಂಜುವ । ಗಂಡುಸನು ಏನೆಂಬೆ? ।
ಹಿಂಡು ಕೋಳಿಗಳ ಮುರಿತಿಂಬ ನರಿ, ನಾಯಿ ।
ಕಂಡೋಡಿದಂತೆ ಸರ್ವಜ್ಞ || ೧೪೨೯ ||

ಗಾಜುಗಾರ

ಉಣ್ಣದಲೆ ಉರಿಯುವರು । ಮಣ್ಣಿನಲಿ ಮೆರೆಯುವರು ।
ಬಣ್ಣಗಳ ಬೆರಸಿ ಕರೆಯುವರು ಗಾಜುಗಾ ।
ರಣ್ಣಗಳು ನೋಡ ಸರ್ವಜ್ಞ || ೧೪೩೦ ||

ವಾಜಿ ಹಾರುವದಲ್ಲ । ತೇಜಿ ಹೇರುವದಲ್ಲ ।
ಗಾಜಿನ ಕುಣಿಕೆ ಮಣಿಯಲ್ಲ, ಅತ್ತಿ ಫಲ ।
ಬೀಜದೊಳಗಲ್ಲ ಸರ್ವಜ್ಞ || ೧೪೩೧ ||

ಓಜನೊಕ್ಕಲು ಅಲ್ಲ । ಹೂಜೆ ಭಾಂಡದೊಳಲ್ಲ ।
ಗಾಜೊಂದು ಲೋಹದೊಳಗಲ್ಲ, ಅಂಬಲಿಯು ।
ಭೋಜನದೊಳಲ್ಲ ಸರ್ವಜ್ಞ || ೧೪೩೨ ||

ಗಾಣಿಗ

ಗಾಣಿಗನ ಬೇಹಾರ । ಕೋಣನ ಬೇಸಾಯ ।
ಕ್ಷೀಣಿಸುವ ಕುತ್ತ, ನಮುರ, ಕ್ಷಾಮಗಳಿಂದ ।
ಪ್ರಾಣವದು ಗಾಸಿ ಸರ್ವಜ್ಞ || ೧೪೩೩ ||

ಗಾಣಿಗನು ಈಶ್ವರನ । ಕಾಣನೆಂಬದು ಸಹಜ ।
ಏಣಂಕಧರನು ಧರೆಗಿಳಿಯಲವನಿಂದ ।
ಗಾಣವಾಡಿಸುವ ಸರ್ವಜ್ಞ || ೧೪೩೪ ||

## ಜೇಡ

ಬೇಡಂಗೆ ಶುಚಿಯಿಲ್ಲ । ಬೋಡಂಗೆ ರುಚಿಯಿಲ್ಲ ।
ಕೂಡಿಲ್ಲದಂಗೆ ಸುತರಿಲ್ಲ, ಜೇಡ ತಾ ।
ಮೂಢಾತ್ಮನಲ್ಲ ಸರ್ವಜ್ಞ ॥ ೧೪೩೫ ॥

ಅಗ್ಗ ಬಡವಗೆ ಲೇಸು । ಬುಗ್ಗೆಯುಗಸಗೆ ಲೇಸು ।
ತಗ್ಗಿನ ಗದ್ದೆ ಉಳ ಲೇಸು, ಜೇಡಂಗೆ ।
ಮಗ್ಗ ಲೇಸೆಂದ ಸರ್ವಜ್ಞ ॥ ೧೪೩೬ ॥

## ಬೇಡ

ಬೇಡಗಡವಿಯು ಚಿಂತೆ । ಆಡಿಂಗೆ ಮಳೆ ಚಿಂತೆ ।
ನೋಡುವ ಚಿಂತೆ ಕಂಗಳಿಗೆ, ಹಕವಗೆ ।
ದ್ದಾಡುವ ಚಿಂತೆ ಸರ್ವಜ್ಞ ॥ ೧೪೩೭ ॥

ಆಡಿ ಮರುಗಲು ಹೊಲ್ಲ । ಕೂಡಿ ತಪ್ಪಲು ಹೊಲ್ಲ ।
ಬೇಡನ ನಂಟು ನೆರೆಹೊಲ್ಲ, ಅವನ ಕುರಿ ।
ತಾಡುವದೆ ಹೊಲ್ಲ ಸರ್ವಜ್ಞ ॥ ೧೪೩೮ ॥

ಬೇಡನೊಳ್ಳಿದನೆಂದು । ಆಡದಿರು ಸಭೆಯೊಳಗೆ ।
ಬೇಡ ಬೇಡಿದನು ಕೊಡದಿರೆ ಆ ಇರುಳು ।
ಗೋಡೆಯನು ಒಡೆವ ಸರ್ವಜ್ಞ ॥ ೧೪೩೯ ॥

ಹೊಲ್ಲಹನು ಒಳ್ಳಿದನು । ಎಲ್ಲ ರಾವಿನೊಳುಂಟು ।
ಹೊಲ್ಲಹನ ಹೊಲ್ಲ ನೆನಬೇಡ, ಬೇಡ ತಾ ।
ನೆಲ್ಲರಲಿ ಹೊಲ್ಲ ಸರ್ವಜ್ಞ ॥ ೧೪೪೦ ॥

ಬೇಡನ ಕೆಳೆಯಿಂದ । ಕೇಡು ತಪ್ಪದೆ ಬಹುದು ।
ನೋಡಿ ನಂಬಿದರೂ ಕೇಡನು ಕಡೆಗವನು ।
ಮಾಡದೆ ಬಿಡನು ಸರ್ವಜ್ಞ ॥ ೧೪೪೧ ॥

ತುಪ್ಪಾದ ತುರುಕನ । ಒಪ್ಪಾದ ಹಾರುವನ ।
ಸರ್ಪಗಿರುತಿಪ್ಪ ಬೇಡನ ಮಾತಿಂಗೆ ।
ಒಪ್ಪಲೇಬೇಡ ಸರ್ವಜ್ಞ ॥ ೧೪೪೨ ॥

ಗಾಡನಿಲ್ಲದ ಬಿಲ್ಲು । ಕೋಡಿಯಿಲ್ಲದ ಕೆರೆಯು ।
ಬೇಡಂಗೆ ಮಾಡಿದುಪಕಾರ ಕಡೆಯಲ್ಲಿ ।
ಕೇಡು ಕಾಣಯ್ಯ! ಸರ್ವಜ್ಞ ॥ ೧೪೪೩ ॥

ಸಾಕಿದವರನು ತಿಂಬ । ಸೋಕಿದವರನು ತಿಂಬ ।
ಕೇಕರಿಸಿದವರ ಮುರಿತಿಂಬ ಬೇಡನ ।
ಸೋಕಲೇ ಬೇಡ ಸರ್ವಜ್ಞ ॥ ೧೪೪೪ ॥

ಬೆಸ್ತ

ಕಿರಿಮೀನು ಹಿರಿಮೀನು । ಕೊರೆಕೊರೆದು ತಿಂಬಾತ ।
ಗಿರುವವನೊಬ್ಬ ಮಗಸಾಯೆ, ನೋವಿನ ।
ತೆರನ ತಾನರಿವ ಸರ್ವಜ್ಞ ॥ ೧೪೪೫ ॥

ಕಟಿಕ

ಕೋಳಿಗಳ ಹಂದಿಗಳ । ಮೇಳದಲಿ ತಾ ಸಾಕಿ ।
ಏಳುತಲೆ ಕರೆದು ಬಡಿ ತಿಂಬ ಪಾಪಿಗಳ ।
ಬಾಳಿಲ್ಲ ನರಕ ಸರ್ವಜ್ಞ ॥ ೧೪೪೬ ॥

ಡೊಂಬ

ಕತ್ತೆಗಂ ಕೋಡಿಲ್ಲ । ತೊತ್ತಿಂಗೆ ಗುಣವಿಲ್ಲ ।
ಹತ್ತಿಯ ಹೊಲಕೆ ಗಿಳಿಯಿಲ್ಲ, ಡೊಂಬನಿಗೆ ।
ವೃತ್ತಿಯೇ ಇಲ್ಲ ಸರ್ವಜ್ಞ ॥ ೧೪೪೭ ॥

ಸುಂಕಿಗ

ಸುಂಕದ ಅಣ್ಣಗಳ । ಬಿಂಕವನು ಏನೆಂಬೆ ।
ಸುಂಕಕ್ಕೆ ಸಟೆಯ ನೆರೆಯಾಡಿ ಕಡೆಯಲ್ಲಿ ।
ಟೊಂಕ ಮುರಿದಿಹುದು! ಸರ್ವಜ್ಞ ॥ ೧೪೪೮ ॥

ಬೆಂಕಿಯಲಿ ದಯವಿಲ್ಲ। ಮಂಕನಲಿ ಮತಿಯಿಲ್ಲ।
ಸಂಕಿನ ಧ್ವನಿಗೆ ಪ್ರತಿಯಿಲ್ಲ, ಸ್ವರ್ಗದಲಿ।
ಸುಂಕವೇ ಇಲ್ಲ ಸರ್ವಜ್ಞ ॥ ೧೪೪೯ ॥

ಶೂದ್ರ

ಸೀತೆಯಿಂ ಹೆಣ್ಣಿಲ್ಲ। ಸೂತನಿಂದಾಳಿಲ್ಲ।
ಮಾತಿನಲಿ ನೋತಗಿದಿರಿಲ್ಲ, ಶೂದ್ರಂಗೆ।
ರೀತಿಯೇ ಇಲ್ಲ ಸರ್ವಜ್ಞ ॥ ೧೪೫೦ ॥

ಕೊಂಡೆಯ

ಬಂಡಿಯಚ್ಚಿಗೆ ಭಾರ। ಮಿಂಡೆ ಮುದುಕಗೆ ಭಾರ।
ಗುಂಡುಗಳು ಭಾರ ಬೈತ್ರಕ್ಕೆ, ಲೋಕಕ್ಕೆ।
ಕೊಂಡೆಯನೆ ಭಾರ ಸರ್ವಜ್ಞ ॥ ೧೪೫೧ ॥

ಭಂಡೆಯು ನಡೆ ಚೆಂದ। ಮಿಂಡೆಯು ನುಡಿ ಚೆಂದ।
ಕೊಂಡೆಯನು ಚೆಂದ ಅರಸಿಂಗೆ, ಜಾರೆಗೆ।
ಮಿಂಡನೇ ಚೆಂದ ಸರ್ವಜ್ಞ ॥ ೧೪೫೨ ॥

ಜೋಳವಾಳಿಯು ಹೊಲ್ಲ। ಕೀಳಿನೊಳು ಇರಹೊಲ್ಲ।
ಹೇಳದೌತನಕೆ ಬರಹೊಲ್ಲ, ಕೊಂಡೆಯನ।
ಗಾಳಿಯೇ ಹೊಲ್ಲ ಸರ್ವಜ್ಞ ॥ ೧೪೫೩ ॥

ನೆಗ್ಗಿಲಾನೆಗೆ ಹೊಲ್ಲ। ಸಿಗ್ಗು ಸೂಳೆಗೆ ಹೊಲ್ಲ।
ಸುಗ್ಗಿ ಕಾಲದಲಿ ಮಳೆಹೊಲ್ಲ, ಕೊಂಡೆಯನ।
ಕಿಗ್ಗಳವೆ ಹೊಲ್ಲ ಸರ್ವಜ್ಞ ॥ ೧೪೫೪ ॥

ತೊತ್ತಿನಲಿ ಗುಣವಿಲ್ಲ। ಕತ್ತೆಗಂ ಕೋಡಿಲ್ಲ।
ಬತ್ತಲಿದ್ದವಗೆ ಭಯವಿಲ್ಲ, ಕೊಂಡೆಯರೊ।
ಳುತ್ತಮರು ಇಲ್ಲ ಸರ್ವಜ್ಞ ॥ ೧೪೫೫ ॥

### ಕುಂಟಲಗಿತ್ತಿ

ಹನುಮನಿಂ ಲಂಕೆ ಫ | ಲ್ಗುಣನಿಂದ ಖಾಂಡವನ |
ತ್ರಿಣಯನಿಂ ತ್ರಿಪುರ ಕೆಟ್ಟಂತೆ ಜಗವು ಕುಂ |
ಟಣಿಯಿಂದ ಕೆಡುಗು ಸರ್ವಜ್ಞ ॥ ೧೪೫೬ ॥

### ಹಿತಕಾರಿ

ಮುಟ್ಟಿದೆಡರಿಗೆ ಅಭಯ | ಕೊಟ್ಟಾತ ದಾತಾರ |
ಕೆಟ್ಟಕಾರ್ಯವನು ತಿದ್ದಿದರೆ ಅವನೊಂದು |
ನೆಟ್ಟನೆ ದೈವ ಸರ್ವಜ್ಞ ॥ ೧೪೫೭ ॥

### ಜ್ಞಾನೋಕ್ತಿ

ಮುರಿದ ಹೊಂಬೆನೆಯುವಡೆ | ಕಿರಿದೊಂದು ರಜ ಬೇಕು |
ಮುರಿದ ಕಾರ್ಯವನು ಸರಿಪಡಿಸ ಮತ್ತೊಂದ |
ನರಿದವರು ಬೇಕು ಸರ್ವಜ್ಞ ॥ ೧೪೫೮ ॥

ಅರಿತವರ ಮುಂದೆ ತಂ | ನರಿವನ್ನು ಮೆರೆಯುವುದು |
ಅರಿಯದರ ಮುಂದೆ ಮೆರೆದರೆ ಹೊನ್ನಂಬ |
ತೊರೆಯಲೆಚ್ಚಂತೆ ಸರ್ವಜ್ಞ ॥ ೧೪೫೯ ॥

ಜ್ಞಾನಿಯಜ್ಞಾನೆಂದು | ಹೀನ ಜರಿದಡದೇನು |
ಶ್ವಾನ ತಾ ಬೊಗಳುತಿರಲಾನೆಯದನೊಂದು |
ಗಾನವೆಂದಂತೆ ಸರ್ವಜ್ಞ ॥ ೧೪೬೦ ॥

ಸಪ್ಪನ್ನ ಉಣ ಹೊಲ್ಲ | ಮುಪ್ಪು ಬಡವಗೆ ಹೊಲ್ಲ |
ತಪ್ಪಿನಲಿ ಸಿಲುಕಿ ಇರಹೊಲ್ಲ, ಜಾರೆಯನು |
ಅಪ್ಪುವದೆ ಹೊಲ್ಲ ಸರ್ವಜ್ಞ ॥ ೧೪೬೧ ॥

ಶ್ವಾನಬಾಲವು ಡೊಂಕು | ಹೀನಮನವದು ಡೊಂಕು |
ಕಾನನದಿ ಹರಿವ ಹೊಳೆ ಡೊಂಕು, ಪಿಸುಣಿಗನು |
ಶ್ವಾನೆ ಡೊಂಕೆಂದ ಸರ್ವಜ್ಞ ॥ ೧೪೬೨ ॥

ಕೋಡಗನ ಒಡನಾಡಿ । ಕೇಡಕ್ಕು ಸಂಸಾರ ।
ಕಾಡಾಡಿ ಕೆಂಪು ಮಾಣಿಕವ ಕಲ್ಲೆಂದು ।
ಈಡಾಡಿದಂತೆ ಸರ್ವಜ್ಞ ॥ ೧೪೬೩ ॥

ಕಟ್ಟಾಳು ತಾನಾಗಿ । ಬಟ್ಟೆಯಲಿ ನೆರವೇಕೆ? ।
ಸೆಟ್ಟಿಗೆ ತೊದಲು ನುಡಿಯೇಕೆ? ಅರಿದಂಗೆ ।
ನಿಷ್ಠುರವದೇಕೆ? ಸರ್ವಜ್ಞ ॥ ೧೪೬೪ ॥

ಒಗೆಬಗೆಯ ಭೋಗವಿರೆ । ನಗುತಿಹರು ಸತಿಸುತರು ।
ನಗೆ ಹೋಗಿ ಹೊಗೆಯು ಬರಲವರು ಅಡವಿಯಲಿ ।
ಒಗೆದು ಬರುತಿಹರು ಸರ್ವಜ್ಞ ॥ ೧೪೬೫ ॥

ಗಂಗೆಯಲಿ ಹೊಲೆಯಿಲ್ಲ । ಲಿಂಗಕ್ಕೆ ಕಡೆಯಿಲ್ಲ ।
ಕಂಗಳಗೆ ಬೆಳಗು ಬೇಗಿಲ್ಲ ಸಾಯುವಗೆ ।
ಸಂಗಡಿಗರಿಲ್ಲ ಸರ್ವಜ್ಞ ॥ ೧೪೬೬ ॥

ಸುಟ್ಟೊಲೆಯು ಬಿಡದೆ । ತಾ ನಟ್ಟುಮೇಲುರಿದಂತೆ ।
ಕೊಟ್ಟ ಮೇಲುರಿವನಳಿಯನೆಂಬೀ ಮಾತು ।
ಕಟ್ಟ ಇಟ್ಟಂತೆ ಸರ್ವಜ್ಞ ॥ ೧೪೬೭ ॥

ಅಂಡೆಬಾಯಿಯನೊಬ್ಬ । ಕಂಡು ಮುಚ್ಚಲು ಬಹುದು ।
ಮುಂಡೆಗಳ ಬಾಯ ಮುಚ್ಚಲು ಸಲ್ಲದಿದು ।
ಕಂಡಿತವು ನೋಡ ಸರ್ವಜ್ಞ ॥ ೧೪೬೮ ॥

ಅತಿಯಾಶೆ ಮಾಡುವನು । ಗತಿಗೇಡಿಯಾಗುವನು ।
ಅತಿ ಆಶೆಯಿಂದ ಮತಿ ಕೆಡುಗು, ರತಿಯಿಂದ ।
ಸತಿ ಸುತರು ಕೆಡುಗು ಸರ್ವಜ್ಞ ॥ ೧೪೬೯ ॥

ಅತ್ತೆ ಮಾಡಿದ ತಪ್ಪು । ಗೊತ್ತಿಲ್ಲದಡಗಿಹುದು ।
ತೊತ್ತದನು ಮಾಡಿದರೆಕ್ಷಣದಿ ಸರುವರಿಗೆ ।
ಗೊತ್ತಿಹುದು ನೋಡ । ಸರ್ವಜ್ಞ ॥ ೧೪೭೦ ॥

ಅರಿಯೆನೆಂಬುವುದೊಂದು । ಅರಸು ಕೆಲಸವು ನೋಡ ।
ಅರಿದಿಹೆನೆಂದು ಮೆರೆಯುವ ಬಡವನು ।
ದೊರೆಗಳಾಳೆಂದ ಸರ್ವಜ್ಞ ॥ ೧೪೭೧ ॥

ಅಲ್ಲಪ್ಪನೂರಲ್ಲಿ । ಬಲ್ಲಪ್ಪನಲ್ಲಪ್ಪ ।
ಬಲ್ಲಪ್ಪನಿಲ್ಲದೂರಲ್ಲಿ ಅಲ್ಲಪ್ಪ ।
ಬಲ್ಲಪ್ಪನಪ್ಪ ಸರ್ವಜ್ಞ ॥ ೧೪೭೨ ॥

ವ್ಯಸನದಲಿ ದೇಹವು । ಮಸಣವನು ಕಾಣುವದು ।
ವ್ಯಸನವನು ಬಿಟ್ಟು ಹಸನಾಗಿ ದುಡಿದರೆ ।
ಅಶನ ವಸನಗಳು ಸರ್ವಜ್ಞ ॥ ೧೪೭೩ ॥

ಗೀತ ವಿದ್ಯವ ಕಲಿತ । ಜಾತರ ಒಲುಮೆಯನು ।
ರೀತಿಯಲಿ ಅರಿಯಲರಿಯದರು ಪಾತಕರ ।
ಮಾತಿನಿಂ ಕೆಡುಗು ಸರ್ವಜ್ಞ ॥ ೧೪೭೪ ॥

ಮನೆಯು ಬೆಂದರೆ ಸುಟ್ಟ । ಮನುಜ ತಾ ಬೆಯ್ಯುವನೆ ।
ಮನೆಯಲೆಲ್ಲವರು ಬೆಂದರೂ ತಣ್ಣಗಿಹ ।
ಮನವೆ ನಿಜ ಮನೆಯು ಸರ್ವಜ್ಞ ॥ ೧೪೭೫ ॥

ಎಲ್ಲವರು ಬಯ್ದರೂ । ಕಲ್ಲಿನಿಂದಿಟ್ಟರೂ ।
ಅಲ್ಲದ ಮಾತ ನುಡಿದರೂ ಶಿವನಲ್ಲಿ ।
ತಲ್ಲಣವು ಬೇಡ ಸರ್ವಜ್ಞ ॥ ೧೪೭೬ ॥

ಉರಗನ ಮುಖದಿ ಸಿ । ಕ್ಕಿರುತಿಪ್ಪ ಕಪ್ಪೆ ತಾ ।
ನೆರಗುವ ನೊಣಕೆ ನೆಗೆದಂತೆ ಸಂಸಾರ ।
ದಿರವು ಕಾಣಯ್ಯ ಸರ್ವಜ್ಞ ॥ ೧೪೭೭ ॥

ಸಿದ್ಧರಿಗೆ ಯೋಗವನು । ಬುದ್ಧಿವಂತಗೆ ಮತಿಯು ।
ಬಿದ್ದ ಅಡವಿಯ ಕಿಚ್ಚನು, ಮುಳ್ಳು ಮೊನೆ ।
ತಿದ್ದಿದವರಾರು ? ಸರ್ವಜ್ಞ ॥ ೧೪೭೮ ॥

ಆಡದಲೆ ಮಾಡುವನು । ರೂಢಿಯೊಳಗುತ್ತಮನು ।
ಆಡಿ ಮಾಡುವನು ಮಧ್ಯಮನು, ಅಧಮ ತಾ ।
ನಾಡಿ ಮಾಡದನು ಸರ್ವಜ್ಞ ॥ ೧೪೭೯ ॥

ಚತುರೋಕ್ತಿ

ಒಂದಕ್ಕೆ ಎಣೆಯಿಲ್ಲ । ಸಂದಿಲ್ಲ ಎರಡಕ್ಕೆ ।
ಮುಂದೆ ಮೂರಕ್ಕೆ ಎಡೆಯಿಲ್ಲ, ನಾಲ್ಕಕ್ಕೆ ।
ಹಿಂದು ಮುಂದಿಲ್ಲ ಸರ್ವಜ್ಞ ॥ ೧೪೮೦ ॥

ನಾರಿಯಿಲ್ಲದ ಮನೆಯು । ವಾರಿಯಿಲ್ಲ ದುರ್ಗ ।
ಮೇರೆ ತಪ್ಪಿದನ ಮನ್ನಣೆಯು ಇವು ಮೂರು ।
ಮಾರಿ ಕಾಣಯ್ಯ ಸರ್ವಜ್ಞ ॥ ೧೪೮೧ ॥

ಆಸೆ ಇಲ್ಲದ ದೋಸೆ । ವಿೂಸ ಇಲ್ಲದ ಮೋರೆ ।
ಬಾಸಿಂಗವಿರದ ಮದುವೆಯು ಇವು ಮೂರು ।
ಹೇಸಿ ಕಾಣಯ್ಯ ಸರ್ವಜ್ಞ ॥ ೧೪೮೨ ॥

ನಟ್ಟಡವಿಯ ಮಳೆಯು । ದುಷ್ಟರ ಗೆಳೆತನವು ।
ಕಷ್ಟವಾದವಳ ತಲೆ ಬೇನೆ, ಇವು ಮೂರು ।
ಕೆಟ್ಟರೆ ಲೇಸು ಸರ್ವಜ್ಞ ॥ ೧೪೮೩ ॥

ಓದು ಇಲ್ಲದ ವಾದ । ಭೇದಿಸುವ ದುರ್ಬುದ್ಧಿ ।
ಕಾದಲರಿಯದನ ಆಳಿಕೆಯು, ಇವು ಮೂರು ।
ಹೋದರೆ ಲೇಸು ಸರ್ವಜ್ಞ ॥ ೧೪೮೪ ॥

ಪುಷ್ಪವಿಲ್ಲದ ಪೂಜೆ । ಅಶ್ವವಿಲ್ಲದ ಅರಸು ।
ಅಪ್ಪಲೊಲ್ಲದಳ ನಗೆನುಡಿಯು ಇವು ಮೂರು ।
ಚಪ್ಪೆ ಕಾಣಯ್ಯ ಸರ್ವಜ್ಞ ॥ ೧೪೮೫ ॥

ಅಚ್ಚು ಇಲ್ಲದ ಬಂಡಿ । ಮೆಚ್ಚು ಇಲ್ಲದ ದೊರೆಯು ।
ರಚ್ಚೆಯಲಿಹನ ಸವಿಮಾತು, ಎಂದಿಗು ।
ನೆಚ್ಚಬೇಡೆಂದ ಸರ್ವಜ್ಞ ॥ ೧೪೮೬ ॥

ಹೋಳಿಗಿಲ್ಲದ ಹಬ್ಬ । ಮೇಳವಿಲ್ಲದ ಕೂಟ ।
ಆಳಿಲ್ಲದವನ ಡೊರೆತನವು, ಇವು ಮೂರು ।
ಕೋಳು ಹೋದಂತೆ ಸರ್ವಜ್ಞ ॥ ೧೪೮೭ ॥

ಕೂಳು ಇಲ್ಲದ ಬಾಳು । ವೇಳೆಗಿಲ್ಲದ ಆಳು ।
ಕಾಳರಸುಗೆಯ್ವ ದೊರೆತನವು, ಇವು ಮೂರು ।
ಹಾಳು ಕಾಣಯ್ಯ ಸರ್ವಜ್ಞ ॥ ೧೪೮೮ ॥

ಒತ್ತಿಮಾಡಿದ ಹಣ್ಣು । ಹೊತ್ತುಮಾರಿದ ಲಾಭ ।
ಸತ್ತವರಿಗತ್ತ ಕಣ್ಬೇನೆ, ಇವು ಮೂರು ।
ವ್ಯರ್ಥ ಕಾಣಯ್ಯ ಸರ್ವಜ್ಞ ॥ ೧೪೮೯ ॥

ಒಕ್ಕಲಿಲ್ಲದ ಊರು । ಮಕ್ಕಳಿಲ್ಲದ ಮನೆಯು ।
ಲೆಕ್ಕವಿಲ್ಲದನ ಬೇಹಾರ, ಇವು ಮೂರು ।
ದುಕ್ಕ ಕಾಣಯ್ಯ ಸರ್ವಜ್ಞ ॥ ೧೪೯೦ ॥

ಒಕ್ಕರುಡುಗುವ ಕಣಿಕ । ಮಕ್ಕಳುಳ್ಳಾಸೂಳೆ ।
ಅಕ್ಕರವ ಕಲಿತ ಹೊಲೆಯನು, ಇವು ಮೂರು ।
ಚೊಕ್ಕವಲ್ಲೆಂದ ಸರ್ವಜ್ಞ ॥ ೧೪೯೧ ॥

ಒಕ್ಕಲಿಗನೋದಲ್ಲ । ಬೆಕ್ಕು ಹೆಬ್ಬುಲಿಯಲ್ಲ ।
ಎಕ್ಕೆಯು ಗಿಡವು ಬನವಲ್ಲ, ಇವು ಮೂರು ।
ಲೆಕ್ಕದೊಳಗಲ್ಲ ಸರ್ವಜ್ಞ ॥ ೧೪೯೨ ॥

ಕತ್ತೆಯೇರಲು ಹೊಲ್ಲ । ತೊತ್ತು ಸಂಗವು ಹೊಲ್ಲ ।
ಬತ್ತಲಲಿ ಜಲವ ಹೊಗಹೊಲ್ಲ, ಇವುಗಳಲಿ ।
ಅತ್ಯಂತ ಹೊಲ್ಲ ಸರ್ವಜ್ಞ ॥ ೧೪೯೩ ॥

ಉಪ್ಪಿಲ್ಲದೂಟ ಕ । ಣ್ಬೊಪ್ಪವಿಲ್ಲದ ನಾರಿ ।
ತೊಪ್ಪಲ ನೀರು, ಕೊನೆಗಬ್ಬು, ಇವು ನಾಲ್ಕು ।
ಚಪ್ಪೆ ಕಾಣಯ್ಯ ಸರ್ವಜ್ಞ ॥ ೧೪೯೪ ॥

ಗಡಿಯ ನಾಡಿನ ಸುಂಕ । ತಡಿಯಲಂಬಿಗ ಕೂಲಿ ।
ಮಡದಿಯರ ಒತ್ತೆ, ಒಳಲಂಚ, ಇವು ನಾಲ್ಕು ।
ಅಡಿಯಿಟ್ಟೆಡಿಲ್ಲ ಸರ್ವಜ್ಞ ॥ ೧೪೯೫ ॥

ಒಲೆಯ ಮೇಲಣ ಹಾಲು । ಚಲದಂಕದಲಿ ಪಂಥ ।
ಲಲನೆಯರೊಲುಮೆ, ಹೆಳುದಾರಿ, ಇವು ನಾಲ್ಕು ।
ತೊಲಗಿದರೆ ಇಲ್ಲ ಸರ್ವಜ್ಞ ॥ ೧೪೯೬ ॥

ಮಾತಿನ ಮಾಲೆಯೂ । ತೂತಾದ ಮಡಿಕೆಯೂ ।
ಹಾತೆಯು, ಹುಲ್ಲುಸರವೆಯು, ಇವು ನಾಲ್ಕು ।
ಏತಕ್ಕು ಬೇಡ ಸರ್ವಜ್ಞ ॥ ೧೪೯೭ ॥

ಹೊಲೆಯಗಿತ್ತಾ ಸಾಲ । ಒಲೆಯ ಮೇಲಿನ ಹಾಲು ।
ಲಲನೆಯರ ಒಲುಮೆ, ಹುಲುಗಿಚ್ಚು, ಇವು ನಾಲ್ಕು ।
ನಿಲಲಿಲ್ಲವಯ್ಯ ಸರ್ವಜ್ಞ ॥ ೧೪೯೮ ॥

ಕಕ್ಕೆ ಬಿಕ್ಕೆಯ ಕಾಯಿ । ಮಕ್ಕಳಾಗದ ಪ್ರೌಢೆ ।
ಒಕ್ಕಲಿಗನೋದು, ಕುರಿಬೆಣ್ಣೆ, ಇವು ಅಯ್ದು ।
ಲೆಕ್ಕದೊಳಗಲ್ಲ ಸರ್ವಜ್ಞ ॥ ೧೪೯೯ ॥

ಸುಂಕಿಗನು ಹುರಿಹಲ್ಲು । ಬಿಂಕದ ಬೆಲೆವೆಣ್ಣು ।
ಕಂಕಿಯು, ಸುಂಕ, ನಸುಗುನ್ನಿ, ಇವು ಆರು ।
ಸೋಂಕಿದರೆ ಬಿಡವು ಸರ್ವಜ್ಞ ॥ ೧೫೦೦ ॥

ಹರಿವ ನೀರೆಳೆವಳ್ಳಿ । ತುರುಗ ಬೈತ್ರವು ಬಂಡಿ ।
ಅರಸಿನ ಮನವು ಬೆಲೆವೆಣ್ಣು, ಇವು ಏಳು ।
ತಿರುಹುವವರಿಚ್ಛೆ ಸರ್ವಜ್ಞ ॥ ೧೫೦೧ ॥

ಜಾಣಂಗೆ ಮುನಿಸಿಲ್ಲ । ಕೋಣಂಗೆ ಮತಿಯಿಲ್ಲ ।
ಕಾಣದಂಧಕಗೆ ಹಗಲಿಲ್ಲ, ಸಿಂಹಕೆ ।
ಕೇಣವೇ ಇಲ್ಲ ಸರ್ವಜ್ಞ ॥ ೧೫೦೨ ॥

ಹಾಸು ಇಲ್ಲದ ನಿದ್ರೆ । ಪೂಸು ಇಲ್ಲದ ಮೋಹ ।
ಭಾಷೆಯರಿಯದಳ ಗೆಳೆತನವು ಮೋಟ ಕೈ ।
ಬೀಸಿ ಕರೆದಂತೆ ಸರ್ವಜ್ಞ ॥ ೧೫೦೩ ॥

ಮುದಿಯೆತ್ತಿನಾರಂಬ । ಮುದಿಸೂಳೆಯೊಡನಾಟ ।
ಬೆದರುವ ಪಯಣ, ತಲೆಹೊರೆಯು, ತನ್ನ ತಾ ।
ಗದುಮಿಕೊಂಡಂತೆ ಸರ್ವಜ್ಞ ॥ ೧೫೦೪ ॥

ಅಬ್ಬೆಗರಿಷಿಣವೇಕೆ। ಕಬ್ಬೇಕೆ ಬೋಡಂಗೆ ।
ನಿಬ್ಬಣವು ಏಕೆ ಕುರುಡಂಗೆ ವನದೊಳಗೆ ।
ಹೆಬ್ಬುಲಿಯದೇಕೆ ? ಸರ್ವಜ್ಞ ॥ ೧೫೦೫ ॥

ಆನೆಗಂದಳವೇಕೆ । ಸೋನಂಗೆ ನೊಬಗೇಕೆ ।
ಗಾಣವಾಡುವಗೆ ಮಡಿಯೇಕೆ ಮರುಳಂಗೆ ।
ಆನಂದವೇಕೆ ಸರ್ವಜ್ಞ ॥ ೧೫೦೬ ॥

ಅಪ್ಪ ಹಾಕಿದ ಗಿಡವು । ಒಪ್ಪುತ್ತಲಿರುತಿರಲು ।
ತಪ್ಪಿಲ್ಲವೆಂದು ಅದನೇರಿ ಮಗನುರ್ಲಿ ।
ಗೊಪ್ಪಿಕೊಳ್ಳುವನೆ? ಸರ್ವಜ್ಞ ॥ ೧೫೦೭ ॥

ವೀರತನ ವಿತರಣವು । ಸಾರಗನ ಚಪಲತೆಯು ।
ಚಾರುತರ ರೂಪು, ಚದುರತನವೆಲ್ಲರಿಗೆ ।
ಹೋರಿದರೆ ಬಹುದೆ? ಸರ್ವಜ್ಞ ॥ ೧೫೦೮ ॥

ಸೊಡರು ಸುಲಿಗೆಯ ಆಳು । ಪಡೆದುಂಬ ಸೂಳೆಯೂ ।
ತುಡುಗುಣಿ, ನಾಯಿ, ಅಳಿಯನು, ಅರಸಾಳು ।
ಬಡತನವರಿಯರು ಸರ್ವಜ್ಞ ॥ ೧೫೦೯ ॥

ಬಂಧನದಲಿರುವವನು । ಹಂದಿಯಂತಿರುತಿಹನು ।
ಬಂಧುವಿಲ್ಲದನು, ಬಡವನು, ದೇಶಿಗನು ।
ಎಂದಳಿದರೇನು ? ಸರ್ವಜ್ಞ ॥ ೧೫೧೦ ॥

ಕರೆಯುದಲೆ ಬರುವವನ । ಬರೆಯುದಲೆ ಓದುವನ ।
ಬರೆಗಾಲಿನಿಂದ ನಡೆವವನ ಕರೆತಂದು ।
ಕೆರದಿ ಹೊಡೆಯೆಂದ ಸರ್ವಜ್ಞ ॥ ೧೫೧೧ ॥

ವಿದ್ಯಕಲಿಸದ ತಂದೆ । ಬುದ್ಧಿ ಹೇಳದ ಗುರುವು ।
ಬಿದ್ದಿರಲು ಬಂದು ನೋಡದ ತಾಯಿಯು ।
ಶುದ್ಧ ವೈರಿಗಳು ಸರ್ವಜ್ಞ ॥ ೧೫೧೨ ॥

ಅಳಿಯೂರತಳವಾರ । ಕಳೆಯುಳ್ಳ ಸೂಳೆಯೂ ।
ಹೊಳಲ ಸುಂಕಿಗನು, ಹಳೆನಾಯಿ, ಯಾಚಕನು ।
ತೊಲಗುವವರಲ್ಲ ಸರ್ವಜ್ಞ ॥ ೧೫೧೩ ॥

ಕರಿಗೆ ಕೇಸರಿ ವೈರಿ । ದುರಿತಕ್ಕೆ ಹರ ವೈರಿ ।
ಉರವಣಿಸಿ ಬರುವ ಸಂಸಾರ ದುಃಖಕ್ಕೆ ।
ಪರಿಣಾಮ ವೈರಿ ಸರ್ವಜ್ಞ ॥ ೧೫೧೪ ॥

ಗೀತವಾದ್ಯವು ನೃತ್ಯ । ಓತವರ ಒಲುಮೆಯೂ ।
ಪ್ರೀತಿಯ ನುಡಿಯು, ಒಳಮಾತು, ಹೆಗ್ಗಡೆಯ ।
ಮಾತಿನಿಂ ಕೆಡುಗು ಸರ್ವಜ್ಞ ॥ ೧೫೧೫ ॥

ಮುತ್ತ್ತರಗು, ಇಂಗು, ಮಧು, । ಕಸ್ತೂರಿಯು ಇವು ಜನ್ಮ ।
ವೆತ್ತಿದ ರಾವು ಅತಿಕಷ್ಟ, ಜಗದೊಳಿದು ।
ಉತ್ತಮರ ನೆಲೆಯು ಸರ್ವಜ್ಞ ॥ ೧೫೧೬ ॥

ಆಳು, ಸೂಳೆಯು, ನಾಯಿ, । ಕೋಳಿ, ಜೋಯಿಸ, ವೈದ್ಯ, ।
ಗೂಳಿಯು, ತಗರು, ಪ್ರತಿರೂಪ ಕಂಡರೆ ।
ಕಾಳಗವೆಂದ ಸರ್ವಜ್ಞ ॥ ೧೫೧೭ ॥

ನಲ್ಲ, ಒಲ್ಲಿಯನೊಲ್ಲ । ನೆಲ್ಲಕ್ಕಿ ಬೋನೊಲ್ಲ ।
ಅಲ್ಲವನು ಒಲ್ಲ, ಮೊಸರೊಲ್ಲ, ಯಾಕೊಲ್ಲ ? ।
ಇಲ್ಲ, ಅದಕೊಲ್ಲ! ಸರ್ವಜ್ಞ ॥ ೧೫೧೮ ॥

### ಅನುಪಮ ಪದಾರ್ಥಗಳು

ಮೇರುವಿಂಗೆಣೆಯಿಲ್ಲ । ಧಾರಿಣಿಗೆ ಸರಿಯಿಲ್ಲ ।
ತಾರಕನಿಂದ ಹಿತರಿಲ್ಲ, ದೈವ ತಾ ।
ಬೇರೊಬ್ಬನಿಲ್ಲ ಸರ್ವಜ್ಞ ॥ ೧೫೧೯ ॥

ಪರಮಾತ್ಮಗೆಣೆಯಿಲ್ಲಂ । ಬರಕೆ ನಿಚ್ಚಣಿಯಿಲ್ಲ ।
ಹೊರಗಾದ ಮೇಲೆ ಭಯವಿಲ್ಲ, ಮರ್ತ್ಯದೊಳ ।
ಗಿರುವವರೆ ಇಲ್ಲ ಸರ್ವಜ್ಞ ॥ ೧೫೨೦ ॥

ಲಿಂಗದಿಂ ಘನವಿಲ್ಲ । ಗಂಗೆಗಿಂ ಶುಚಿಯಿಲ್ಲ ।
ಕಂಗಳಿಂದಧಿಕ ಹಿತರಿಲ್ಲ, ಭಕ್ತ ತಾ ।
ಜಂಗಮನಿಂದಿಲ್ಲ ಸರ್ವಜ್ಞ ॥ ೧೫೨೧ ॥

ರಾಮ ನಾಮವೆ ನಾಮ । ಸೋಮಶಂಕರ ಗುರುವು ।
ಆ ಮಹಾರುದ್ರ ಅಧಿದೈವ, ಜಗದೊಳಗೆ ।
ಭೀಮನೇ ಭಕ್ತ ಸರ್ವಜ್ಞ ॥ ೧೫೨೨ ॥

ಸತ್ಯಕ್ಕೆ ಸರಿಯಿಲ್ಲ । ಮಿಥ್ಯಕ್ಕೆ ನೆಲೆಯಿಲ್ಲ ।
ಹೆತ್ತಮ್ಮನಿಂದ ಹಿತರಿಲ್ಲ, ನರರೊಳಗೆ ।
ನಿತ್ಯರೇ ಇಲ್ಲ ಸರ್ವಜ್ಞ ॥ ೧೫೨೩ ॥

ರಾತ್ರಿಯೊಳು ಶಿವರಾತ್ರಿ । ಜಾತ್ರೆಯೊಳು ಶ್ರೀಶೈಲ ।
ಕ್ಷೇತ್ರದೊಳಗಧಿಕ ಶ್ರೀಕಾಶಿ, ಶಿವತತ್ವ ।
ಸ್ತೋತ್ರದೊಳಗಧಿಕ ಸರ್ವಜ್ಞ ॥ ೧೫೨೪ ॥

### ಅನುಭವೋಕ್ತಿ

ಏರುವ ಕುದುರೆಯನು । ಹೇರುವ ಎತ್ತನ್ನು ।
ಬೇರೂರಲಿದ್ದ ಸತಿಯನ್ನು ಬೇರೊಬ್ಬ ।
ರೇರದೆ ಬಿಡರು ಸರ್ವಜ್ಞ ॥ ೧೫೨೫ ॥

ನೇರಿದ ಹೊಲವನ್ನು । ಹೋರುವ ಮಗನನ್ನು ।
ಚಾರು ಮೈನೆರೆದ ಮಗಳನ್ನು ಪರರಲ್ಲಿ ।
ಬೀರುವವನೆಗ್ಗ ಸರ್ವಜ್ಞ ॥ ೧೫೨೬ ॥

ಹಲ್ಲ ಮೇಲಿನ ಕೆಂಪು । ಕಲ್ಲಮೇಲಿನ ಹಾಂಸೆ ।
ಮಲ್ಲಿಗೆಯರಳ ತನಿಗಂಪು ಹೊಸ ಮೋಹ ।
ನಿಲ್ಲವಿವು ನೋಡ ಸರ್ವಜ್ಞ ॥ ೧೫೨೭ ॥

ದಿನಪತಿಗೆ ಎಣೆಯಿಲ್ಲ । ಧನಪತಿಗೆ ಸ್ಥಿರವಿಲ್ಲ ।
ಅನುಭವಿಗೆ ಬೇರೆ ಮತವಿಲ್ಲ, ಅರಿದಂಗೆ ।
ಮುನಿವವರೆ ಇಲ್ಲ ಸರ್ವಜ್ಞ ॥ ೧೫೨೮ ॥

ಕಾಯಕವು ಉಳ್ಳನಕ । ನಾಯಕನು ಎನಿಸಿಪ್ಪ ।
ಕಾಯಕವು ತೀರ್ದ ಮರುದಿನವೆ ಸುಡುಗಾಡ ।
ನಾಯಕನು ಎನಿಪ ! ಸರ್ವಜ್ಞ ॥ ೧೫೨೯ ॥

ಸತ್ತವರಿಗತ್ತು ಬೇ । ಸತ್ತವರು ಉಳಿವರೇ ? ।
ಹತ್ತೆಂಟುಕಾಲ ತಡನಕ್ಕು, ಬಳಿಕೆಲ್ಲ ।
ರತ್ತಲೇ ಅಕ್ಕು ಸರ್ವಜ್ಞ ॥ ೧೫೩೦ ॥

ಹೆತ್ತ ತಾಯನು ಮಾರಿ । ತೊತ್ತ ತಂದಾತೆರದಿ ।
ತುತ್ತಿನಾತುರಕೆ ತತ್ವವನು ತೊರೆದಿಹನು ।
ಕತ್ತೆ ತಾನೆಂದ ! ಸರ್ವಜ್ಞ ॥ ೧೫೩೧ ॥

ತುತ್ತಿನಾಶೆಗೆ ಮತವ । ವಿತ್ತದಾಶೆಗೆ ಸತಿಯ ।
ನಿತ್ತು ಬಾಳುವ ಮನುಜರ ಸಂಗವು ।
ಸತ್ತರೂ ಬೇಡ ಸರ್ವಜ್ಞ ॥ ೧೫೩೨ ॥

ಕಂಡವರ ತೆಗಳುವನ । ಕಂಡಿಹಳ ಬಿಡದವನ ।
ಭಂಡನೆರೆಯಾಡಿ ಕಾಲ ಕೆದರುವನ ।
ಕಂಡಿಹರೆ ತೊಲಗು ಸರ್ವಜ್ಞ ॥ ೧೫೩೩ ॥

ಹಂಗಿನರಮನೆಯಿಂದ । ವಿಂಗಡದ ಗುಡಿ ಲೇಸು ।
ಭಂಗಬಟ್ಟುಂಬ ಬಿಸಿಯನ್ನಕ್ಕಿಂತಲು ।
ತಂಗುಳವೆ ಲೇಸು ಸರ್ವಜ್ಞ ॥ ೧೫೩೪ ॥

ಅಡೆಯ ಮಾವಿನ ಹಣ್ಣು । ಕಡಿದ ಕಬ್ಬಿನ ಗಣಿಕೆ ।
ಪಡೆದ ಒಡವೆಯನು, ಮಡದಿಯನು ಪರರಲ್ಲಿ ।
ಬಿಡುವವನೆ ಹೆಡ್ಡ ಸರ್ವಜ್ಞ ॥ ೧೫೩೫ ॥

ಜಾರೆ ನೆರೆ ಸೇರುವಗೆ । ಶೂರರೊಳು ಹೋರುವಗೆ ।
ಊರಿರುಳ ಸಾರಿ ಕಳುವಂಗೆ ತಿಳಿಯದಲೆ ।
ಮಾರಿ ಬಂದಿಹುದು ಸರ್ವಜ್ಞ ॥ ೧೫೩೬ ॥

ಹಾಲು ಇಲ್ಲದ ಊಟ । ಬಾಲೆಯರ ಬಿರುನೋಟ ।
ಕಾಲಿಲ್ಲದವನ ಹರಿದಾಟ, ಕಂಗಳನ ।
ಕೋಲು ಕಳೆದಂತೆ ಸರ್ವಜ್ಞ ॥ ೧೫೩೭ ॥

ಆಳಾಗ ಬಲ್ಲವನು । ಆಳುವನು ಅರಸಾಗಿ ।
ಆಳಾಗಿ ಬಾಳಲರಿಯದನು ಕಡೆಯಲ್ಲಿ ।
ಹಾಳಾಗಿ ಹೋಹ ಸರ್ವಜ್ಞ ॥ ೧೫೩೮ ॥

ಒಬ್ಬನರಿದರೆ ಸ್ವಾಂತ । ಇಬ್ಬರಲಿ ಏಕಾಂತ ।
ಇಬ್ಬರಿಂದೊಬ್ಬನರಿದು ಬೇರೊಬ್ಬನಿಂ ।
ಹಬ್ಬಿ ಲೋಕಾಂತ ಸರ್ವಜ್ಞ ॥ ೧೫೩೯ ॥

ಇಬ್ಬರೊಳಗಿನ ಕಿಚ್ಚು । ಒಬ್ಬರರಿಯದೆ ಹೊತ್ತಿ
ಹಬ್ಬುತ್ತಲಿಬ್ಬರೊಳಗೊಬ್ಬ ಬೆಂದರಿ ।
ನ್ನೊಬ್ಬಗದು ಹಬ್ಬ ಸರ್ವಜ್ಞ ॥ ೧೫೪೦ ॥

ಗಾಳಿಗ್ಗೆಮ್ಮರನುರುಳಿ । ಕೀಳು ಹುಲ್ಲುಳಿವಂತೆ ।
ಮೇಳಗಳ ಬಲದಿ ಮೆರೆಯುವ ಖಳನಳಿದು ।
ಕೀಳ ಬಾಳುವನು! ಸರ್ವಜ್ಞ ॥ ೧೫೪೧ ॥

ಗವುಡನೊಳು ಹಗೆತನವು। ಕಿವುಡನೊಳು ಏಕಾಂತ।
ಪ್ರವುಡನೊಳು ಮೂರ್ಖನುಪದೇಶ ಹಸಿದೆದ್ದು।
ತವುಡು ತಿಂದಂತೆ ಸರ್ವಜ್ಞ ॥ ೧೫೪೨ ॥

ಎಲ್ಲವನು ಅರಿಯುವದು। ಬಲ್ಲವನು ಎನಿಸುವದು।
ನಲ್ಲಳನು ಅರಿತು ಕೂಡುವದು, ಜಗದೊಳಗೆ।
ಎಲ್ಲವರಿಗಿಹುದು। ಸರ್ವಜ್ಞ ॥ ೧೫೪೩ ॥

ಮುದ್ದುಮನುಜನ ಕೆಡಿಸ। ಲೆದ್ದ ದುರ್ಬುದ್ಧಿಯಲಿ।
ಯುದ್ಧವನು ಹೂಡಿ ಆಡಿದರೆ ಓಡಿಂಗೆ।
ಗೆದ್ದಲಿಡಿದಂತೆ ಸರ್ವಜ್ಞ ॥ ೧೫೪೪ ॥

ಬೇಗೆಯೊಳು ಹೋಗದಿರು। ಮೂಗರೊಳು ನುಡಿಯದಿರು।
ಆಗದರ ನಂಬಿ ಕೆಡದಿರು, ನಡುವಿರುಳು।
ಹೋಗದಿರು ವಯಣ। ಸರ್ವಜ್ಞ ॥ ೧೫೪೫ ॥

ಮೆಚ್ಚದಿರು ಪರಸತಿಯು। ರಚ್ಚೆಯೊಳು ಬೆರೆಯದಿರು।
ನಿಚ್ಚ ನೆರೆಯೊಳಗೆ ಕಾದದಿರು, ಒಬ್ಬರ।
ಇಚ್ಛೆಯಲಿರದಿರು। ಸರ್ವಜ್ಞ ॥ ೧೫೪೬ ॥

ಬದ್ಧರಲಿ ಋಣದಲ್ಲಿ। ಉದ್ಯೋಗವಳಿದಲ್ಲಿ।
ನಿರ್ದೇಶವಾದ ಪಥದಲ್ಲಿ ಹೊದ್ದಿದರೆ।
ಬುದ್ಧಿ ತಪ್ಪುವದು ಸರ್ವಜ್ಞ ॥ ೧೫೪೭ ॥

ಮಾನಾಪಮಾನವನು। ಜ್ಞಾನ ತನಗಾದುದನು।
ಮಾನಿನಿಯು ಒಲಿದ ರತಿಸುಖವ ಪರರಲ್ಲಿ।
ಮಾನಿಸುವನೆಸ್ಗ ಸರ್ವಜ್ಞ ॥ ೧೫೪೮ ॥

ಆನೆ ಬೀದಿಲಿ ಬರಲು। ಶ್ವಾನ ತಾ ಬೊಗಳುವದು।
ಶ್ವಾನನಂತಾನೆ ಬೊಗಳಿದರೆ ಆನೆಯು।
ಮಾನವೇ ಹಾನಿ ಸರ್ವಜ್ಞ ॥ ೧೫೪೯ ॥

ಮನಭಂಗವಾದಂದು । ಘನ ನಿಪ್ರೆ ಹೋದಂದು ।
ವನಿತೆಯರು ಸುತರು ಜರಿದಂದು, ಮರಣವದು ।
ತನಗೆ ಬಂತೆಂದ ಸರ್ವಜ್ಞ ॥ ೧೫೫೦ ॥

ಕೆಟ್ಟ ವ್ಯೆ ಹೆಂಗಸನು । ಬಟ್ಟೆಯಲಿ ತುರುಚಿಯನು ।
ಅಟ್ಟಟ್ಟ ಕಡಿವ ಕಡಜನ ಹುಟ್ಟನ್ನು ।
ಮುಟ್ಟಬೇಡೆಂದ ಸರ್ವಜ್ಞ ॥ ೧೫೫೧ ॥

ತಾಗುವ ಮುನ್ನವೆ । ಬಾಗುವ ತಲೆ ಲೇಸು ।
ತಾಗಿ ತಲೆಯೊಡೆದು ಕೆಲನಾದ ಬಳಿಕದರ ।
ಭೋಗವೇನೆಂದ ಸರ್ವಜ್ಞ ॥ ೧೫೫೨ ॥

ತಾಗಿ ಬಾಗುವರಿಂದ । ತಾಗದಿರುವದು ಲೇಸು ।
ತಾಗಿ ಮೂಗೊಡೆದು ಬುಗುಟಿದ್ದು ಬಾಗುವದು ।
ಹೇಗದ ಗುಣವು ಸರ್ವಜ್ಞ ॥ ೧೫೫೩ ॥

ಸಾವ ಸಂಕಟ ಹೊಲ್ಲ । ಹಾವಿನ ವಿಷ ಹೊಲ್ಲ ।
ನಾವಿಗನ ಕೂಡ ಹಗೆ ಹೊಲ್ಲ, ಚಿಕ್ಕವರ ।
ಕಾವುದೇ ಹೊಲ್ಲ ಸರ್ವಜ್ಞ ॥ ೧೫೫೪ ॥

ಬರೆವ ಕರಣಿಕನೊಡನೆ । ಹಿರಿದು ಹೋರಲು ಬೇಡ ।
ಗರಗಸದೊಡನೆ ಮರಹೋರಿ ತನ್ನ ತಾ ।
ನಿರಿದುಕೊಂಡಂತೆ ಸರ್ವಜ್ಞ ॥ ೧೫೫೫ ॥

ಇತ್ತುದನು ಈಯುದನ । ವ್ಯತ್ಯ್ಯ ಒಯ್ಯದೆ ಬಿಡಳು ।
ಹತ್ತಿರ್ದ ಲಕ್ಷ್ಮಿ ತೊಲಗಲ್ಕೆ ಮುಂದವನ ।
ತೊತ್ತಾಗಿ ಬರುವ ಸರ್ವಜ್ಞ ॥ ೧೫೫೬ ॥

ಸಿರಿಯು ಸಂಸಾರವನು । ಸ್ಥಿರವೆಂದು ನಂಬದಿರು ।
ಹಿರಿದೊಂದು ಸಂತೆ ನೆರೆದೊಂದು ಜಾವಕ್ಕೆ ।
ಹರಿದು ಹೋದಂತೆ ಸರ್ವಜ್ಞ ॥ ೧೫೫೭ ॥

ನೀರ ಬೊಬ್ಬುಳಿ ನೆಚ್ಚಿ। ಸಾರಿ ಕೆಡದಿರು ಮರುಳೆ।
ಸಾರಗುಣಿಯಾಗು, ನಿಜವ ತಿಳಿ, ಸರುವರೊಳು।
ಕಾರಣಿಕನಾಗು ಸರ್ವಜ್ಞ ॥ ೧೫೫೮ ॥

ಗಂಧವನು ಇಟ್ಟ ಮೇ। ಲಂದದಲಿ ಇರಬೇಕು।
ನಿಂದೆ ಕುಂದುಗಳ ತಾಳಿದನು ಧರಣಿಯಲಿ।
ಇಂದುಧರನೆಂದ! ಸರ್ವಜ್ಞ ॥ ೧೫೫೯ ॥

ಮಾನೀಶನಲ್ಲದಲೆ। ನೀನೀಶನೆಂತಾದೆ?।
ನೀನೀಶನೀಶನೆನಬೇಡ ಲೋಕಕ್ಕೆ।
ಮಾನೀಶನೀಶ! ಸರ್ವಜ್ಞ ॥ ೧೫೬೦ ॥

ಅಟ್ಟಿಕ್ಕುವಾಕೆಯೊಳು। ಬೆಟ್ಟಿತ್ತು ಹಗೆ ಬೇಡ।
ಸಟ್ಟುಗದಿ ಗೋಣ ಮುರಿಯುವಳು, ಅಲಗಿಲ್ಲ।
ದಿಟ್ಟೆಯಾಳವಳು ಸರ್ವಜ್ಞ ॥ ೧೫೬೧ ॥

ಉಂಡುಂಡು ಕೆಡೆಕೆಡೆದು। ಖಂಡೆಯನು ಮಸೆಮಸೆದು।
ಕಂಡವರ ಕಾಲ ಕೆದರುವ ದುರುಳರನು।
ಗುಂಡಿಗಿಕ್ಕೆಂದ ಸರ್ವಜ್ಞ ॥ ೧೫೬೨ ॥

ಓಲಯ್ಸುತಿರುವವನು। ಮೇಲೆನಿಸುತಿದ್ದರೂ।
ನೋಲದ ಬುದ್ಧಿ ಇರುವನಲಿ ಭಾಗ್ಯದ।
ಕೀಲು ಕಾಣಯ್ಯ ಸರ್ವಜ್ಞ ॥ ೧೫೬೩ ॥

ಕರುವ ಕಾವಾ ಬುದ್ಧಿ। ಗುರುಗಳಿಗೆ ಇರದಿರಲು।
ಧರಣಿಯ ಜನರು ಉಳಿವರೆ? ಇವರೂರ।
ನರಿಗಳೆಂದರಿಗು! ಸರ್ವಜ್ಞ ॥ ೧೫೬೪ ॥

ಊರೆಲ್ಲ ನೆಂಟರು। ಕೇರಿಯೆಲ್ಲವು ಬಳಗ।
ಧಾರುಣಿಯು ಎಲ್ಲ ಕುಲದೈವವಾಗಿನ್ನು।
ಯಾರನ್ನು ಬಿಡಲೊ! ಸರ್ವಜ್ಞ ॥ ೧೫೬೫ ॥

# ೨೨ ಜ್ಯೋತಿಷ ಪದ್ಧತಿ

## ಗಣಿತ ಜ್ಯೋತಿಷ್ಯ

ರಂಧ್ರಗತಿಯಾದಿತ್ಯ । ರೊಂದಾಗಿ ಅರ್ಧಿಸುತ ।
ಅಂದಿನ ತಿಥಿಯನೊಡಗೂಡೆ ನಕ್ಷತ್ರ ।
ಮುಂದೆ ಬಂದಕ್ಕು ಸರ್ವಜ್ಞ ॥ ೧೫೬೬ ॥

ಗತವಾದ ಮಾಸವನು । ಗತಿಯಿಂದ ದ್ವಿಗುಣಿಸಲು ।
ಪ್ರತಿಪದವು ತಿಥಿಯನೊಡಗೂಡೆ ಕರಣ ತಾ ।
ನತಿಶಯದಿ ಬಕ್ಕು ಸರ್ವಜ್ಞ ॥ ೧೫೬೭ ॥

ಆದಿಯ ಮಾಸವನು । ವೇದದಿಂ ದ್ವಿಗುಣಿಸಿ ।
ಆ ದಿನದ ತಿಥಿಯನೊಡಗೂಡೆ ಯೋಗ ತಾ ।
ನಾದಿಯಲಿ ಬಕ್ಕು ಸರ್ವಜ್ಞ ॥ ೧೫೬೮ ॥

ಸಂದಿರ್ದ ಮಾಸವ್ವನು । ಕುಂದದಿವ್ಮ್ಮಡಿ ಮಾಡಿ ।
ಅಂದಿನ ತಿಥಿಯನೊಡಗೂಡಲಾತಾರೆ ।
ಮುಂದೆ ಬಂದಿಹುದು ಸರ್ವಜ್ಞ ॥ ೧೫೬೯ ॥

ನಂದೆಯನು ಭದ್ರೆಯನು । ಒಂದಾಗಿ ಅರ್ಧಿಸಲು ।
ಅಂದಿನ ತಿಥಿಗೆ ಸವನಾಗೆ ಗ್ರಹಣ ತಾ ।
ಮುಂದೆ ಬಂದಕ್ಕು ಸರ್ವಜ್ಞ ॥ ೧೫೭೦ ॥

ಆಡಿಯನಿಮ್ಮಡಿ ಮಾಡಿ । ಒಡಗೂಡಿ ಹನ್ನೊಂದ ।
ತಡೆಯದಿನ್ನೂರಹತ್ತಕ್ಕೆ ಭಾಗಿಸಲು ।
ನಡೆವ ಘಳಿಗಕ್ಕು ಸರ್ವಜ್ಞ ॥ ೧೫೭೧ ॥

## ಮಳೆಯ ಲಕ್ಷಣ

ಮೃಗಶಿರಾದಿಯು ಮೂರು । ಭಗಣದಲಿ ರವಿಯಿರಲು ।
ಮಘಯರಿಕ್ಷವನು ಶಶಿ ತೊಲಗೆ ಮಳೆಗಾಲ ।
ಜಗದಣಿಯಲಕ್ಕು ಸರ್ವಜ್ಞ ॥ ೧೫೭೨ ॥

ಆಗಿಯ ಹುಣ್ಣಿಮೆ ಹೋದ । ಮಿಗೆ ಮೂರು ದಿವಸಕ್ಕೆ ।
ಮೃಗಧರನ ಕೂಡೆ ಮೃಗವಿರಲು ಮಳೆಗಾಲ ।
ಜಗದಣಿಯಲಕ್ಕು ಸರ್ವಜ್ಞ ॥ ೧೫೭೩ ॥

ಚಂದ್ರ ಮಾರ್ತಂಡರನು । ಸಂದಿಸಿಯೆ ಪರಿವೇಷ ।
ಕುಂದದೆ ನಿಚ್ಚ ಬರುತಿರಲು ಜಗವೆಲ್ಲ ।
ಕುಂದಣಿಗೆಯಕ್ಕು ಸರ್ವಜ್ಞ ॥ ೧೫೭೪ ॥

ಹೊತ್ತಾರೆ ನೆರೆಯುವದು । ಹೊತ್ತೇರೆ ಹರಿಯುವದು ।
ಕತ್ತೆಯ ಬಣ್ಣ ಮುಗಿಲಾಗೆ ಮಳೆಯು ತಾ ।
ನೆತ್ತಣದಿ ಒಕ್ಕು? ಸರ್ವಜ್ಞ ॥ ೧೫೭೫ ॥

ವಾಯು ವಾಯುವ ಕೂಡೆ । ವಹಿಲದಿಂ ಮಳೆಯಕ್ಕು ।
ವಾಯು ನೈರುತಿಯನೊಡಗೂಡೆ ಮಳೆಯು ತಾ ।
ವಾಯುವೇ ಆಕ್ಕು ಸರ್ವಜ್ಞ ॥ ೧೫೭೬ ॥

ಅಳಿವಣ್ಣದಾಕಾಶ । ಗಿಳಿವಣ್ಣದ ಮುಗಿಲು ।
ಅಳಿದಳಿದುಮರ್ಕನುದಯಿಸಲು ಮಳೆಯು ತಾ ।
ತಳುವದೇ ಬಕ್ಕು ಸರ್ವಜ್ಞ ॥ ೧೫೭೭ ॥

ಅಡರಿ ಮೂಡಲು ಮಿಂಚೆ । ಪಡುವಲಕೆ ಧನುವೇಳೆ ।
ಬಡಗಣದ ಗಾಳಿ ಕಡು ಬೀಸೆ ಮಳೆಯು ತಾ ।
ತಡೆಯದೆ ಬಕ್ಕು ಸರ್ವಜ್ಞ ॥ ೧೫೭೮ ॥

ತೆಂಕಲಿಗೆ ಮುಗಿಲಡರೆ । ಶಂಕರನ ದೆಸೆ ಮಿಂಚೆ ।
ಪಂಕಜಾರಾತಿ ಗುಡಿಗಟ್ಟೆ ಮಳೆಯು ತಾ ।
ಭೋಂಕನೆ ಬಕ್ಕು ಸರ್ವಜ್ಞ ॥ ೧೫೭೯ ॥

ಗ್ರಹಚಾರ ಫಲ ( ಗುರು )

ಕುರಿಯನೇರಲು ಗುರುವು । ಧರೆಗೆ ಹೆಮ್ಮಳೆಯಕ್ಕು ।
ಪರಿಪರಿಯ ಧಾನ್ಯ ಹುಲುಸಕ್ಕು, ಪ್ರಜೆಗಳಿಗೆ ।
ನೆರೆ ಹರುಷವಕ್ಕು ಸರ್ವಜ್ಞ ॥ ೧೫೮೦ ॥

ವೃಷಭನೇರಲು ಗುರುವು । ವಸುಧೆಯೊಳು ಮಳೆಯಕ್ಕು ।
ಶಿಶು, ಪಶು, ಸ್ತ್ರೀಗೆ ಜಯವಕ್ಕು, ಜನವೆಲ್ಲ ।
ವಿಸುನಿಯಂತಕ್ಕು ಸರ್ವಜ್ಞ ॥ ೧೫೮೧ ॥

ಮಿಥುನಕ್ಕೆ ಗುರು ಬರಲು । ಮಧನಗಳು ಪಿರಿದಕ್ಕು ।
ಪೃಥುವಿಯೊಳಗೆಲ್ಲ ಬರನಕ್ಕು, ನರ, ಪಶುವು ।
ಹತವಾಗಲಕ್ಕು ಸರ್ವಜ್ಞ ॥ ೧೫೮೨ ॥

ಏಡಿ ಏರಲು ಗುರುವು । ನೋಡೆ ಕಡೆ ಮಳೆಯಕ್ಕು ।
ನಾಡೊಳಗೆಲ್ಲ ಬೆಳಸಕ್ಕು ಪ್ರಜಗಳು ।
ಈಡೇರಲಕ್ಕು ಸರ್ವಜ್ಞ ॥ ೧೫೮೩ ॥

ಸಿಂಗಕ್ಕೆ ಗುರು ಬರಲು । ಸಂಗರವು ಘನವಕ್ಕು ।
ಅಂಗನೆಗೆ ಬಾಧೆ ಪಿರಿದಕ್ಕು, ಕಡೆಯ ಮಳೆ ।
ಹಿಂಗಾರಿಯಕ್ಕು ಸರ್ವಜ್ಞ ॥ ೧೫೮೪ ॥

ಕನ್ಯಕ್ಕೆ ಗುರು ಬರಲು । ಚಿನ್ನದ ಮಳೆಯಕ್ಕು ।
ಚೆನ್ನಾಗಿ ಪಶುವು ಕರೆಯಕ್ಕು, ಮಂಡನದ ।
ಕನ್ಯೆಯರು ಅಕ್ಕು ಸರ್ವಜ್ಞ ॥ ೧೫೮೫ ॥

ತುಲವನೇರಲು ಗುರುವು । ನೆಲೆಯಾಗಿ ಮಳೆಯಕ್ಕು ।
ಫಲ, ಧಾನ್ಯ, ಬೆಳಸು ಪ್ರಜೆಗಳಿಗೆ ಇಳೆಯಲ್ಲಿ ।
ನಿಲಕಾಲಮಕ್ಕು ಸರ್ವಜ್ಞ ॥ ೧೫೮೬ ॥

ಚೇಳನೇರಲು ಗುರುವು । ಕಾಳಗವು ಪಿರಿದಕ್ಕು ।
ಗಾಳಿಯಿಂ ಮಳೆಯು ಕಿರಿದಾಗಿ ಬೆಳೆಯೆಲ್ಲ ।
ಹಾಳಾಗಲಕ್ಕು ಸರ್ವಜ್ಞ ॥ ೧೫೮೭ ॥

ಬಿಲ್ಲನೇರಲು ಗುರುವು । ತಲ್ಲಣವು ಪಿರಿದಕ್ಕು ।
ಕಲ್ಲ ಮೇಲೆಲ್ಲ ಬೆಳಸಕ್ಕು, ಅಳ್ಕರಿಗೆ ।
ತಲ್ಲಣವಕ್ಕು ಸರ್ವಜ್ಞ ॥ ೧೫೮೮ ॥

ಮಕರಕ್ಕೆ ಗುರು ಬರಲು । ಮಕರ ತೋರಣವಕ್ಕು ।
ಸಕಲ ಧಾನ್ಯಗಳು ಬೆಳೆಯಕ್ಕು, ಪ್ರಜೆಗಳಿಗೆ ।
ಸುಖವಾಗಲಕ್ಕು ಸರ್ವಜ್ಞ ॥ ೧೫೮೯ ॥

ಕುಂಭಕ್ಕೆ ಗುರು ಬರಲು। ತುಂಬುವವು ಕೆರೆ ಬಾವಿ ।
ಅಂಬರದ ವರೆಗೆ ಬೆಳೆಯೆದ್ದು ಜಗದೊಳಗೆ ।
ಸಂಭ್ರಮವಹುದು ಸರ್ವಜ್ಞ ॥ ೧೫೯೦ ॥

ಮೀನಕ್ಕೆ ಗುರು ಬರಲು । ಮಾನ ಖಂಡುಗವಕ್ಕು ।
ಕಾನನವೆಲ್ಲ ಬೆಳೆಯಕ್ಕು, ಪ್ರಜೆಗಳಿಗೆ ।
ಆನಂದವಕ್ಕು ಸರ್ವಜ್ಞ ॥ ೧೫೯೧ ॥

ಮೀನಕ್ಕೆ ಶನಿ ಬರಲು । ಶಾನೆ ಕಾಳಗವಕ್ಕು ।
ಬೇನೆ, ಬರಗಳು ಪಿರಿದಾಗಿ, ಜಗಕ್ಕೆಲ್ಲ ।
ಹಾನಿ ತಾನಕ್ಕು ಸರ್ವಜ್ಞ ॥ ೧೫೯೨ ॥

ತಾರೆಗಳು ಅಯ್ದಕ್ಕೆ । ತಾರೇಶ ಬಂದಿರಲು ।
ಧಾರಿಣಿಯು ಹೊತ್ತಿ ಹೊಗೆಯುವದು ಜಗದಿ ಹೆ ।
ಮ್ಮಾರಿ ಕಾಣಯ್ಯ ಸರ್ವಜ್ಞ ॥ ೧೫೯೩ ॥

ಪಂಚತಾರೆಯು ಮೃಗದ । ಲಾಂಛನವು ಸಹ ತಾರೆ ।
ಕಂಚಿಯಿಂದತ್ತ ಮಳೆಯಿಲ್ಲ, ಭತ್ತವನು ।
ಸಂಚಯಿಪುದೊಳಿತು ಸರ್ವಜ್ಞ ॥ ೧೫೯೪ ॥

ತಾರೆ ಸಪ್ತಮಿ ದಿನದಿ । ತಾರೇಶ ಮಹಜಂಗೆ ।
ಹೋರದಲೆ ಹೋದಡವನಿರ್ದ ಜಗಕೆ ಹೆ ।
ಮ್ಮಾರಿ ಕಾಣಯ್ಯ ಸರ್ವಜ್ಞ ॥ ೧೫೯೫ ॥

ಸೀನಿನ ಶಕುನ

ಕಟ್ಟೆದಿರ ಸೀತಿಹರೆ । ನೆಟ್ಟನೆಯೆ ನಿಲಬೇಕು ।
ಒಟ್ಟಯಿಸಿ ಮೀರಿ ನಡೆದಿಹರೆ ಗುರಿನೋಡಿ ।
ತೊಟ್ಟನೆಚ್ಚನ್ತೆ ಸರ್ವಜ್ಞ ॥ ೧೫೯೬ ॥

ಎಡಬಲವು ಎನಬೇಡ । ಒಡನೆ ಬಹನೆನಬೇಡ !
ಕಡುದೂರ ಸಾರ್ದನೆನಬೇಡ ಸೀತರೊಂ ।
ದಡಿಯನಿಡಬೇಡ ಸರ್ವಜ್ಞ ॥ ೧೫೭ ॥

ಇರದೊಮ್ಮೆ ನಡೆಯುತ್ತ । ಸರಕನೇ ಸೀತಿಹರೆ ।
ಅರಿದರಡಿಯಿಡದೆ ನಿಲ್ಲುವದು, ಮರೆದಿಹರೆ ।
ಇರಿದುಕೊಂಡಂತೆ ಸರ್ವಜ್ಞ ॥ ೧೫೮ ॥

ತಾನಕ್ಕು ಪರನಕ್ಕು । ಶ್ವಾನ, ಗರ್ದಭನಕ್ಕು ।
ವಾನರನು ಅಕ್ಕು, ಪಶುವಕ್ಕು, ಪಯಣದಲಿ ।
ಸೀನೆ, ಭೆಯವಕ್ಕು ಸರ್ವಜ್ಞ ॥ ೧೫೯ ॥

ಒಮ್ಮೆ ಸೀತರೆ ಹೊಲ್ಲ । ಇಮ್ಮೆ ಸೀತರೆ ಲೇಸು ।
ಕೆಮ್ಮಿ ಕೇಕರಿಸಿ ಉಗುಳುವ ಆ ಲೇಸು ।
ಬೊಮ್ಮಗೂ ಇಲ್ಲ ಸರ್ವಜ್ಞ ॥ ೧೬೦೦ ॥

ಏನು ಮನ್ನಿಸದಿರಲು । ಸೀನು ಮನ್ನಿಸಬೇಕು ।
ಸೀನು ಮನ್ನಿಸದೆ ಹೋಗಿಹರೆ, ಹೋದಲ್ಲಿ ।
ಹಾನಿಯೇ ಬಕ್ಕು ಸರ್ವಜ್ಞ ॥ ೧೬೦೧ ॥

ಒಕ್ಕಾಗೆ ಬಲನಾದ । ಡೊಕ್ಕದುವೆ ಕಡು ಲೇಸು ।
ಒಕ್ಕಿನ ಮೇಲೆ ಒಕ್ಕಾಗೆ, ನಾಯ್ನೂರ ।
ನೆಕ್ಕಿದಂತಕ್ಕು ಸರ್ವಜ್ಞ ॥ ೧೬೦೨ ॥

ಮಳೆಗೆ ಜೋಯಿಸರಿಲ್ಲ

ತಳಿಗೆಗಂ ತಲೆಯಿಲ್ಲ । ಮಳೆಗೆ ಜೋಯಿಸರಿಲ್ಲ ।
ಬೆಳಗಾಗಿ ಕನ್ನಗಳವಿಲ್ಲ ಲೋಕದೊಳ ।
ಗುಳಿವವರೆ ಇಲ್ಲ ಸರ್ವಜ್ಞ ॥ ೧೬೦೩ ॥

ಮಗ್ಗಿಯನು ಗುಣಿಸುವ । ಮೊಗ್ಗರದ ಜೋಯಿಸರು ।
ಅಗ್ಗವನು ಮಳೆಯನರಿಯರು ಅವರಿರವ ।
ಹೆಗ್ಗಡೆಯೆ ಬಲ್ಲ ಸರ್ವಜ್ಞ ॥ ೧೬೦೪ ॥

### ಜೋಯಿಸರನ್ನು ನಂಬಬೇಡ

ತಂತ್ರ ತಾಂಬೂಲದಲಿ । ಮಂತ್ರ ಗಾರುಡಿಯಲ್ಲಿ ।
ಯಂತ್ರ ಜೋಯಿಸನ ಗ್ರಹಣದಲಿ ಇವು ಮೂರು ।
ಎಂತು ಹುಸಿಯೆಂದ ಸರ್ವಜ್ಞ ॥ ೧೬೦೫ ॥

ಹಸಿದಿಹರೆ ಉಣಲಿಲ್ಲ । ಒಸೆದೇಳೆ ಹೊತ್ತಿಲ್ಲ ।
ಬೆಸಗೊಂಬುವುದಕೆ ಗಡಿಯಿಲ್ಲ, ಜೋಯಿಸರ ।
ಘಸಣೆಯೇ ಸಲ್ಲ ಸರ್ವಜ್ಞ ॥ ೧೬೦೬ ॥

ಹಿಡಿಯುವದು ಹೆಬ್ಬಾವು । ಪಡೆಯುವದು ಪಡಿ ಭತ್ತ ।
ತುಡುಕಿ ನೋಡುವದು ಪರಬೊಮ್ಮ, ಜೋಯಿಸಗೆ ।
ಕೊಡುವದೊಂದಡಿಕೆ ಸರ್ವಜ್ಞ ॥ ೧೬೦೭ ॥

## ೨೩. ದೇಶ ಪದ್ಧತಿ

### ಕನ್ನಡ ದೇಶ

#### ಮೂಡಲು

ಬಟ್ಟೆಬಟ್ಟೆಯೊಳಿಲ್ಲ । ಹೊಟ್ಟೆ ಜಾಲಿಯ ಮುಳ್ಳು ।
ಹುಟ್ಟಿದವರೆಲ್ಲ ಗಿಜವಾಯಿ, ಮೂಡಲ ।
ಬಟ್ಟೆ ಬೇಡೆಂದ ಸರ್ವಜ್ಞ ॥ ೧೬೦೮ ॥

ಅಗ್ಗ ಸುಗ್ಗಿಗಳುಂಟು । ಡೊಗ್ಗೆ ಮಜ್ಜಿಗೆಯುಂಟು ।
ಹೆಗ್ಗುಳದ ಕಾಯಿ ಮೆಲಲುಂಟು, ಮೂಡನಾ ।
ಡೆಗ್ಗಿನ್ನಬಹುದೆ ಸರ್ವಜ್ಞ ॥ ೧೬೦೯ ॥

#### ಬಡಗಲು

ಎಲ್ಲಿ ನೋಡಿದಡಲ್ಲಿ । ಟೊಳ್ಳು ಜಾಲಿಯ ಮುಳ್ಳು ।
ಉಳ್ಳವರು ಎಲ್ಲ ಕಿಸವಾಯಿ, ಬಡಗಲ ।
ತಳ್ಳಿ ಬೇಡೆಂದ ಸರ್ವಜ್ಞ ॥ ೧೬೧೦ ॥

ಊರು ಸನಿಹದಲಿಲ್ಲ । ನೀರೊಂದು ಗಾವುದವು ।
ಸೇರಿ ನಿಲ್ಲುವರೆ ನೆಳಲಿಲ್ಲ, ಬಡಗಲ ।
ದಾರಿ ಬೇಡೆಂದ ಸರ್ವಜ್ಞ ॥ ೧೬೧೧ ॥

ತೆಂಕಲು

ಶಂಖ ಹುಟ್ಟಿದ ನಾಡ । ಬಿಂಕವನು ಏನೆಂಬೆ ? ।
ಶಂಕರನ ಪೂಜೆ ಮನೆಮನೆಗೆ, ಮಿಗಿಲಾಗಿ ।
ತೆಂಕಲುಂಟೆಂದ ಸರ್ವಜ್ಞ ॥ ೧೬೧೨ ॥

ರಾಗವೇ ಮೂಡಲು । ಯೋಗವೇ ಬಡಗಲು ।
ರೋಗವದು ಶುದ್ಧ ಪಡುವಲು, ತೆಂಕಲು ।
ಭೋಗದ ಬೀಡು ಸರ್ವಜ್ಞ ॥ ೧೬೧೩ ॥

ಅಟ್ಟೆಂಬುದು ಮೂಡಲು । ಸುಟ್ಟೆಂಬುದು ಬಡಗಲು ।
ತಟ್ಟಿಲುಂಬುದು ಪಡುವಲು, ತೆಂಕಲದು ।
ಮುಷ್ಟಿಲುಂಬುವದು ಸರ್ವಜ್ಞ ॥ ೧೬೧೪ ॥

ಉಡುಹೀನ ಮೂಡಲು । ನುಡಿಹೀನ ಬಡಗಲು ।
ಕಡುಕೋಪದವರು ಪಡುವಲೊಳು, ತೆಂಕಲಲಿ ।
ಸಡಗರದಲಿಹರು ಸರ್ವಜ್ಞ ॥ ೧೬೧೫ ॥

ಅರದಲೆಯು ಮೂಡಲೊಳು । ಹೊರೆದಲೆಯು ಬಡಗಲೊಳು ।
ಸರಿದಲೆಯುದ್ದ ಪಡುವಲೊಳು, ತೆಂಕಲಲಿ ।
ಬರಿದಲೆಯಲಿಹರು ಸರ್ವಜ್ಞ ॥ ೧೬೧೬ ॥

ಬೆಳವಲು

ಜೋಳದ ಬೋನಕ್ಕೆ । ಬೇಳೆಯ ತೊಗೆಯಾಗಿ ।
ಕಾಳೆಮ್ಮೆ ಕರೆದ ಹಯನಾಗಿ ಬೆಳವಲ ।
ಮೇಳ ನೋಡೆಂದ ಸರ್ವಜ್ಞ ॥ ೧೬೧೭ ॥

ನವಣೆಯ ಬೋನಕ್ಕೆ । ಹವಣಾದ ತೊಗೆಯಾಗಿ ।
ಕವಣೆಗಲ್ಲಷ್ಟು ಬೆಣ್ಣೆಯಿಡಲೂಟದ ।
ಹವಣ ನೋಡೆಂದ ಸರ್ವಜ್ಞ ॥ ೧೬೧೮ ॥

ಕಣಕದ ಕಡುಬಾಗಿ । ಮಣಕೆಮ್ಮೆ ಹಯನಾಗಿ ।
ಕುಣಿಕುಣಿದು ಕಡೆವ ಸತಿಯಾಗಿ, ಬೆಳವಲದ ।
ಅಣಕ ನೋಡೆಂದ ಸರ್ವಜ್ಞ ॥ ೧೬೧೯ ॥

ಕಡಲೆಯನು ಗೋದಿಯನು । ಮಡಿಕುದ್ದು ಬೆಳೆದರೂ ।
ಸುಡಬೇಕು ನಾಡನೆಂದವನ ಬಾಯೊಳಗೆ ।
ಪುಡಿಗಡಬು ಬೀಳ್ಗ ಸರ್ವಜ್ಞ ॥ ೧೬೨೦ ॥

ಮಲೆನಾಡು

ಕಾಡೆಲ್ಲ ಕಸುಗಾಯಿ । ನಾಡೆಲ್ಲ ಹೆಗ್ಗಿಡವು ।
ಆಡಿದ ಮಾತು ನಿಜವಿಲ್ಲ, ಮಲೆನಾಡೆ ।
ಕಾಡು ಸಾಕೆಂದ ಸರ್ವಜ್ಞ ॥ ೧೬೨೧ ॥

ಸೀತ ಧಾತುಗಳುಂಟು । ಬಾತಿಹವು ಕುಕ್ಷಿಗಳು ।
ಪಾತಕರು ಮರದಿ ತಿರಿದುಂಬ ನಾಡಿಗೆ ।
ಏತಕ್ಕೆ ಬಹರು ಸರ್ವಜ್ಞ ॥ ೧೬೨೨ ॥

ಅಲ್ಲವರಿಷಿಣವುಂಟು । ಬೆಲ್ಲ ಬಿಳಿಎಲೆಯುಂಟು ।
ಒಳ್ಳೆ ಹಲಸುಂಟು ಮೆಲ್ಲಲ್ಕೆ ಮಲೆನಾಡ ।
ನಲ್ಲೆನ್ನಬಹುದೆ ಸರ್ವಜ್ಞ ॥ ೧೬೨೩ ॥

ಕಿಚ್ಚುಂಟು ಕೆಸರುಂಟು । ಬೆಚ್ಚನ ಮನೆಯುಂಟು ।
ಇಚ್ಛೆಗೆ ಬರುವ ಸತಿಯುಂಟು, ಮಲೆನಾಡ ।
ಮೆಚ್ಚು ನೋಡೆಂದ ಸರ್ವಜ್ಞ ॥ ೧೬೨೪ ॥

ಬೆಲ್ಲ ಗೆಣಸುಗಳುಂಟು । ಅಲ್ಲಲ್ಲಿ ನೀರುಂಟು ।
ನೆಲ್ಲೋಗರುಂಟು, ನೆಳಲುಂಟು, ಕೆರೆಕುಂಟೆ ।
ಎಲ್ಲೆಲ್ಲೂ ಉಂಟು ಸರ್ವಜ್ಞ ॥ ೧೬೨೫ ॥

## ಕನ್ನಡ ಭಾಷೆ

### ಕನ್ನಡದ ಒಳಗು

ಅಳಿಯು ಹಾರುವನಹುದು । ಬಳಿಯು ನೋಡುವನಹುದು ।
ಒಳಗು ಹೊರಗಿರುವ ಸಖನಹುದು ಕನ್ನಡದ ।
ಒಳಗ ನಾರ್ಬಲ್ಲ ? ಸರ್ವಜ್ಞ || ೧೬೨೬ ||

### ಕನ್ನಡದ ಸೊಲ್ಲು

ಮಲ್ಲಿಗೆಗೆ ಹುಳಿಯಕ್ಕು । ಕಲ್ಲಿಗೆ ಗಂಟಕ್ಕು ।
ಹಲ್ಲಿಗೆ ನೊಣನು ಸವಿಯಕ್ಕು ಕನ್ನಡದ ।
ಸೊಲ್ಲುಗಳ ನೋಡಿ ಸರ್ವಜ್ಞ || ೧೬೨೭ ||

### ಕನ್ನಡ ಸಂಸ್ಕೃತ

ತನ್ನ ಸಿರಿಯನು ತಾನು । ಕನ್ನಡಿಯು ಕಾಬುದೇ ? ।
ತನ್ನ ಸಿರಿಯರಿವು ಸಕ್ಕದಕೆ, ಕನ್ನಡವು ।
ಕನ್ನಡಿಯು ತೆರನು ಸರ್ವಜ್ಞ || ೧೬೨೮ ||

### ಕನ್ನಡಿಗ

ಕನ್ನಡಿಗನ ಕೆಳೆಯು । ಮನ್ನೆಯನ ವಿಶ್ವಾಸ ।
ತನ್ನ ಕೈಯಲಗ ಪರರಿಂಗೆ ಕೊಟ್ಟೆಹರೆ ।
ಬೆನ್ನು ಕೊಟ್ಟಂತೆ ಸರ್ವಜ್ಞ || ೧೬೨೯ ||

## ೨೪. ಸ್ತ್ರೀವರ್ಗ ಪದ್ಧತಿ

### ಮದನ ಮದನನ್ನೆಯರ ಲಕ್ಷಣ

ಮೂಡಲದು ಹಸ್ತಿನಿಗೆ । ಬಡಗಲದು ಚಿತ್ತಿನಿಗೆ ।
ಪಡುವಲದು ಶುದ್ಧ ಶಂಖಿನಿಗೆ, ತೆಂಕಲಿನ ।
ಬೀಡು ಪದ್ಮಿನಿಗೆ ಸರ್ವಜ್ಞ || ೧೬೩೦ ||

ಮೂಡಲದು ವಿಟನಿಂಗೆ । ಬಡಗಲದು ವಿದುಷಕಗೆ ।
ಪಡುವಲದು ನಾಗರಿಕಗಂ ತೆಂಕಲದು ।
ಪೀಠಮರ್ದನಗೆ ಸರ್ವಜ್ಞ || ೧೬೩೧ ||

### ಪುರುಷಲಕ್ಷಣ ಭೇದ

ಕಿರಿನೋಟ ವಿಟನಿಂಗೆ । ಅರೆನೋಟ ವಿದೂಷಕಗೆ ।
ನೆರೆನೋಟ ನಾಗರಿಕಗೆ ಪೀಠಮರ್ದನಗೆ ।
ಬಿರಿನೋಟವೆಂದ ಸರ್ವಜ್ಞ ॥ ೧೬೩೨ ॥

### ಸ್ತ್ರೀ ಲಕ್ಷಣ ಭೇದ

ಹಸ್ತಿನಿಗೆ ಜಂಘೆಗಳು । ಚಿತ್ತಿನಿಗೆ ಹರಡುಗಳು ।
ಹಸ್ತಮರ್ದನವು ಶಂಖಿನಿಗೆ, ಪದ್ಮಿನಿಗೆ ।
ಮಸ್ತಕವು ನೋಡ ಸರ್ವಜ್ಞ ॥ ೧೬೩೩ ॥

ಒಲೆಯುವವಳು ಹಸ್ತಿನಿಯು । ಮಲೆಯುವವಳು ಚಿತ್ತಿನಿಯು ।
ತಲೆವಾಗಿ ನಡೆವಳು ಶಂಖಿನಿಯು, ಪದ್ಮಿನಿಯು ।
ಸುಲಭವಾಗಿಹಳು ಸರ್ವಜ್ಞ ॥ ೧೬೩೪ ॥

ನಾಲ್ವೆರಳು ಹಸ್ತಿನಿಗೆ । ಮೂವೆರಳು ಚಿತ್ತಿನಿಗೆ ।
ಇರ್ವೆರಳು ಕುಚಮಧ್ಯ ಶಂಖಿನಿಗೆ, ಪದ್ಮಿನಿಗೆ ।
ಒರ್ವೆರಳು ನೋಡ ಸರ್ವಜ್ಞ ॥ ೧೬೩೫ ॥

ವೃತ್ತದ ಪೊರವಾರು । ಮತ್ತೆ ಬೇವಿನ ಗಂಧ ।
ಹತ್ತಿದ ಕುಚವು ಮದವಾರಿ ಸಂಚಲೆಯು ।
ಚಿತ್ತಿನಿಯು ನೋಡ ಸರ್ವಜ್ಞ ॥ ೧೬೩೬ ॥

### ಸ್ತ್ರೀಯರಿಗೆ ತಕ್ಕ ಪುರುಷ-೨

ಎತ್ತಲಾರದ ಕಾಯ । ಮಸ್ತಕವು ಮಧ್ಯವೂ ।
ಮತ್ತೆ ಕಕ್ಕಸವು ಕೇಳುವರಿಗಾಪುರುಷ ।
ಹಸ್ತಿನಿಗೆ ಮೇಳ ಸರ್ವಜ್ಞ ॥ ೧೬೩೭ ॥

ಅಕ್ಕಳಿಸಿದ ಹೊಟ್ಟೆ । ಬೆಕ್ಕುಗಣ್ಣಿನ ಮೋರೆ ।
ಅಕ್ಕುಳಿಯು ತುಂಬ ಕಡುಗೋಪಿ ಪುರುಷನು ।
ಚಿತ್ತಿನಿಗೆ ಮೇಳ ಸರ್ವಜ್ಞ ॥ ೧೬೩೮ ॥

ಇಂಬಾದ ದೇಹಕ್ಕೆ। ಮುಂಬೆಳಗು ಸಂಭ್ರಮಿಸಿ।
ತುಂಬಿ ನೇರಾದ ಮಧ್ಯದ ಪುರುಷನು।
ಶಂಖಿನಿಗೆ ಮೇಳ ಸರ್ವಜ್ಞ ॥ ೧೬೩೯ ॥

ಮದವೆದ್ದ ಮದಗಜದ। ಹದದಂದದಿರುತಿರ್ದು।
ವಿಧವಿಧದ ಪ್ರೌಢನುಡಿಗಳನು ನುಡಿವವನು।
ಪದ್ಮಿನಿಗೆ ಮೇಳ ಸರ್ವಜ್ಞ ॥ ೧೬೪೦ ॥

### ವಶೀಕರಣ

ಹಲವು ಬಂಧನ ಕೂಟ। ಕಲೆಯ ಭೇದವನರಿದು।
ಸಲೆಯುದನು ಸವಿದು ಬಳಸಿದರೆ ಹಸ್ತಿನಿಯು।
ಒಲಿವಳಾಕ್ಷಣದಿ ಸರ್ವಜ್ಞ ॥ ೧೬೪೧ ॥

ಹರಿಣಾಕ್ಷಿ ಚಿತ್ತಿನಿಯ। ಕರಣೇಂದ್ರಿಯಗಳರಿದು।
ಕರುಣರಸವೆಂಬ ಸದ್ಗುಣದಿ ನೆರೆದರೆ।
ಮರಣತನ ಬಿಡಳು ಸರ್ವಜ್ಞ ॥ ೧೬೪೨ ॥

ನೋಟ ಬೇಟಗಳಲ್ಲಿ। ಪಾಟಿಸಿದ ದೈನ್ಯವೂ।
ಕೂಟದಲಿ ಕೋಪ ಕೊನರಿಸುತ ಶಂಖಿನಿಯು।
ನಾಟಿಸದೆ ಬಿಡಳು ಸರ್ವಜ್ಞ ॥ ೧೬೪೩ ॥

ಮುಂಗುರುಳು ಪಿಡಿದಾಡಿ। ಭಂಗಿಸುತ ಕವಿಕವಿದು।
ರಂಗುದುಟಿಗಳನು ಕಚ್ಚಿದರೆ ಪದ್ಮಿನಿಯು।
ಸಂಗವನು ಬಿಡಳು ಸರ್ವಜ್ಞ ॥ ೧೬೪೪ ॥

## ೨೫. ಸ್ತ್ರೀಸ್ತುತಿ ಪದ್ಧತಿ

### ಸ್ತ್ರೀ ಅವಶ್ಯ

ಹೆಣ್ಣಿನಿಂದಲೆ ಇಹವು। ಹೆಣ್ಣಿನಿಂದಲೆ ಪರವು।
ಹೆಣ್ಣಿಂದ ಸಕಲ ಸಂಪದವು, ಹೆಣ್ಣೊಲ್ಲ।
ದಣ್ಣಗಳು ಯಾರು? ಸರ್ವಜ್ಞ ॥ ೧೬೪೫ ॥

ಮಗಳಕ್ಕ ತಂಗಿಯು । ಮಿಗೆ ಸೊಸೆಯು ನಾದುನಿಯು ।
ಜಗದ ವನಿತೆಯರು, ಜನನಿಯು, ಇವರೊಳಗೆ ।
ಜಗಕ್ಕೊಬ್ಬಳ್ಳೆಸೆ ಸರ್ವಜ್ಞ ॥ ೧೬೪೬ ॥

ಸ್ತ್ರೀಯಿಂದ ಪುರುಷ

ಪಲ್ಲಕ್ಕಿ ಏರಿದವ । ರೆಲ್ಲಿಂದ ಬಂದಿಹರು ।
ನೆಲ್ಲಕ್ಕಿಯಂತ ಸುಲಿವಲ್ಲ ಹಿರಿಯರು ।
ನಲ್ಲಳಿಂದಲ್ಲೆ ? ಸರ್ವಜ್ಞ ॥ ೧೬೪೭ ॥

ನಲ್ಲೆಯನು ಒಲ್ಲೆಂಬ । ಸೊಲ್ಲು ನಾಲಿಗೆ ಹೊಲೆಯು ।
ಬಲ್ಲಿದನು ಶ್ರವಣ ಸನ್ಯಾಸಿ ಇವರುಗಳು ।
ಎಲ್ಲಿ ಉದಿಸಿಹರು ಸರ್ವಜ್ಞ ॥ ೧೬೪೮ ॥

ಸ್ತ್ರೀಯರ ನೆಲೆ ತಿಳಿಯದು

ಅಂಬುಧಿಯ ಗಾನವನು । ಅಂಬರದ ಕಲಹವನು ।
ಶಂಭುವಿನ ಮಹಿಮೆ, ಸತಿಯರ ಹೃದಯವ ।
ನಿಂಬರಿದರಾರು ? ಸರ್ವಜ್ಞ ॥ ೧೬೪೯ ॥

ಹೆಣ್ಣಿನ ಹೃದಯದ । ತಣ್ಣಗಿಹ ನೀರಿನ ।
ಬಣ್ಣಿಸುತ ಕುಣಿವ ಕುದುರೆಯ ನೆಲೆಯ ಬ ।
ಲ್ಲಣ್ಣಗಳು ಯಾರು ? ಸರ್ವಜ್ಞ ॥ ೧೬೫೦ ॥

ಲೆಕ್ಕಕ್ಕೆ ದುಕ್ಕಿಲ್ಲ । ಬೆಕ್ಕಿಗಂ ವ್ರತವಿಲ್ಲ ।
ಸಿಕ್ಕು ಬಂಧನದಿ ಸುಖವಿಲ್ಲ, ನಾರಿಗೆ ।
ಸಿಕ್ಕದವರಿಲ್ಲ ಸರ್ವಜ್ಞ ॥ ೧೬೫೧ ॥

ಸ್ತ್ರೀಯರನ್ನು ಆಶಿಸದವರಿಲ್ಲ

ತವಕದಾತುರದವಳ । ನವರತಿಯು ಒದಗಿದಳ ।
ಸವಿಮಾತು ಸೊಬಗು ಸುರಿಯುವ ಯುವತಿಯನು ।
ಅವುಕದವರಾರು ಸರ್ವಜ್ಞ ॥ ೧೬೫೨ ॥

ರತಿಕಲೆಯೊಳತಿ ಚದುರೆ | ಅತಿಮಿತಿಯು ಮಾತಿನೊಳು |
ಖತಿಗಳೆದ ಮೊಗವು ನೊಬಗಿನ ಸುದತಿ ಕಂ |
ಡತಿ ಬಯಸದಿಹರೆ ಸರ್ವಜ್ಞ || ೧೬೫೩ ||

ಮೊಲೆಗಳುಗಿದವಳಾಗಿ | ಚೆಲುವೆ ಒಲಿದವಳಾಗಿ |
ಹಲ ತೆರದಿ ಕರೆವ ಕಾಮಿನಿಯನು ಬಿಟ್ಟು |
ತೊಲಗುವವರಾರು ಸರ್ವಜ್ಞ || ೧೬೫೪ ||

ಮತಿಯೊಳತಿ ಚದುರಾಗಿ | ರತಿಕೇಳಿಗೊಳಗಾಗಿ |
ಅತಿ ಮೋಹ ಮುದ್ದು ಮೊಗವಾಗಿ ಅಂಗನೆಯು |
ನತಿಗಳೆದರಾರು ಸರ್ವಜ್ಞ || ೧೬೫೫ ||

ವರತಪಸಿ ಸನ್ಯಾಸಿ | ಪರಮಯೋಗಿಯು ಮುನಿಯು |
ಸೆರೆಸಿಕ್ಕು ಮಾಯೆಗೊಳಗಾಗಿ ಇರುತಿರಲು |
ಪರರ ಪಾಡೇನು ? ಸರ್ವಜ್ಞ || ೧೬೫೬ ||

### ತ್ರಿಮೂರ್ತಿಗಳೂ ಸ್ತ್ರೀವಶರು

ರುದ್ರಕರ್ತನು ತಾನು | ಅರ್ಧ ನಾರಿಯು ಆದ |
ಇದ್ದವರೊಳಾರು ಸತಿಯರ ಹೃದಯವನು |
ಗೆದ್ದವರು ಯಾರು ? ಸರ್ವಜ್ಞ || ೧೬೫೭ ||

ಹರಿಯ ಉರವನು ಮೆಟ್ಟಿ | ಹರನ ಶಿರವನು ಏರಿ |
ಸರಸಿಜೋದ್ಭವನ ಮೊಗಗೆಡಿಸಿ ಮೀರಿದಳು |
ಹಿರಿಯರಿನ್ನಾರು ? ಸರ್ವಜ್ಞ || ೧೬೫೮ ||

ಉಚ್ಚಿಯ ಬಚ್ಚಲವ | ತುಚ್ಛವೆಂದೆನಬೇಡ |
ಅಚ್ಯುತ ಬಿದ್ದನಜಬಿದ್ದ, ದೇವೇಂದ್ರ |
ನೆಚ್ಚುತ್ತ ಬಿದ್ದ ಸರ್ವಜ್ಞ || ೧೬೫೯ ||

ತಗ್ಗಿನ ಕುಣಿಯೆಂದು | ಅಗ್ಗವಾಡಲು ಬೇಡ |
ಭಗ್ಗ ಮೊದಲಾದ ದೈವಗಳು ಅದರೊಳಗೆ |
ಮುಗ್ಗಿರುವರಯ್ಯ ! ಸರ್ವಜ್ಞ || ೧೬೬೦ ||

ಹರಿಋಜರು ಮೊದಲಾಗಿ । ನರಮನುಜ ಕಡೆಯಾಗಿ ।
ವರಯೋಗಿ ನಡುವೆ ತಾನಾಗಿ, ಮಾಯೆಗೆ ।
ಹೊರಗಾದರಾರು ? ಸರ್ವಜ್ಞ ॥ ೧೬೬೧ ॥

ಮಾಯೆಗೆದ್ದಿಹ ಸೊಲ್ಲು । ಬಾಯ ಮಾತಲ್ಲವೇ ? ।
ಮಾಯೆಯಿಂ ಕಾಯವಾಗಿರಲು ನರಮನುಜ ।
ಮಾಯೆ ಗೆಲಲುಂಟೆ ? ಸರ್ವಜ್ಞ ॥ ೧೬೬೨ ॥

## ಸ್ತ್ರೀ ಮಹತ್ವ

ಕಿರಿಯಲ್ಲಿ ನೋಡಿದರೆ । ಕರು ಮೆಟ್ಟಿದಂತಕ್ಕು ।
ಸಿರಿಯು ಮರೆಮಾಡಿ ತುರುಬಿಕ್ಕೆ, ಜಗವೆಲ್ಲ ।
ಇರಿದಾಡುತಿಹುದು ಸರ್ವಜ್ಞ ॥ ೧೬೬೩ ॥

ಚಿಕ್ಕಂದಿನಲಿ ಹೆಣ್ಣು । ಹೆಕ್ಕಂಜಲಂತಿಹುದು ।
ಸೊಕ್ಕಿ ಜವ್ವನವು ನೆರೆದಿಹರೆ ಆ ಹೆಣ್ಣು ।
ಸಕ್ಕರೆಯು ತಾನೆ ಸರ್ವಜ್ಞ ॥ ೧೬೬೪ ॥

ನೋಡಿದರೆ ಎರಡೂರು । ಕೂಡಿದಾಮಧ್ಯದಲಿ ।
ಮೂಡಿಹ ಸ್ಮರನ ಮನೆಯಲ್ಲಿ ಜಗವು ಬಿ ।
ದ್ದಾಡುತ್ತಲಿಹುದು । ಸರ್ವಜ್ಞ ॥ ೧೬೬೫ ॥

ಸಂದಿಯ ಗಾಯ ಜಗ । ವಂದ್ಯವಾಗೆಸೆದಿಹುದು ।
ನಂದಿವಾಹನರು ಅಜ ಹರಿಗಳಂತದನು ।
ಹೊಂದಿಕೊಂಡಿಹರು ಸರ್ವಜ್ಞ ॥ ೧೬೬೬ ॥

ಪುಲ್ಲೆ ಚರ್ಮವನುಟ್ಟು । ಹಲ್ಲು ಬೆಳ್ಳಗೆ ಬಿಟ್ಟು ।
ಕಲ್ಲ ಮೇಲಿಪ್ಪ ತಪಸಿಯ ಮನಸೆಲ್ಲ ।
ನಲ್ಲೆ ಮೇಲಿಹುದು ಸರ್ವಜ್ಞ ॥ ೧೬೬೭ ॥

ತೋಟದ ಬೆಳೆಯನ್ನು । ದಾಟಿ ನೋಡದರಾರು ।
ಮಾಟು ಜವ್ವನದ ಸೊಬಗಿಯರ ನೆರೆಕಂಡು ।
ದಾಟದವರಾರು ? ಸರ್ವಜ್ಞ ॥ ೧೬೬೮ ॥

ಒಡೆದರಾಣಿಯ ಮುತ್ತು । ಹಡೆಯದದು ಹಾಗವನು ।
ಒಡೆದಂದು ಲಕ್ಷ್ಯವಡೆವ ಸ್ತ್ರೀರತ್ನವನು ।
ಪಡೆಯದವರಾರು ಸರ್ವಜ್ಞ ॥ ೧೬೭೯ ॥

ಗಂಜಳದ ಬಾವಿಯಲಿ । ಗಂಜಳವು ಬೆಳೆದಿಹುದು ।
ಗುಂಜುಂಟು ಕೆಸರು ಒಳಗುಂಟು, ಆ ಬಾವಿ ।
ಗಂಜದವರಾರು ಸರ್ವಜ್ಞ ॥ ೧೬೮೦ ॥

ಯೋನಿಜರು ಯೋನಿಯನು । ಹೀನಮಾಡುವದೇನು ? ।
ಆನಂದ ಜನನಕದು ಮೂಲ, ಶುಚಿಯಿರಲು ।
ತಾನೊಲಿವುದೆಂದ ಸರ್ವಜ್ಞ ॥ ೧೬೮೧ ॥

ಕಾಮನ ಪುರದಿಪ್ಪ । ಆ ಮಹಾ ಕೆರೆಯೊಳಗೆ ।
ಹೇಮ ಹೇಮಿಗಳು ಮುಳುಗಿರಲು ಉಳಿದವರ ।
ನೇಮವೇನೆಂದ । ಸರ್ವಜ್ಞ ॥ ೧೬೮೨ ॥

ಊರಿದ ಚೀಳಿನಿಂ । ದೇರಿದ ಜೇನೆಯಲಿ ।
ಮೂರು ಜಗವೆಲ್ಲ ಹೊರಳುತಿಹುದಾನೋವ ।
ಮೀರಿದವರಿಲ್ಲ। ಸರ್ವಜ್ಞ ॥ ೧೬೮೩ ॥

ಬಿಲ್ಲು ಬಲ್ಲಿತು ನಾರಿ । ಬಿಲ್ಲಿಂದ ಕಡು ಸಣ್ಣ ।
ಬಿಲ್ಲನೆ ಮರಳಿ ಎರಗಿಸಿತು ನಾರಿಯಿಂ ।
ಬಲ್ಲಿದರು ಯಾರು ? ಸರ್ವಜ್ಞ ॥ ೧೬೮೪ ॥

## ಮನೆವಾರ್ತೆ

### ಗುಣವಂತೆ ದೊರೆಯುವದು ದೇವರ ಕೃಪೆ

ಹಣವು ದೊರೆದರೆ ಲೇಸು । ಋಣವು ಹರಿದರೆ ಲೇಸು ।
ಗಣಿಕೆಯನು ತೊರೆಯೆ ನೆರೆಲೇಸು, ಸತಿಯರಲಿ ।
ಗುಣವತಿಯೆ ಲೇಸು ಸರ್ವಜ್ಞ ॥ ೧೬೮೫ ॥

ಅಂಗನೆಯು ಒಲಿಯುವದು। ಬಂಗಾರ ದೊರೆಯುವದು ।
ಸಂಗ್ರಾಮದೊಳಗೆ ಗೆಲುವುದು, ಇವು ಮೂರು ।
ಸಂಗಯ್ಯನೊಲುಮೆ ! ಸರ್ವಜ್ಞ ॥ ೧೬೮೬ ॥

ತಾಳದೋಲೆಯನಿಟ್ಟು | ಬೇಳೆ ಮಣಿಯನು ಕಟ್ಟಿ |
ವೇಳೆಯನು ಅರಿತು ನಡೆವವಳು ದೊರಕುವುದು |
ಶೂಲಿಯ ಕರುಣ ! ಸರ್ವಜ್ಞ || ೧೬೭೭ ||

ಉಲಿಯದೆ ಕೆಲಿಯದೆ | ತಲೆಯೆತ್ತಿ ನೋಡದೆ |
ಬಲು ಬಲ್ಲತನದಿ ಇರುವವಳು ದೊರೆಯುವದು |
ಸಲೆ ಗುರುಕರುಣ ಸರ್ವಜ್ಞ || ೧೬೭೮ ||

ಉರಿಯದಲೆ ಮೆರೆಯದಲೆ | ಶಿರನೆತ್ತಿ ನೋಡದಲೆ |
ಸರಿ ಬಂದ ಸ್ಥಾನದಿರುವವಳು ದೊರಕುವುದು |
ಗುರುಕರುಣವೆಂದ ! ಸರ್ವಜ್ಞ || ೧೬೭೯ ||

ಪರಪುರುಷನನು ತನ್ನ | ಪರಮ ಪಿತನೆಂದರಿತು |
ಸ್ಥಿರಚಿತ್ತವುಳ್ಳ ಸುದತಿಯನು ಸನ್ನೆಯಲಿ |
ಕರೆಯುವವರಾರು ? ಸರ್ವಜ್ಞ || ೧೬೮೦ ||

ಸ್ತ್ರೀಯರಿಲ್ಲದ ಮನೆವಾರ್ತೆ

ದಂಡಿಗಿಲ್ಲದ ಹಾಡು | ಉಂಡಿಗಿಲ್ಲದ ಸುಂಕ |
ಹೆಂಡರಿಲ್ಲದನ ಮನೆವಾರ್ತೆ, ತಲೆ ಹೋದ |
ಮುಂಡದಂತಿಕ್ಕು ಸರ್ವಜ್ಞ || ೧೬೮೧ ||

ಲಿಂಗವಿಲ್ಲದ ಪೂಜೆ | ಗಂಗೆಯಿಲ್ಲದ ತೋಟ |
ಹೆಂಗಳಿಲ್ಲದನ ಮನೆವಾರ್ತೆ, ಅನುದಿನವು |
ಭಂಗ ಕಾಣಯ್ಯ ಸರ್ವಜ್ಞ || ೧೬೮೨ ||

ಪಿಂಡವಿಲ್ಲದ ಶ್ರಾದ್ಧ | ಮುಂಡವಿಲ್ಲದ ದೇಹ |
ಹೆಂಡರಿಲ್ಲದನ ಮನೆವಾರ್ತೆ, ಆವಗಂ |
ಬಂಡು ಕಾಣಯ್ಯ ! ಸರ್ವಜ್ಞ || ೧೬೮೩ ||

ಸುಣ್ಣವಿಲ್ಲದ ವೀಳೆ | ಬಣ್ಣವಿಲ್ಲದ ಮದುವೆ |
ಹೆಣ್ಣಿಲ್ಲದವನ ಸಂಸಾರ, ಮಳಲೊಳಗೆ |
ಎಣ್ಣೆ ಹೊಯಿದಂತೆ ಸರ್ವಜ್ಞ || ೧೬೮೪ ||

ಆಪತ್ತಿಗಣ ಲೇಸು । ಭೂಪತಿಗೆ ಗುಣ ಲೇಸು ।
ಕೋಪವನು ಕಳೆವ ನಗು ಲೇಸು, ಓಪಳಿಗೆ ।
ಕೂಪ ಲೇಸೆಂದ ಸರ್ವಜ್ಞ ॥ ೧೬೮೫ ॥

ಪುರುಷರಿಲ್ಲದ ಮನೆಯು ಬಂಡು

ಗಂಡನಿಲ್ಲದ ನಾರಿ । ಮಿಂಡನಿಲ್ಲದ ಸೂಳೆ ।
ಬಂಡವಿಲ್ಲದನ ಬೇಹಾರ, ಮುದಿನಾಯು ।
ಕುಂಡೆಯಂತಿಕ್ಕು ಸರ್ವಜ್ಞ ॥ ೧೬೮೬ ॥

ಅರಸು ಇಲ್ಲದ ಊರು । ಹೊರಸು ಇಲ್ಲದ ನಿದ್ರೆ ।
ಪುರುಷನಿಲ್ಲದ ಬಾಳುವೆಯು ನೀರೊಳ ।
ಕ್ಷರವ ಬರೆದಂತೆ ಸರ್ವಜ್ಞ ॥ ೧೬೮೭ ॥

ಮಕ್ಕಳಿದ್ದರೆ ಮನೆ

ಮೊಸರು ಇಲ್ಲದ ಊಟ । ಕೆಸರು ಇಲ್ಲದ ಗದ್ದೆ ।
ಬಸುರಾಗದವಳ ಬಾಳುವೆಯು ಬೇಸಿಗೆಯ ।
ಬಿಸಿಲು ಕಾದಂತೆ ಸರ್ವಜ್ಞ ॥ ೧೬೮೮ ॥

ದೇಶವಿಲ್ಲದ ದೊರೆಯು । ಕೋಶವಿಲ್ಲದ ಹರದ ।
ಕೂಸುಳಿಯದವಳ ಬಾಳುವೆಯು ಬೂದಿಯನು ।
ಪೂಸಿಕೊಂಡಂತೆ ಸರ್ವಜ್ಞ ॥ ೧೬೮೯ ॥

ಮಕ್ಕಳಿಲ್ಲದ ಮನೆಯು । ಪಕ್ಕಿಯಿಲ್ಲದ ವನವು ।
ದಿಕ್ಕಿಲ್ಲದವನ ಸಂಸಾರ ಕಳನು ಮನೆ ।
ಹೊಕ್ಕು ಹೋದಂತೆ ಸರ್ವಜ್ಞ ॥ ೧೬೯೦ ॥

ಅಂದವಿಲ್ಲದ ದುಸ್ತು । ಹೆಂದರಿಲ್ಲದ ಮದುವೆ ।
ಕಂದನಿಲ್ಲದಳ ಮನೆವಾರ್ತೆ ಇವು ಮೂರು ।
ಕುಂದು ಕಾಣಯ್ಯ ಸರ್ವಜ್ಞ ॥ ೧೬೯೧ ॥

ರೊಕ್ಕವಿಲ್ಲದ ಬಾಳ್ವೆ। ಮಕ್ಕಳಿಲ್ಲದ ಮನೆಯು।
ಅಕ್ಕರವಿರದ ತವರೂರು, ಇವು ಮೂರು।
ದುಕ್ಕ ಕಾಣಯ್ಯ। ಸರ್ವಜ್ಞ ॥ ೧೬೨ ॥

ಪತಿವ್ರತೆಯಲ್ಲಿ ಸಂಶಯ ಬೇಡ

ಒಪ್ಪುಳ್ಳ ಹೆಣ್ಣಿನಲಿ। ತಪ್ಪು ಸಾಧಿಪನೆಗ್ಗ।
ಕಪ್ಪುರದ ಮೇಲೆ ಕಸನಿರಲು ಅದನೊಬ್ಬ।
ರೊಪ್ಪದವರುಂಟೆ? ಸರ್ವಜ್ಞ ॥ ೧೬೩ ॥

ಉತ್ತಮದ ಅಂಗನೆಗೆ। ಒತ್ತಿ ಕಾವಲದೇಕೆ?।
ಚಿತ್ತದಲಿ ಚೆಲುವೆ ತಾನಾದ ಬಳಿಕಿನ್ನು।
ಮತ್ತೆ ಮುಸುಕೇಕೆ? ಸರ್ವಜ್ಞ ॥ ೧೬೪ ॥

ಸತ್ತಿಗೆಯ ಹಿಡಿದವಗೆ। ಒತ್ತಿ ಗಾಳಿಯು ಹೊಲ್ಲ।
ನೆತ್ತಿಯಲಿ ಹೊರೆಯ ತರಹೊಲ್ಲ, ಪತಿವ್ರತೆಗೆ।
ಸುತ್ತು ಮರೆ ಹೊಲ್ಲ ಸರ್ವಜ್ಞ ॥ ೧೬೫ ॥

ಲೇಸಪ್ಪ ಸತಿಯೊಡನೆ। ದೋಷಮರಸುವನೆಗ್ಗ।
ಕಾಸಿದ ಹಾಲ ನೊಣಮುಟ್ಟಲದನಾರು।
ನೋಸಿ ತೆಗೆದಿಹರು ಸರ್ವಜ್ಞ ॥ ೧೬೬ ॥

ಚಿತ್ತ ಚಂಚಲ ಹೊಲ್ಲ। ವಿತ್ತ ಯೋಗಿಗೆ ಹೊಲ್ಲ।
ತೊತ್ತಿನ ಮಾತು ನಿಜವಲ್ಲ, ಸತಿಯರಿಗೆ।
ಒತ್ತಾಯ ಹೊಲ್ಲ ಸರ್ವಜ್ಞ ॥ ೧೬೭ ॥

ಮುಗಿಲು ಮಾಳಿಗೆ ಲೇಸು। ಜಗಲಿ ಸೂಳಿಗೆ ಲೇಸು।
ಹಗೆಯದ ಭತ್ತವುಣ ಲೇಸು, ಸತಿಯರಿಗೆ।
ನಗೆ ಮೊಗವು ಲೇಸು ಸರ್ವಜ್ಞ ॥ ೧೬೮ ॥

## ಪ್ರೀತಿ ಇದ್ದರೆ ಬಾಳ್ವೆ

ಮನಬಂದ ಹೆಣ್ಣನ್ನು । ವಿನಯದಲಿ ಕರೆದಿತ್ತು ।
ಮನಮುಟ್ಟಿ ಬಾಳ್ವೆ ಮಾಡಿದರೆ ಅಮೃತದ ।
ಕೆನೆಯ ಸವಿದಂತೆ ಸರ್ವಜ್ಞ ॥ ೧೬೯೯ ॥

ತೋಟದ ಕಬ್ಬಿಂದ । ಹೋಟೆಯ ಜೇನಿಂದ ।
ನೀಟಾಗಿ ಕರೆವ ಹಯನಿಂದ ಬಲ್ಲವಳ ।
ಕೂಟವೇ ಲೇಸು ಸರ್ವಜ್ಞ ॥ ೧೭೦೦ ॥

## ಪ್ರೀತಿಯಿಲ್ಲದ ಬಾಳುವೆಯಲ್ಲ

ಬಾರದ ಹೆಣ್ಣಿಂಗೆ । ಹೋರುವನು ಕಡು ಹೆಡ್ಡ ।
ದೂರದ ಹೆಣಕೆ ನರಿ ನೆಗೆದು ಕೂಗಿ ಬಾ ।
ಯಾರಿ ಸತ್ತಂತೆ ಸರ್ವಜ್ಞ ॥ ೧೭೦೧ ॥

ವಿನಯವಿಲ್ಲದಳಲ್ಲಿ । ಮನವನಿಕ್ಕುವ ನೆಗ್ಗ ।
ಘನವಪ್ಪ ಬೂರ ಫಲಕಾಗಿ ಪಕ್ಕಿಗಳು ।
ಜಿನುಗಿ ಸತ್ತಂತೆ ಸರ್ವಜ್ಞ ॥ ೧೭೦೨ ॥

ಸತ್ತವರ ಬಾಯೊಳಗೆ । ಒತ್ತಿ ನೀರೆರೆದಂತೆ ।
ಚಿತ್ತವಿಲ್ಲದಳ ಸಂಸಾರ ಶುನಿ ಹೆಣನ ।
ಹತ್ತಿ ತಿಂದಂತೆ ಸರ್ವಜ್ಞ ॥ ೧೭೦೩ ॥

ಸತ್ತ ಹೆಣನಿಗೆ ನೀರ । ಹೊತ್ತು ತಂದೆರೆದಂತೆ ।
ಚಿತ್ತವಿಲ್ಲದಳ ಒಡನಾಟ ಕತ್ತೆ ಮುಂ ।
ದತ್ತು ಕರೆದಂತೆ ಸರ್ವಜ್ಞ ॥ ೧೭೦೪ ॥

ಓತಿರದ ಹೆಣ್ಣಿನೊಡ । ಮಾತನಾಡುವ ನೆಗ್ಗ ।
ಹೂತ ಮಲ್ಲಿಗೆಯ ವನದೊಳಗೆ ತುರುಬಿಲ್ಲ ।
ದಾತ ಸುಳಿದಂತೆ ಸರ್ವಜ್ಞ ॥ ೧೭೦೫ ॥

ಹರಿದ ಹರಗೋಲು ಹೊಲ್ಲ । ಹರುಕನ ಕೆಳೆಹೊಲ್ಲ ।
ತೊರೆಯುಲಂಬಿಗನ ಹಗೆ ಹೊಲ್ಲ, ಕೂಟಕ್ಕೆ ।
ನೆರೆಯುದಳು ಹೊಲ್ಲ ಸರ್ವಜ್ಞ ॥ ೧೭೦೬ ॥

ಒಲ್ಲದವಳೊಡನಾಡಿ । ಚೆಲ್ಲವಾಡುವ ನೆಗ್ಗ ।
ಕಲ್ಲ ಪುತ್ಥಳಿಯ ಬಿಗಿದಪ್ಪಿ ಚುಂಬಿಸಲು ।
ಹಲ್ಲು ಹೋದಂತೆ ಸರ್ವಜ್ಞ ॥ ೧೭೦೭ ॥

ಚಿತ್ತವಿಲ್ಲದ ಹೆಣ್ಣ । ಗರ್ತಿ ಮಾಡುವ ನೆಗ್ಗ ।
ಬತ್ತಿದ ಕೆರೆಗೆ ಗಿಣಿ ಹಾರಿ ಬಾಯಾರಿ ।
ಸತ್ತು ಹೋದಂತೆ ಸರ್ವಜ್ಞ ॥ ೧೭೦೮ ॥

ಬೇಕಾದದ್ದು ಬೆಲ್ಲಕ್ಕಿಂತ ಸವಿ

ಕೋಡಗನ ಮುಸುಡಾಗಿ । ಬೀಡುಗಾಲವಳಾಗಿ ।
ನೋಡುವರಿಗೆಲ್ಲ ನಗೆಯಾಗಿ ಇಂಬರಿದು ।
ಕೂಡುವಳೆ ಸತಿಯು ಸರ್ವಜ್ಞ ॥ ೧೭೦೯ ॥

ಕೊಂಕುಗುರಳಿನ ರಂಭೆ । ಕಂಕಣವು ಕಟಿಸೂತ್ರ ।
ಪಂಕಜಮುಖಿಯು ಎನಬೇಡ, ತಾನೊಲಿದ ।
ಮಂಕೆ ಮಾಣಿಕವು । ಸರ್ವಜ್ಞ ॥ ೧೭೧೦ ॥

ಸಂಸಾರ ಸುಖ

ಬೆಚ್ಚನ ಮನೆಯಾಗಿ । ವೆಚ್ಚಕ್ಕೆ ಹೊನ್ನಾಗಿ ।
ಇಚ್ಛೆಯನು ಅರಿವ ಸತಿಯಾಗಿ, ಸ್ವರ್ಗಕ್ಕೆ ।
ಕಿಚ್ಚು ಹಚ್ಚೆಂದ! ಸರ್ವಜ್ಞ ॥ ೧೭೧೧ ॥

ಜೋಳದ ಬೋನಾಗಿ । ಮೇಲೆ ಕೆನೆ ಮೊಸರಾಗಿ ।
ವೇಳೆಗೆ ಬರುವ ಸತಿಯಾಗಿ, ಸೂಳೆಯನು ।
ಕೋಳದಿಕ್ಕೆಂದ ಸರ್ವಜ್ಞ ॥ ೧೭೧೨ ॥

ಅಳೆಯಿಲ್ಲದೂಟ ಹೆಂ । ಮಳೆಯಿಲ್ಲದಾರಂಬ ।
ಬಳೆಯಿಲ್ಲದವಳ ನಳಿದೋಳು, ಡೊಂಬರ ।
ಗಳೆಯುಂದವಕ್ಕು ಸರ್ವಜ್ಞ ॥ ೧೭೧೩ ॥

ಎತ್ತುಗಳು ಎರಡಾಗಿ । ಬತ್ತದಿಪ ಹಯನಾಗಿ ।
ಪುತ್ರರಯ್ದಾಗಿ ಸತಿಯೊಬ್ಬಳಾದರೆ ।
ನಿತ್ಯದಿ ಸುಖವು ಸರ್ವಜ್ಞ ॥ ೧೭೧೪ ॥

ಕೆಂದಸಾದೆತ್ತಾಗಿ । ಮುಂದರಿವ ಮಗನಾಗಿ ।
ಕುಂದದಲೆ ಗೆಯ್ವ ಸೊಸೆಯಾದರಾಮನೆಗೆ ।
ಬಿಂದಿಗೆಯು ಹೊನ್ನು ಸರ್ವಜ್ಞ ॥ ೧೭೧೫ ॥

ಹಳ್ಳಗದ್ದೆಗಳಾಗಿ । ಕುಳ್ಳವೆರಡೆತ್ತಾಗಿ ।
ಒಳ್ಳೆ ಗುಣದವಳು ಸೊಸಯಾದರಾಮನೆಗೆ ।
ಬಳ್ಳದಲಿ ಹೊನ್ನು ಸರ್ವಜ್ಞ ॥ ೧೭೧೬ ॥

## ೨೬. ಸ್ತ್ರೀ ನಿಂದಾ ಪದ್ಧತಿ

### ಅಯೋಗ್ಯ ಮನೆವಾರ್ತೆ

ಅರಸನಿಲ್ಲದ ನಾಡು । ವರುಷವಿಲ್ಲದ ಬೆಳೆಯು ।
ಹೆರುಷವಿಲ್ಲದಳ ಮನೆವಾರ್ತೆ, ಅರನಾರಿ ।
ಪುರುಷನಂತಕ್ಕು ಸರ್ವಜ್ಞ ॥ ೧೭೧೭ ॥

ತೊಗೆಯಿಲ್ಲದೂಟ ಸಂ । ಪಿಗೆಯಿಲ್ಲದೆಲೆದೋಟ ।
ನಗೆಯಿಲ್ಲದವಳ ಒಡನಾಟ, ಬೆರಣಿಯ ।
ಹೊಗೆಯ ಕುಡಿದಂತೆ ಸರ್ವಜ್ಞ ॥ ೧೭೧೮ ॥

ತೋವೆಯಿಲ್ಲದ ಊಟ । ಲೋವೆಯಿಲ್ಲದ ಮನೆಯು ।
ನೋವನರಿಯದಳ ಮನೆವಾರ್ತೆ, ಸಿಹಿಯಳಸಿ ।
ಬೇವು ತಿಂದಂತೆ ಸರ್ವಜ್ಞ ॥ ೧೭೧೯ ॥

ಅಡಿಕೆಯಿಲ್ಲದ ವೀಳೆ । ಕಿಡಿಕೆಯಿಲ್ಲದ ಮನೆಯು ।
ಒಡೆಕು ಬಾಯವಳ ಮನೆವಾರ್ತೆ, ಎಣ್ಣೆಯ ।
ಕುಡಿಕೆಯೊಡೆದಂತೆ ಸರ್ವಜ್ಞ ॥ ೧೭೨೦ ॥

ಎಣ್ಣೆಯಿಲ್ಲದ ದೀಹ । ಸುಣ್ಣವಿಲ್ಲದ ವೀಳೆ ।
ಕಣ್ಣಿಲ್ಲದವಳ ಮನೆವಾರ್ತೆ, ಮಳಲೊಳಗೆ ।
ಎಣ್ಣೆ ಹೊಯಿದಂತೆ ಸರ್ವಜ್ಞ ॥ ೧೭೨೧ ॥

ಆಸರಿಲ್ಲದ ಮನೆಯು । ದೋಸೆಯಿಲ್ಲದ ದೋರೆ ।
ಬೇಸರಾದವಳ ಮನೆವಾರ್ತೆ, ಹಣ ಹೋದ ।
ವೇಶಿಯಂತಕ್ಕು ಸರ್ವಜ್ಞ ॥ ೧೭೨೨ ॥

ದೋಸೆಯಿಲ್ಲದ ಊಟ । ಕಾಸು ಇಲ್ಲದ ಬಾಳ್ವೆ ।
ಆಸರುಳ್ಳವಳ ಮನೆವಾರ್ತೆ, ತಾಯ್‌ಸತ್ತ ।
ಕೂಸಿನಂತಕ್ಕು ಸರ್ವಜ್ಞ ॥ ೧೭೨೩ ॥

ಮೊಸರು ಇಲ್ಲದ ಊಟ । ಕೆಸರು ಇಲ್ಲದ ಗದ್ದೆ ।
ಹಸನವಿಲ್ಲದಳ ಮನೆವಾರ್ತೆ, ತಿಪ್ಪೆಯ ।
ಕಸದಂತೆ ಇಹುದು ಸರ್ವಜ್ಞ ॥ ೧೭೨೪ ॥

ಹರಿಕೆಯಿಲ್ಲದ ದಾನ । ನೆರಿಕೆಯಿಲ್ಲದ ಮನೆಯು ।
ಅರಿಕೆಯಿಲ್ಲದಳ ಮನೆವಾರ್ತೆ, ಅನ್ನದ ।
ಕರಕು ಸವಿದಂತೆ ಸರ್ವಜ್ಞ ॥ ೧೭೨೫ ॥

ಅರುಪಲರಿಯದ ದೊರೆಯು । ಕುರುಪನರಿಯದ ಕುದುರೆ ।
ತಿರುಗಿ ಆಡುವಳ ಒಡನಾಟ, ಇಟ್ಟಿಯಲಿ ।
ಇರಿದುಕೊಂಡಂತ ಸರ್ವಜ್ಞ ॥ ೧೭೨೬ ॥

ಕಣಿಕವಿಲ್ಲದ ಊಟ । ವನಿತೆಯಿಲ್ಲದ ಬಾಳ್ವೆ ।
ಎಣಿಕೆಯಿಲ್ಲದಳ ಮನೆವಾರ್ತೆ, ಹೊಳೆಯೊಳಗೆ ।
ಮುಣುಗಿ ಹೋದಂತೆ ಸರ್ವಜ್ಞ ॥ ೧೭೨೭ ॥

ಕುದುರೆಯಿಲ್ಲದ ಅರಸು । ಮಧುರವಿಲ್ಲದ ಊಟ ।
ಚದುರೆಯಲ್ಲದಳ ಮನೆವಾರ್ತೆ, ಮುದಿಗೂರ ।
ಲೊದರಿ ಸತ್ತಂತೆ ಸರ್ವಜ್ಞ ॥ ೧೭೨೮ ॥

ಬಂದು ಬಾಗದ ಬಿಲ್ಲು । ಹೊಂದಿ ಹೋಗದ ಬಂಟ ।
ತಂದುದನು ಅರಿದು ಬಳಸದ ಅಂಗನೆಯು ।
ಕೊಂದಳೆಂದರಿಗು ಸರ್ವಜ್ಞ ॥ ೧೭೨೯ ॥

ಕಾಸು ಇಲ್ಲದ ಬಾಳು । ಭಾಷೆಯರಿಯದ ಆಳು ।
ಹೇಸಿಯಾದವಳ ಮನೆವಾರ್ತೆ ಕತ್ತೆಯು ।
ಹೂಸಿನಂತಕ್ಕು ಸರ್ವಜ್ಞ ॥ ೧೭೩೦ ॥

ಮಾತನರಿಯದ ಮಗನು । ನೀತಿಯರಿಯದ ಸತಿಯು ।
ಭೀತಿಯಿರದಾಳಿರ್ದ್ದರಾಮನೆಯು ।
ಏತಕ್ಕು ಬೇಡ ಸರ್ವಜ್ಞ ॥ ೧೭೩೧ ॥

ಬಚ್ಚಲಿಲ್ಲದ ಮನೆಯು । ಕೆಚ್ಚಲಿಲ್ಲದ ಪಶುವು
ನೆಚ್ಚಿಗಿಲ್ಲದಳ ಮನೆವಾರ್ತೆ, ಶ್ರಾವಣದ ।
ಕಿಚ್ಚು ಕಾದಂತೆ ಸರ್ವಜ್ಞ ॥ ೧೭೩೨ ॥

ಸಂಚಿಯಿಲ್ಲದ ವೀಳೆ । ಮಂಚವಿಲ್ಲದ ನಿದ್ರೆ ।
ವಂಚನೆಯಲಿಹಳ ಮನೆವಾರ್ತೆ, ಕಿಲುಬಿಡಿದ ।
ಕಂಚಿನಂತಕ್ಕು ಸರ್ವಜ್ಞ ॥ ೧೭೩೩ ॥

ಅಲ್ಲವಿಲ್ಲದ ಊಟ । ನಲ್ಲಳಿಲ್ಲದ ನಿದ್ರೆ ।
ಹಲ್ಲಿಲ್ಲದವಳ ರತಿಕೂಟ, ಸಮರದಲಿ ।
ಬಿಲ್ಲು ಮುರಿದಂತೆ ಸರ್ವಜ್ಞ ॥ ೧೭೩೪ ॥

ಎರೆಯಿಲ್ಲದಾರಂಬ । ದೊರೆಯು ಇಲ್ಲದ ಊರು ।
ಹರೆಯು ಹೋದವಳ ಒಡನಾಟ, ನಾಯಿ ಹಳೆ ।
ಕೆರವ ಕಡಿದಂತೆ ಸರ್ವಜ್ಞ ॥ ೧೭೩೫ ॥

ಮುರಿದು ಬಿತ್ತಿದ ಹೊಲವು । ಹಿರಿದಾಗಿ ಬೆಳೆಯುವುದೆ ? ।
ಹರೆಯು ಹೋದವಳ ರತಿಕೂಟ, ಮಳಲೊಳಗೆ ।
ಬೆರೆದ ಕೊಳಂತೆ ಸರ್ವಜ್ಞ ॥ ೧೭೩೬ ॥

ಈಚಲ ಮರ ಹೀನ । ನೀಚರ ನೆರೆ ಹೀನ ।
ನೋಚಿದ ಹೆಣ್ಣು ತರಹೀನ, ಮನೆಯೊಳಗೆ ।
ನೇಚಾಟ ಹೀನ । ಸರ್ವಜ್ಞ ॥ ೧೭೩೭ ॥

ಬಿದ್ದ ಮೊಲೆಯಳು ಹೊಲ್ಲ । ಇದ್ದೂರ ಹಗೆ ಹೊಲ್ಲ ।
ತಿದ್ದದ ಹೋರಿ ತರಹೊಲ್ಲ, ಮನೆಯೊಳಗೆ ।
ಗುದ್ದಾಟ ಹೊಲ್ಲ ಸರ್ವಜ್ಞ ॥ ೧೭೩೮ ॥

ದಾರಿಯ ಮನೆ ಹೊಲ್ಲ । ಜಾರೆಯ ನೆರೆ ಹೊಲ್ಲ ।
ಊರು ಕಾಯುವನ ಹಗೆ ಹೊಲ್ಲ, ಮನೆಯೊಳಗೆ ।
ಹೋರಾಟ ಹೊಲ್ಲ ಸರ್ವಜ್ಞ ॥ ೧೭೩೯ ॥

ಕಣ್ಣು ಬೇನೆಯು ಹೊಲ್ಲ । ಹುಣ್ಣಾದ ಮೊಗ ಹೊಲ್ಲ ।
ಬಣ್ಣವನು ಬರೆವ ಸತಿಹೊಲ್ಲ, ಕುಲಹೀನ ।
ಹೆಣ್ಣು ತರಹೊಲ್ಲ ಸರ್ವಜ್ಞ ॥ ೧೭೪೦ ॥

ಕರಿಬಾಯಳಿರಹೊಲ್ಲ । ಕರಿಗೈಯ ನೆರೆ ಹೊಲ್ಲ ।
ಸುರುಕಿಟ್ಟು ಕುಡಿವ ಹಯ ಹೊಲ್ಲ, ಸಜ್ಜನೆಗೆ ।
ಮುರುಕವೇ ಹೊಲ್ಲ ಸರ್ವಜ್ಞ ॥ ೧೭೪೧ ॥

ಗೋಟಡಿಕೆ ಮೆಲಹೊಲ್ಲ । ಬಾಟೆಯೊಳು ಇರಹೊಲ್ಲ ।
ಕೂಟವನು ಮುರಿವ ಸತಿಹೊಲ್ಲ, ಹೆಣ್ಣಿನೊಳು ।
ತಾಟಕಿಯೆ ಹೊಲ್ಲ ಸರ್ವಜ್ಞ ॥ ೧೭೪೨ ॥

ದಾಸಿಯೆಂಜಲು ಹೊಲ್ಲ । ಮೀಸೆ ಹುಳುಕಲು ಹೊಲ್ಲ ।
ಬೇಸರದ ನುಡಿಯ ಮನೆ ಹೊಲ್ಲ, ನಂಬಿದಲಿ ।
ಮೋಸವೆ ಹೊಲ್ಲ ಸರ್ವಜ್ಞ ॥ ೧೭೪೩ ॥

ಸಂಜೆಯಲಿ ಉಣ ಹೊಲ್ಲ । ಎಂಜಲನು ತಿನ ಹೊಲ್ಲ ।
ನಂಜು ಒಡಲೊಳಗೆ ಇರಹೊಲ್ಲ, ಮನೆಯೊಳಗೆ ।
ಗುಂಜಾಟ ಹೊಲ್ಲ ಸರ್ವಜ್ಞ ॥ ೧೭೪೪ ॥

ಅಂದವಿಲ್ಲದ ಹೆಣ್ಣು । ಚೆಂದವಿಲ್ಲದ ಮದುವೆ ।
ತಂದುದನು ತಿಂದು ಮಲಗುವ ಸತಿಯಿಂದ ।
ಬೆಂದಿಹುದೆ ಲೇಸು ಸರ್ವಜ್ಞ ॥ ೧೭೪೫ ॥

ಸೋರುವ ಮನೆಯಿಂದ । ದಾರಿಯ ಮರ ಲೇಸು ।
ಹೋರುವ ಸತಿಯ ಬದುಕಿಂದ ಹೊಡೆದೊಯ್ವ ।
ಮಾರಿ ಲೇಸೆಂದ ಸರ್ವಜ್ಞ ॥ ೧೭೪೬ ॥

ಹೊಸೆಯದ ಕೈಯಿಂದ । ಕುಸಿದು ಹೋಹುದು ಲೇಸು ।
ಅಸಮಾನದವಳ ಬದುಕಿಂದ ತಿಂಗಳಲಿ ।
ಹಸಿದಿಹುದೆ ಲೇಸು ಸರ್ವಜ್ಞ ॥ ೧೭೪೭ ॥

ಚುಚ್ಚುವ ಕೆರದಿಂದ । ಕಚ್ಚುವ ಶುನಿ ಲೇಸು ।
ನಿಚ್ಚಲು ಉಲಿವ ಸತಿಯಿಂದ ಉರಿದೇಳ್ವ ।
ಕಿಚ್ಚು ಲೇಸೆಂದ ಸರ್ವಜ್ಞ ॥ ೧೭೪೮ ॥

ಹೇಳಿದರೆ ಕೇಳದಲೆ । ಕಾಳು ಬುದ್ಧಿಯ ಕಲಿತು ।
ಸೂಳೆಯಂತಿಪ್ಪ ಸತಿಯು ಬಾಳುವೆಯಿಂದ ।
ಕೋಳವೇ ಲೇಸು ಸರ್ವಜ್ಞ ॥ ೧೭೪೯ ॥

ಒಮ್ಮೆ ಕರೆದರೆ ಕೇಳ । ದಿಮ್ಮೆ ಕರೆದರೆ ಕೆರಳಿ ।
ಹಮ್ಮಿನಲಿ ಉಲಿವ ಸತಿಯಿಂದ ಹೊಡೆವೊಯ್ವ ।
ಹೆಮ್ಮಾರಿ ಲೇಸು ಸರ್ವಜ್ಞ ॥ ೧೭೫೦ ॥

ಮೋಡಿನ ಹೊಲನಾಗಿ । ಜೋಡಿಲ್ಲದೆತ್ತಾಗಿ ।
ಕಾಡಿಗೆಯ ಕಣ್ಣ ಸೊಸೆಯಾದರಾಮನೆಗೆ ।
ಕೇಡು ಬಿಡದೆಂದ ಸರ್ವಜ್ಞ ॥ ೧೭೫೧ ॥

ಬರಡಾದ ಹಯನಾಗಿ । ಜರಿಯುವ ಮಗನಾಗಿ ।
ಕರೆದರೋಯೆನದ ಸೊನೆಯಾದರಾಮನೆಯು ।
ಉರಿಯಲಿದ್ದಂತೆ   ಸರ್ವಜ್ಞ          ॥ ೧೭೫೨ ॥

ಹಾರುವೆರಡೆತ್ತಾಗಿ । ಹೋರುವ ಮಗನಾಗಿ ।
ನೋರುಗಣ್ಣಾಕೆ ಸೊಸೆಯಾದರಾಮನೆಗೆ ।
ತೂರುವರು ಮಣ್ಣ   ಸರ್ವಜ್ಞ          ॥ ೧೭೫೩ ॥

ಚಿಂಚವೆರಡೆತ್ತಾಗಿ । ಸಂಚಿನ ಸೊಸೆಯಾಗಿ ।
ಮಿಂಚಾಗಿ ಬರುವ ಮಗನಾದರಾಮನೆಗೆ ।
ಲಂಚ ತಪ್ಪುವದೆ ?   ಸರ್ವಜ್ಞ          ॥ ೧೭೫೪ ॥

ಬಂಡು ಹೆಂಡತಿಯಾಗಿ । ತುಂಡೊಬ್ಬ ಸೊಸೆಯಾಗಿ ।
ಕಂಡಲ್ಲಿ ಹರಿವ ಮಗನಾದರಾಮನೆಗೆ ।
ದಂಡ ತಪ್ಪುವದೆ ?   ಸರ್ವಜ್ಞ          ॥ ೧೭೫೫ ॥

ಸ್ತ್ರೀನಿಂದಾ

ಛಾಯೆಯನು ಯಮ ನುಂಗಿ । ಕಾಯಲರಿಯನು ನೋಡ ।
ಮಾಯಾದ ಅಗ್ನಿಯೊಡಗೂಡಿ ಹೆಣ್ಣೆಂಬ ।
ನಾಯ ನಂಬುವರೆ   ಸರ್ವಜ್ಞ          ॥ ೧೭೫೬ ॥

ಹುಚ್ಚ ನಾಯಿಯು ಹೊಲ್ಲ । ಮಚ್ಚರದ ಮಗ ಹೊಲ್ಲ ।
ರಚ್ಚೆಯಲಿಹನ ನೆರೆ ಹೊಲ್ಲ, ಹೆಣ್ಣಾನು ।
ನೆಚ್ಚಿರಲು ಹೊಲ್ಲ   ಸರ್ವಜ್ಞ          ॥ ೧೭೫೭ ॥

ಆಲಕ್ಕೆ ಹೂವಿಲ್ಲ । ಶೀಲಕ್ಕೆ ಸರಿಯಿಲ್ಲ ।
ನಾಲಿಗೆಯಲೊಂದು ಎಲುವಿಲ್ಲ, ದೃಢಮನವು ।
ಬಾಲೆಯರಿಗಿಲ್ಲ   ಸರ್ವಜ್ಞ          ॥ ೧೭೫೮ ॥

ನೀರಿನೊಳಗಣ ಕಲ್ಲು । ನಾರೇಳ ಬಲ್ಲುದೇ ? ।
ನಾರಿಯರೊಲುಮೆ ತನಗೆಂಬ ಮರುಳನ ।
ಮೋರೆ ನೋಡೆಂದ   ಸರ್ವಜ್ಞ          ॥ ೧೭೫೯ ॥

ಜಲದ ಒಳಗಿನ ಕಲ್ಲು । ಸಲೆ ಬೆಮರ ಬಲ್ಲುದೇ ।
ಲಲನೆಯರೊಲುಮೆ ತನಗೆಂಬ ಮನುಜಂಗೆ ।
ಮಲನಾಗರೆಂದ ಸರ್ವಜ್ಞ ॥ ೧೭೬೦ ॥

ಏರಿ ಮೇಲಣ ಪಂಜು । ನೀರೊಳಗೆ ಉರಿದಂತೆ ।
ನಾರಿಯರೊಲುಮೆ ತನಗೆಂಬ ಮರುಳಂಗೆ ।
ಮಾರಿ ಹಿಡಿದಿಹುದು ಸರ್ವಜ್ಞ ॥ ೧೭೬೧ ॥

ದಾರಿಯ ಮರಬೆಂದು । ನೀರೊಳಗೆ ಉರಿದಂತೆ ।
ನಾರಿಯರ ಒಲುಮೆ ತನಗೆಂದು ಕುಣಿವನ ।
ಮೋರೆ ನೋಡೆಂದ ಸರ್ವಜ್ಞ ॥ ೧೭೬೨ ॥

ಚಿಲುಮೆಯ ಭೂಮಿಯೊಳು । ನಿಲುವುದೇ ನಿಲುಗಂಬ ? ।
ಒಲೆಯುವದು ನಿಲದೆ ಎಳೆದತ್ತ, ಹೆಣ್ಣಿನ ।
ನೆಲೆಯನಾರ್ಬಲ್ಲ! ಸರ್ವಜ್ಞ ॥ ೧೭೬೩ ॥

ಹಂಚು ಮಣ್ಣಲಿ ಹುಟ್ಟಿ । ವಂಚನೆಯುಲಿರುವಂತೆ ।
ಸಂಚು ಬೇರವಳ ಮನಬೇರೆ, ಹೆಣ್ಣೆಂಬ ।
ಹಂಚ ನೆಚ್ಚುವರೆ ಸರ್ವಜ್ಞ ॥ ೧೭೬೪ ॥

ನಾಯ ಬಾಲವ ನಂಬಿ । ಹಾಯುವರೆ ಹಳ್ಳವನು ? ।
ನಾಯಬಾಲಿಂದ ಅತಿ ಚಪಲ, ಹೆಣ್ಣೆಂಬ ।
ನಾಯ ನಂಬುವರೆ? ಸರ್ವಜ್ಞ ॥ ೧೭೬೫ ॥

ಮನೆಯ ಮೇಲಿನ ಜೋಳ । ತೆನೆಯಾಗಬಲ್ಲುದೇ ? ।
ವನಿತೆಯೆನಗೊಲಿದಳೆನಬೇಡ, ಬೆಳ್ಳಕ್ಕಿ ।
ದನವ ಕಾದಂತೆ! ಸರ್ವಜ್ಞ ॥ ೧೭೬೬ ॥

ಕುದುರೆಯ ಚದುರೆಯ । ಹದಿರೆರಡು ಒಂದಯ್ಯ ।
ಚದುರನೇರಿದರೆ ಕುಣಿಯುವದು, ಬೆಳ್ಳಾಳ ।
ಬಿದಿರಿ ಹಾಕುವದು! ಸರ್ವಜ್ಞ ॥ ೧೭೬೭ ॥

ಹೆಂಡರ ಕೌತುಕವ | ಗಂಡರು ಬಲ್ಲರೇ ? |
ಗುಂಡಿ ನೀರೊಳಗೆ ಕಿರಿಮೀನ ಹೆಜ್ಜೆಯನು |
ಕಂಡಾತನಾರು ಸರ್ವಜ್ಞ ॥ ೧೭೬೮ ॥

ಮೊಗೆಯು ನೀರೊಳಗೊಂದು | ನೆಗಳು ಆಡಿದರಂದು |
ತಗುಣಿ ಹೆಬ್ಬುಲಿಯ ಹಿಡಿದಂದು, ಹೆಣ್ಣಿನ |
ಬಗೆಯ ನಂಬುವದು! ಸರ್ವಜ್ಞ ॥ ೧೭೬೯ ॥

ಯೇತದ ಗಣಿ ಚಿಗಿತು | ಕಾತು ಫಲವಾದಂದು |
ಹೋತು ಹೆಬ್ಬುಲಿಯನಿರಿದಂದು, ಹೆಣ್ಣಿನ |
ಮಾತ ನಂಬುವದು! ಸರ್ವಜ್ಞ ॥ ೧೭೭೦ ॥

ಅಡವಿಯೊಳು ಮಳೆಹುಯಿದು | ಗಿಡ ನೇಡುಗೊಂಡಂದು |
ಹುಡಿಯಲ್ಲಿ ಕಮಲ ಬೆಳೆದಂದು, ಹೆಣ್ಣಿನ |
ನುಡಿಯ ನಂಬುವದು! ಸರ್ವಜ್ಞ ॥ ೧೭೭೧ ॥

ಅಲ್ಲ ಸಿಹಿಯಾದಂದು | ನೆಲ್ಲಿ ಹಣ್ಣಾದಂದು |
ಕಲ್ಲು ಪ್ರತಿಮೆಗಳು ಕುಣಿದಂದು, ಸತಿಯರ |
ಸೊಲ್ಲ ನಂಬುವದು! ಸರ್ವಜ್ಞ ॥ ೧೭೭೨ ॥

ತಾತ್ಪರ್ಯ

ನಂಬಿದಂತಿರಬೇಕು | ನಂಬದಲೆ ಇರಬೇಕು |
ಇಂಬರಿದು ಎಚ್ಚರಿರಬೇಕು ಹೆಣ್ಣನು |
ನಂಬಿದವ ಕೆಟ್ಟ ಸರ್ವಜ್ಞ ॥ ೧೭೭೩ ॥

ಹೆಣ್ಣು ಮುನಿದರೆ ತಿದ್ದು | ವಣ್ಣಗಳ ನಾ ಕಾಣೆ |
ಹೆಣ್ಣೊಳಮೃತವು ವಿಷವುಂಟು ಉಣಬಲ್ಲ |
ಅಣ್ಣಗಳು ಯಾರು ಸರ್ವಜ್ಞ ॥ ೧೭೭೪ ॥

ಹೆಣ್ಣಿನ ಗುಣವರಿಯೆ | ಕಣ್ಣಿಗದು ಕಾಂಬುದೆ ? |
ಸುಣ್ಣದ ಕಲ್ಲಿನೊಳಗಡಗಿ ಸುಡುಗಿಚ್ಚು |
ತಣ್ಣಗಿದ್ದಂತೆ! ಸರ್ವಜ್ಞ ॥ ೧೭೭೫ ॥

ನಾರಿ ಪರರುಪಕಾರಿ । ನಾರಿ ಸ್ವರ್ಗಕೆ ದಾರಿ ।
ನಾರಿ ಸಕಲರಿಗೆ ಹಿತಕಾರಿ, ಮುನಿದರೆ ।
ನಾರಿಯೆ ಮಾರಿ! ಸರ್ವಜ್ಞ ॥ ೧೭೭೬ ॥

## ೨೭. ಜಾರರ ಪದ್ಧತಿ

### ಜಾರತ್ವದ ಲಕ್ಷಣ

ಆಳಿಯಾಸೆ ಹೆಪ್ಪಿಂಗೆ । ಮಳೆಯಾಸೆ ಸಕಲರಿಗೆ ।
ಬಲೆಯಾಸೆ ಮೀನು ಹಿಡಿವಂಗೆ, ಹಾದರಕೆ ।
ಸುಳಿದಾಟದಾಸೆ ಸರ್ವಜ್ಞ ॥ ೧೭೭೭ ॥

ಪಡಿಯಾಸೆ ಹರದಂಗೆ । ಮಡಿಯಾಸೆ ವೇಶ್ಯೆಗೆ ।
ಜಡೆಯಾಸೆ ಬೂದಿಗೊರವಂಗೆ, ಹಾದರಕೆ ।
ಎಡೆಯಾಟದಾಸೆ ಸರ್ವಜ್ಞ ॥ ೧೭೭೮ ॥

ಕಟ್ಟ್ಯಾನೆ ಆರಮನೆಗೆ । ಮೆಟ್ಟ್ಯಾನೆ ಕಾಲಿಂಗೆ ।
ಪಟ್ಟಣದಾನೆ ಹರದಂಗೆ, ಹಾದರಕೆ ।
ಮುಟ್ಟ್ಯಾಟದಾನೆ ಸರ್ವಜ್ಞ ॥ ೧೭೭೯ ॥

ಕರೆವಾನೆ ಗೊಲ್ಲಂಗೆ । ನಿರಿಯಾನೆ ಸೂಳೆಗೆ ।
ಒರೆಯಾನೆ ಕತ್ತಿಯುಲಗಿಂಗೆ, ಹಾದರಕೆ ।
ಮರೆಯಾಟದಾನೆ ಸರ್ವಜ್ಞ ॥ ೧೭೮೦ ॥

ಮಂಜು ಮಳೆ ಬರ ಲೇಸು । ಪಂಜು ಇರುಳಲಿ ಲೇಸು ।
ನಂಜುತ್ತಲುಣುವ ಹಾದರದ ಕಳ್ಳಂಗೆ ।
ಬಂಜೆ ಲೇಸೆಂದ ಸರ್ವಜ್ಞ ॥ ೧೭೮೧ ॥

ಉಂಡು ಓಡಲು ಹೊಲ್ಲ । ಕೊಂಡೆಯನ ಕೆಳೆ ಹೊಲ್ಲ ।
ಮಂಡೆಯಲಿ ಹೊರೆಯ ಹೊರಹೊಲ್ಲ, ಹಾದರಕೆ ।
ಮುಂಡಾಟ ಹೊಲ್ಲ ಸರ್ವಜ್ಞ ॥ ೧೭೮೨ ॥

## ವಶೀಕರಣ

ಲೋಕವಶ್ಯಕೆ ಮದ್ದು । ಏಕಾಕಿ ಹೊಂಬೇರು ।
ಆಕೆಯನೊಲಿಸಲದು ಮದ್ದು, ಮಿಕ್ಕೆಲ್ಲ ।
ಕಾಕು ಮದ್ದೆಂದ ಸರ್ವಜ್ಞ ‖ ೧೭೮೩ ‖

ಕಾಮನ ಬಾಧೆಗೆ । ಹೇಮವೇ ಔಷಧವು ।
ಭೂಮಿಯ ಬೇರನಗಿವವರ ತಲೆಯಲ್ಲಿ ।
ತಾಮಸವಿಹುದು ಸರ್ವಜ್ಞ ‖ ೧೭೮೪ ‖

ಅಡವಿಯ ಗಿಡಗಳನು । ಕೆಡಿಸಿ ಅಗಿಯಲು ಬೇಡ ।
ಕೊಡಲೊಲ್ಲದಿಹನ ಅವಳೊಲ್ಲಳೇನಕಟ ।
ಗಿಡವು ಮಾಡಿದವು! ಸರ್ವಜ್ಞ ‖ ೧೭೮೫ ‖

ನಾರು ಬೇರಿಕ್ಕಿದಡೆ । ನಾರಿಯರು ಒಲಿಯುವರೆ ? ।
ನಾರಿಯರು, ಜಗವು ಒಲಿಯುವರೆ, ಹೊನ್ನಿನ ।
ಬೇರನಿಕ್ಕೆಂದ ಸರ್ವಜ್ಞ ‖ ೧೭೮೬ ‖

ಬೆಚ್ಚನ ಮನೆಯಾಗಿ । ಮೆಚ್ಚಿದ ಹೆಣ್ಣಾಗಿ ।
ವೆಚ್ಚಕ್ಕೆ ನೂರು ಹಣವಾದರಾಕೂಟ ।
ನಿಚ್ಚಲೂ ಬೇಕು ಸರ್ವಜ್ಞ ‖ ೧೭೮೭ ‖

ಆಕೆಯನು ಕಂಡು ಮನೆ । ಯಾಕೆಯನು ಮರೆದಿಹರೆ ।
ಹಾಕಿದ ಉಂಕೆ ಹರಿದಂತೆ, ಮನೆಯೊಳಿ ।
ದ್ದಾಕೆ ತಾ ಕೆಡುಗು ಸರ್ವಜ್ಞ ‖ ೧೭೮೮ ‖

ಇಪ್ಪವಳ ಬಿಟ್ಟು ತನ । ಗೊಪ್ಪುವಳ ನೆರೆದಿಹರೆ ।
ಇಪ್ಪುರಿನುಲಿಯು ಹರಿದಂತೆ, ತನ್ನನು ।
ಅಪ್ಪುವಳು ಕೆಡುಗು ಸರ್ವಜ್ಞ ‖ ೧೭೮೯ ‖

## ಜಾರನ ಭಂಗ

ವ್ಯಸನದ ದೆಸೆಯಿಂದ । ಮಸಿ ಹೆಣ್ಣಿನೊಶವಾಗಿ ।
ಹುಸಿದು ಹೋಗುವಳ ಒಡನಾಡಿ, ತಾ ನುಗ್ಗು ।
ನುಸಿಯಾದ ಕಾಣೊ! ಸರ್ವಜ್ಞ ‖ ೧೭೯೦ ‖

ತೊಯ್ಯಿಲಿಲ್ಲದ ತೋಟ । ತುಯ್ಯಲಿಲ್ಲದ ಊಟ ।
ಕೈಯಲಿಲ್ಲದನ ಬರಿ ನೋಟ, ಕೋಲಿರದೆ ।
ಹುಯ್ಯಲ್ಹೋದಂತೆ ಸರ್ವಜ್ಞ ॥ ೧೭೯೧ ॥

ಚಾಟು ಇಲ್ಲದ ಪುರುಷ । ಕೋಟೆಯಿಲ್ಲದ ಅರಸು ।
ಕೂಟವಿಲ್ಲದ ಜಾರನು, ಬಿಲ್ವಿಡಿದು ।
ಮೋಟನೆಚ್ಚಂತೆ ಸರ್ವಜ್ಞ ॥ ೧೭೯೨ ॥

ನೋಟ ಬೇಟವು ತನಗೆ । ನಾಟಿಸಿದ ಬಳಿಕೆಲ್ಲಿ ? ।
ಸಾಟಿಯೆ ಕಾಮನೆಸುಗೆಗೆ ? ಒಲುಮೆಗೆ ।
ನೋಟವೇ ಮುಖ್ಯ ! ಸರ್ವಜ್ಞ ॥ ೧೭೯೩ ॥

ಆರಿಗಾದರು ಸತಿಯು । ಮೀರಿ ಚೆಲುವಾಗಿರಲು ।
ಆರರಿಯರೆಂದು ಸಾರಿದರೆ ಕಣ್ಣೊಳಗೆ ।
ಕಾರವಿಟ್ಟಂತೆ ಸರ್ವಜ್ಞ ॥ ೧೭೯೪ ॥

ತಾರವನು ನೀನಿತ್ತು । ಬೇರವನು ಬಿಟ್ಟಿಹುದು ।
ನೀರೆಯುವಳೆಂದು ಪರವಧುವ ಸಾರಿದರೆ ।
ಮಾರಿ ಬಂದಿಹುದು ಸರ್ವಜ್ಞ ॥ ೧೭೯೫ ॥

ನಿಷಿದ್ಧ ಗಮನ

ಕಕ್ಕೆಯದು ಕಹಿಗಾಯಿ । ಬಿಕ್ಕೆಯದು ಹುಳಿಗಾಯಿ ।
ಸೊಕ್ಕಿ ಸುಗುಡಿಗೆ ಹಾರಿ ಹೋಹುದರಿಂದ ।
ಸಕ್ಕರೆಯನುಣ್ಣೊ ! ಸರ್ವಜ್ಞ ॥ ೧೭೯೬ ॥

ಕಾರೆಯದು ಕಸುಗಾಯಿ । ಈರೆಯದು ಹುಳಿಗಾಯಿ ।
ಡೋರು ವೈಯಾದ ಮುದುಕಿ ಹೋಹುದರಿಂದ ।
ಕಾರಿಕೊಂಡುಣ್ಣೊ ಸರ್ವಜ್ಞ ॥ ೧೭೯೭ ॥

ಒಂದು ಹೆತ್ತಾಕೆಯನು । ಹೊಂದಲೊಂದರೆ ಲೇಸು ।
ಸಂದು ಸಲೆ ಹತ್ತು ಹೆತ್ತವಳ ಕೂಟದಿಂ ।
ಬಂಧನವೆ ಲೇಸು ಸರ್ವಜ್ಞ ॥ ೧೭೯೮ ॥

ರಸವರತ ದಂಟುಗಳ । ಹಸು ಮೇಯಲೊಲ್ಲದದು ।
ರಸಗೆಟ್ಟು ಹೋದ ವನಿತೆಯು ಹೋಹಾತ ।
ಪಶುವಿನಿಂದತ್ತ ಸರ್ವಜ್ಞ ॥ ೧೭೯೯ ॥

ಸ್ವಚ್ಛವಿರುವಳ ಕಂಡು । ಇಚ್ಛೆಯಲಿ ನೋಡುವರು ।
ಕಚ್ಚೆಯಲಿ ಉಚ್ಚೆ ಬರುತಿಪ್ಪ ರಾವಿಂಗೆ ।
ನೆಚ್ಚಿ ಕೆಟ್ಟಹರು। ಸರ್ವಜ್ಞ ॥ ೧೮೦೦ ॥

ಚೊಕ್ಕದವಳರೆನೋಟ । ಸಕ್ಕರೆಯು ಸವಿದಂತೆ ।
ಚೊಕ್ಕವಿಲ್ಲದಳ ಬಿರಿ ನೋಟ ಹುಡಿಮಣ್ಣು ।
ಮುಕ್ಕಿದಂತಿಹುದು ಸರ್ವಜ್ಞ ॥ ೧೮೦೧ ॥

ಮೇಳವಿಲ್ಲದ ಊಟ । ಬಾಲೆಯರ ನೆರೆಕೂಟ ।
ಕಾಳೆಮ್ಮೆ ಹಸುರ ತೊರೆದು ತಾ ಕೀಳಿನ।
ಕೂಳ ಮೆದ್ದಂತೆ ಸರ್ವಜ್ಞ ॥ ೧೮೦೨ ॥

ಮುದಿನಾಯಿ ಮೊಲವ ಕಂ । ಡದು ಬೆನ್ನ ಹತ್ತಿದೋಲ್ ।
ಮುದುಕ ಜವ್ವನೆಯನೊಡಗೂಡೆ ಮುದಿಗೂಬೆ ।
ಬೊದರಿಕೊಂಡಂತೆ ಸರ್ವಜ್ಞ ॥ ೧೮೦೩ ॥

ಗುದ್ದುಗಣ್ಣಾದವಗೆ । ಮುದ್ದು ಹೆಂಗಸು ಏಕೆ ?।
ಗದ್ದೆಯು ಹಸುರ ಮೆಲಹೋಗಿ ಕೋಣನು ।
ಬಿದ್ದು ಸತ್ತಂತೆ ಸರ್ವಜ್ಞ ॥ ೧೮೦೪ ॥

ನರೆ ಬಂದ ಮುದುಕಂಗೆ । ಭರದ ಜವ್ವನೆ ಏಕೆ ।
ಕರಗಿದ ತುಪ್ಪ ಹೆರೆವಂತೆ ಜವ್ವನವು ।
ತಿರುಗಿ ಬಂದಿಹುದೆ ? ಸರ್ವಜ್ಞ ॥ ೧೮೦೫ ॥

ಉರಿದ ಕಟ್ಟಿಗೆ ಬೂದಿ । ನೆರೆದು ಮರವಪ್ಪುದೇ ।
ಹರೆಯು ಹೋದವಳ ರತಿಕೂಟ ಬೇವ ತಾ ।
ನ್ಹರೆದು ಕುಡಿದಂತೆ ಸರ್ವಜ್ಞ ॥ ೧೮೦೬ ॥

ಹಳೆನೇಹವಿಹುದೆಂದು । ಎಳಸಿ ಹೋಗುವ ನೆಗ್ಗ ।
ಕಳವಳವಕ್ಕು ಹಳಿಯುಕ್ಕು ಹೆಣ್ಣಿನ ।
ಕುಳಿಯುಲಿಂತೆಂದ ಸರ್ವಜ್ಞ || ೧೪೦೭ ||

ಬೇರೂರ ಸ್ನೇಹಕ್ಕೆ । ಹಾರಿ ಹೋಗುವ ನೆಗ್ಗ
ಮೀರಿದ ಶೂಲದ ಹೆಣಕೆ ನರಿ ನೆಗೆದು ಬಾ ।
ಯಾರಿ ಸತ್ತಂತೆ ಸರ್ವಜ್ಞ || ೧೪೦೮ ||

ನೋಟ ಬೇಟಗಳಿಂದ । ಹೋಟೆ ಸಂಗವು ಲೇಸು ।
ತೀಟೆಯು ತೀರುವುದರಿಂದ ನರಕದ ।
ಊಟವೇ ಲೇಸು ಸರ್ವಜ್ಞ || ೧೪೦೯ ||

ನೋಟದ ಸವಿಸುಖಕೆ । ಕೋಟಿ ಹೊಂಬೆಲೆಯಲ್ಲ ।
ಕೂಟಕೆ ನೋಟವನು ಸಾರೆ, ವ್ಯಸನಕ್ಕೆ ।
ಬೇಟವೆ ಮೊದಲು ಸರ್ವಜ್ಞ || ೧೪೧೦ ||

ಗೋಟು ಹೋಹುದರಿಂದ । ಹೋಟೆ ಹೋಹುದು ಲೇಸು ।
ತಾಟುತ್ತ ಮೈಯು ಬಡಿವಾಗ ಮುದಿಯನ ।
ಕೋಟಲೆಯ ನೋಡ ಸರ್ವಜ್ಞ || ೧೪೧೧ ||

ಹಾರುವನ ನೆಗಳಿನ । ಗೇರು ಬೀಜದ ನೊನೆಯು ।
ಜಾರ ವನಿತೆಗಳ ಗುಣವನು ಅರಿಯದಲೆ ।
ಸಾರಿದವ ಕೆಡುಗು ಸರ್ವಜ್ಞ || ೧೪೧೨ ||

ಕಗ್ಗು ಕಾಣಲು ಹೊಲ್ಲ । ಮೊಗ್ಗೆ ಮುಡಿಯಲು ಹೊಲ್ಲ ।
ಬೊಗ್ಗಿದ ಸ್ತ್ರೀಯು ಹೋಹೊಲ್ಲ, ಹುಡಿಗೆಯು ।
ಕಿಗ್ಗಳವೆ ಹೊಲ್ಲ ಸರ್ವಜ್ಞ || ೧೪೧೩ ||

ಕಿರಿಗೂಸ ಹೋಗುವದು । ಕಿರಿಮಾತನಾಡುವದು ।
ಕರುಸತ್ತ ಆವ ಕರೆವುದು ತನ್ನ ತಾ ।
ನಿರಿದುಕೊಂಡಂತೆ ಸರ್ವಜ್ಞ || ೧೪೧೪ ||

ಗರುವೆಯನು ನೆರೆದಾತ । ತರುವಲಿಯ ನೆರೆದಿಹರೆ ।
ಸರಲಂಬ ತೊಟ್ಟು ಮದಕರಿಯ ತೊರೆದು ತಾ ।
ನರಿಯನೆಚ್ಚಂತೆ ಸರ್ವಜ್ಞ ॥ ೧೮೧೫ ॥

ಕೂಸುಳ್ಳ ಸೂಳೆಗೆ । ಹೇಸದೊತ್ತೆಯ ಕೊಟ್ಟು ।
ಕೂಸತ್ತು ನಲ್ಲ ಬೇಸತ್ತು, ಬಾಣತಿಯು ।
ವೀಸಕ್ಕು ಬೇಡ ಸರ್ವಜ್ಞ ॥ ೧೮೧೬ ॥

ದಾಸಿಯನು ಹೋಗುವಗೆ । ವೀಸ ಹತ್ತದು ಕೈಗೆ ।
ಹೇಸಿ ತೊಲಗುವಳು ಜಯಲಕ್ಷ್ಮಿ । ಆಯುಷ್ಯ ।
ನಾಶವಾಗುವದು । ಸರ್ವಜ್ಞ ॥ ೧೮೧೭ ॥

ತೊತ್ತು ಹೋಹುದರಿಂದ । ಕತ್ತೆ ಹೋಹುದು ಲೇಸು ।
ಕತ್ತೆ ಹತ್ತೆಂಟು ಹೋಗಿಹರೆ ಉಸುರದೆ ।
ಸತ್ತಿಹುದೆ ಲೇಸು ಸರ್ವಜ್ಞ ॥ ೧೮೧೮ ॥

ಕತ್ತೆಯ ಕಿವಿ ಹಿಡಿದು । ಒತ್ತಿನಲಿ ಇರುತಿಹರು ।
ಹೊತ್ತಾಗಿ ಹೋಗಿ ಕೂಡುವರು, ಕರಿ ತಲೆಯ ।
ಕತ್ತೆ ಮಾನವರು ಸರ್ವಜ್ಞ ॥ ೧೮೧೯ ॥

ಕತ್ತೆಯನು ಹೋದವನು । ಮತ್ತೆ ಮಾನವನಲ್ಲ ।
ಕತ್ತೆಗೆ ಕಾಲು ನಾಲ್ಕುಂಟು, ಇಕ್ಕಾಲ ।
ಕತ್ತೆಯಿವನೆಂದ ಸರ್ವಜ್ಞ ॥ ೧೮೨೦ ॥

ಅತ್ತ ಸೂಳೆಯ ಸಂಗ । ಇತ್ತ ಬೋಳಿಯ ಸಂಗ ।
ಮತ್ತೆ ಪಶುಸಂಗದಿರುವಂಗೆ ಭವಭವದಿ ।
ಕತ್ತೆಯ ಜನುಮ ಸರ್ವಜ್ಞ ॥ ೧೮೨೧ ॥

ಕಂಕಿ ಹೋಹುದರಿಂದ । ಮಂಕಿ ಹೋಹುದು ಲೇಸು ।
ಬಿಂಕ ಬೈತಲೆಯ ಬೆಲೆವೆಣ್ಣ ಹೋಗಿಹರೆ ।
ಬೆಂಕಿ ಬಿದ್ದಂತೆ ಸರ್ವಜ್ಞ ॥ ೧೮೨೨ ॥

ಮಾಗಿಗೆ ಮೈ ಕೇಡು । ಯೋಗಿಗೆ ಕುಲ ಕೇಡು ।
ತ್ಯಾಗವಿಲ್ಲದಗೆ ಧನ ಕೇಡು, ಸ್ತ್ರೀಯ ಅತಿ ।
ಭೋಗವೇ ಕೇಡು ಸರ್ವಜ್ಞ ॥ ೧೮೨೩ ॥

ವ್ಯಸನಕ್ಕೆ ಹೋಗಿಹರೆ । ಅಸಿಯುಳನು ಹೋಗುವದು ।
ಬಸುರೆ ಕಣುಗಂಡು ಹೋದರೆ ಕಿಲುಬಿನ ।
ಮೊಸರು ಕುಡಿದಂತೆ ಸರ್ವಜ್ಞ ॥ ೧೮೨೪ ॥

## ೨೮. ಜಾರೆಯರ ಪದ್ಧತಿ

### ಜಾರ ಸ್ತ್ರೀಯರ ಲಕ್ಷಣ

ಅಚ್ಚ ಮುತ್ತನು ಕಟ್ಟಿ । ಬಿಚ್ಚಿ ಓಲೆಯನಿಟ್ಟು ।
ಹೆಚ್ಚಾಗಿ ನೆರಗ ಬಿಡುವವಳು ಕಾಮನ ।
ಮೆಚ್ಚಿನಲ್ಲಿಹಳು ಸರ್ವಜ್ಞ ॥ ೧೮೨೫ ॥

ಅಚ್ಚ ಬಣ್ಣವನುಟ್ಟು । ಉಚ್ಚ ಬೈತಲೆ ಬಿಟ್ಟು ।
ನಿಚ್ಚಲು ನೆರಗ ಹಾರುವಳು ಹಾದರಕೆ ।
ಮೆಚ್ಚು ಕಾಣಯ್ಯ ಸರ್ವಜ್ಞ ॥ ೧೮೨೬ ॥

ಅಚ್ಚು ಹಾಕಿದ ಸೀರೆ । ಪಚ್ಚಗುಪ್ಪಸ ತೊಟ್ಟು ।
ಹೆಚ್ಚಾಗಿ ಮುರುಕ ಮಾಡುವಳು ಕಾಮನು ।
ನೆಚ್ಚಿದ ಬಾಣ ಸರ್ವಜ್ಞ ॥ ೧೮೨೭ ॥

ಹತ್ತ ಕಟ್ಟಿದ ಮುತ್ತು । ಒತ್ತಡಿಕೆ ಬಿಳೆ ಎಲೆಯು ।
ಹೊತ್ತೇರಿ ಹಲ್ಲ ಸುಲಿವಾಕೆ ಕಾಮನೊಲಿ ।
ನೆತ್ತಿದ ಬಾಣ ಸರ್ವಜ್ಞ ॥ ೧೮೨೮ ॥

ಒತ್ತಿ ಕಟ್ಟಿದ ಟೀಕೆ । ಕೆತ್ತಿಸಿದ ಹರಳೋಲೆ ।
ನಿತ್ಯವು ಒನಪ ಮಾಡುವಳು ಕಾಮ ತಾ ।
ನೆತ್ತಿದ ಬಾಣ ಸರ್ವಜ್ಞ ॥ ೧೮೨೯ ॥

ಉಟ್ಟುಟ್ಟು ಕಳೆಯುವಳ | ಬಿಟ್ಟಿಟ್ಟು ಉಡುತಿಹಳ |
ಬೊಟ್ಟಿಟ್ಟು ಹಲ್ಲ ಸುಲಿಯುವಳ ಕಂಡರೆ |
ಕೆಟ್ಟಳೆಂದರಿಗು ಸರ್ವಜ್ಞ ||೧೮೩೦||

ಬೀಡುಗಾಲವಳಾಗಿ | ಕೋಡೆಗನ ಮುಸುಡಾಗಿ |
ನೋಡುವರಿಗೆಲ್ಲ ಮರುಳಾಗಿ ತವಕದಲಿ |
ಕೂಡುವಳು ಜಾರೆ ಸರ್ವಜ್ಞ ||೧೮೩೧||

ಉಟ್ಟೊಮ್ಮೆ ಕಳೆಯುವಳು | ಬಿಟ್ಟೊಮ್ಮೆ ಉಡುತಿಹಳು |
ಕೊಟ್ಟ ಮನೆ ಬಿಟ್ಟು ಬರುತಿಹಳು ಹಾದರದ |
ಮೊಟ್ಟೆ ಕಾಣಯ್ಯ ಸರ್ವಜ್ಞ ||೧೮೩೨||

ಉಟ್ಟಳಿದು ಉಡುತಿಹಳು | ಕಟ್ಟಳಿದು ಮುಡಿಯುವಳು |
ಕಟ್ಟೆಯಲಿ ಕೂತು ಕೆಲೆಯುವಳು ಹಾದರದ |
ಕಟ್ಟಾಣಿಯೆಂದ ಸರ್ವಜ್ಞ ||೧೮೩೩||

ಉಲಿಗನ ಮರಿಯಂತೆ | ಉಲಿವಾಕೆ ಸಜ್ಜನೆಯೆ ? |
ತಲೆಗುತ್ತಿ ನೆಲನ ಬರೆಯುವಳು ಹಾದರಕೆ |
ನೆಲೆವೀಡು ಕಾಣೊ ಸರ್ವಜ್ಞ ||೧೮೩೪||

ಅರಳಿಯ ಮರದಂತೆ | ಮೊರೆವಾಕೆ ಸುಗುಣಿಯೆ |
ಬೆರಳಿಂದ ನೆಲವನಗಿವವಳು ಹಾದರದ |
ನೆರಳು ಕಾಣಯ್ಯ ಸರ್ವಜ್ಞ ||೧೮೩೫||

ನೀರ ನೆಳಲನು ನೋಡಿ | ಗೀರು ಗಂಧವನಿಟ್ಟು |
ಓರೆದುರುಬಿಕ್ಕಿ ನಡೆಯುವಳು ಗಂಡನ |
ಮೀರಿದವಳೆಂದ ಸರ್ವಜ್ಞ ||೧೮೩೬||

ಕೆಂಬಾಯಿ ತೆರೆಯುತ್ತ | ಕೆಂಬಲ್ಲ ತೋರುತ್ತ |
ಕಂಬವನೊರಗಿ ಮುರುಕಿಪಳು ಹಾದರದ |
ಬೊಂಬೆ ಕಾಣಯ್ಯ ಸರ್ವಜ್ಞ ||೧೮೩೭||

ಕುರುಳ ನೇವರಿಸುತ್ತ । ನಿರಿಗೆಗೆಳ ಪಸರಿಸುತ
ಉರದೋರೆ ಸೆರಗ ಹೊರುತಿಹಳು ಹಾದರದ ।
ನೆರಳು ಕಾಣಯ್ಯ ಸರ್ವಜ್ಞ ॥ ೧೮೩೮ ॥

ಬೀಸುವ ನೆವದಿಂದ । ವೇಶವನು ತಾಳುವಳು ।
ಮಾಸಿಹೆನೆಂದು ಉಡುತಿಹಳು ಹಾದರದ ।
ರಾಶಿ ಕಾಣಯ್ಯ ಸರ್ವಜ್ಞ ॥ ೧೮೩೯ ॥

ಬೀಸಿ ಕುಟ್ಟಿ ತನಗಾ । ಯಾಸವಾಗಿಹುದೆಂದು ।
ಹಾಸಿಗೆಯ ಹಾಸಿ ಮಲಗುವಳು ಹಾದರಕೆ ।
ದಾಸಿ ಕಾಣಯ್ಯ ಸರ್ವಜ್ಞ ॥ ೧೮೪೦ ॥

ಕುಟ್ಟುವ ನೆವದಿಂದ । ರಟ್ಟೆಯನು ತಿರುಹುವಳು ।
ನಿಟ್ಟೆಸಿ ನಲುಗಿ ಹಾಡುವಳು ಹಾದರದ ।
ಮೊಟ್ಟೆ ಕಾಣಯ್ಯ ಸರ್ವಜ್ಞ ॥ ೧೮೪೧ ॥

ನಡೆಯುತ್ತ ನಾಚುತ್ತ । ನುಡಿಯುತ್ತ ಕೊಂಕುತ್ತ ।
ಮಡಿಯುಟ್ಟು ಹಲ್ಲ ಸುಲಿವಾಕೆ ಅಗ್ಗದ ।
ತುಡುಗುಣಿಯೆಂದ ಸರ್ವಜ್ಞ ॥ ೧೮೪೨ ॥

ನಡೆಯುತ್ತ ಸೀರೆಯನು । ಕೊಡಹುತ್ತ ಕೆಮ್ಮುವಳು ।
ಎಡಗಣ್ಣಿನಿಂದ ಮಿಟುವಳು ಹಾದರದ ।
ಮಡುವು ಕಾಣಯ್ಯ ಸರ್ವಜ್ಞ ॥ ೧೮೪೩ ॥

ಕೂಸಿನ ನೆವದಿಂದ । ದೋಸೆಯನು ಮಾಡುವಳು ।
ಹೇಸಿಯನಗಂಡನೆಂಬುವಳು ಹಾದರದ ।
ಹಾಸು ಕಾಣಯ್ಯ ಸರ್ವಜ್ಞ ॥ ೧೮೯೪ ॥

ಕಣಕಾಲ ಕುಣಿಸುವಳು । ಮೊಣಕಾಲ ಮಣಿಸುವಳು ।
ಎಣಿಕೆಯಲಿ ಹಲ್ಲ ತೋರುವಳು ಹಾದರದ ।
ಕುಣಿಕೆ ಕಾಣಯ್ಯ ಸರ್ವಜ್ಞ ॥ ೧೮೪೫ ॥

ಕಣಕಾಲು ಕಿರಿದಾಗಿ । ಕುಣಿಕುಣಿದು ನಡೆಯುವಳು ।
ಅಣಕದಲಿ ಉರವ ತೋರುವಳು ಗಂಡನ ।
ಟೊಣೆದಳೆಂದರಿಗು ಸರ್ವಜ್ಞ ॥ ೧೮೪೬ ॥

ಕಚ್ಚುವ ಕೆಲೆಯುವ । ಮುಚ್ಚುಳದಲುಂಬುವ ।
ಮೆಚ್ಚಿನ ಮಾತನಾಡುವ ಹೆಣ್ಣಾನು ।
ನೆಚ್ಚಬೇಡೆಂದ ಸರ್ವಜ್ಞ ॥ ೧೮೪೭ ॥

ಸಂದ ಲೋಭಿಯು ಧನವ । ಬಂದು ಮುದ್ದುವ ತೆರದಿ ।
ಕಂದನ ತಂದೆಯೆತ್ತಿ ಮುದ್ದಲು ಜಾರೆ ।
ಹಿಂದೆ ನಗುತಿಹಳು ಸರ್ವಜ್ಞ ॥ ೧೮೪೮ ॥

ಚೊಕ್ಕವಿರುವಳ ಕೂಟ । ಅಕ್ಕರದ ಮನೆಯಂತೆ ।
ಚೊಕ್ಕವಿಲ್ಲದಳ ನೆರೆಕೂಟ ಗಾಣದಿ ।
ಸಿಕ್ಕು ಸತ್ತಂತೆ ಸರ್ವಜ್ಞ ॥ ೧೮೪೯ ॥

ಮುಂಡೆ ಬಾಯಿಯು ಹೇತ । ಕುಂಡೆಯಂತಿರಬೇಕು ।
ಮುಂಡೆ ಮುಂಬಲ್ಲ ಸುಲಿದರಿನ್ನೊಬ್ಬನ ।
ಕೊಂಡಳೆಂದರಿಗು ಸರ್ವಜ್ಞ ॥ ೧೮೫೦ ॥

ಮುಂಡೆಯು ಮಂಡೆ । ನೂಲುಂಡೆಯಂತಿರಬೇಕು ।
ಮುಂಡೆ ಬೈತಲೆಯ ತೆಗೆದಿಹರೆ ಮಿಂಡನ ।
ಕೊಂಡಳೆಂದರಿಗು ಸರ್ವಜ್ಞ ॥ ೧೮೫೧ ॥

ಮುಂಡೆ ಮುಖ ಮುದಿನಾಯ । ಕುಂಡೆಯಂತಿರಬೇಕು ।
ಮುಂಡೆ ಅಡಿಕೆಲೆಯನಗಿದಿಹರೆ ಕಂಡವರ ।
ಹೆಂಡತಿಯೆಂದ ಸರ್ವಜ್ಞ ॥ ೧೮೫೨ ॥

ನಕ್ಕಿಹರೆ ಮುಂಡೆಯರು । ತಕ್ಕರೆಂದರಿಯುವದು ।
ನಕ್ಕವರ ಕಂಡು ನಕ್ಕರೆ ತರುಣರಿಗೆ ।
ಸಿಕ್ಕರೆಂದರಿಗು ಸರ್ವಜ್ಞ ॥ ೧೮೫೩ ॥

ನುಡಿಯಿಲ್ಲದ ಮಂತ್ರ । ಗಿಡವಿಲ್ಲದ ಮದ್ದು ।
ಒಡನಿದ್ದ ವೈದ್ಯ ನೋಡಿದರೆ ಆ ಬೇನೆ ।
ತಡೆಯದೆ ಪೋಕು ಸರ್ವಜ್ಞ ॥ ೧೮೫೪ ॥

ಚಿಕ್ಕಾಡಿ ತಗುಣಿಯೂ । ರಕ್ಕಸರು ಜಾರೆಯರು ।
ಒಕ್ಕಲಿಕ್ಕುವರು ಇರುಳೆಲ್ಲ, ಬೆಳಗಾಗಿ ।
ಸುಕ್ಕಿದಂತಿಹರು ಸರ್ವಜ್ಞ ॥ ೧೮೫೫ ॥

ತುಡುಗುಣಿಯು ಗಂಡನ । ಒಡತನವ ಬಲ್ಲಳೇ ? ।
ಕಡನ ತಂದಿಕ್ಕಿ ಕುದಿಸಿ ತುಪ್ಪವ ಬೆರಸಿ ।
ಹೊಡೆದು ಕುಳ್ಳಿಹಳು ಸರ್ವಜ್ಞ ॥ ೧೮೫೬ ॥

ತಿನಸುಗೂಳಿಯು ಬಾಳು । ಕನಸಿನಲಿ ಉಂಡಂತೆ ।
ತೊನಸಿ ಮುದಿ ಎತ್ತು ಹರಿ ತಿಂದು, ಹುಳಗಳನು ।
ಜನಿಸಿ ಬಿಟ್ಟಂತೆ ಸರ್ವಜ್ಞ ॥ ೧೮೫೭ ॥

ಗಂಡೆಗಂಬಲಿಯಿಕ್ಕಿ । ಗಂಡುಗರಣೆಯ ನುಂಗಿ ।
ಗಂಡ ಬಂದಾಗ ನರಳುವ ಹೆಣ್ಣಾನು ।
ಗುಂಡಿಗಿಕ್ಕೆಂದ ಸರ್ವಜ್ಞ ॥ ೧೮೫೮ ॥

ನಲ್ಲನೊಲ್ಲೆಂಬುವಳು । ಬೆಲ್ಲ ಬೇಕೆಂಬುವಳು ।
ನೆಲ್ಲ ಹುಲ್ಲಂತೆ ಬಳಕುವ ತುಡುಗುಣಿಗೆ ।
ಎಲ್ಲಿಹುದು ರೋಗ ಸರ್ವಜ್ಞ ॥ ೧೮೫೯ ॥

ಒಬ್ಬಗಿಬ್ಬರು ಮದ್ದು । ಉಬ್ಬೆಗೆ ಹಿಮ ಮದ್ದು ।
ಕೊಬ್ಬಿದ ಕರಿಗೆ ಹರಿ ಮದ್ದು, ಜಾರೆಗೆ ।
ಗಬ್ಬವೇ ಮದ್ದು ಸರ್ವಜ್ಞ ॥ ೧೮೬೦ ॥

ಬಿದ್ದ ಮೊಲೆಯುವಳು ತಾ । ನೆದ್ದೋಡಿ ಬರುವಾಗ ।
ಎದ್ದೆದ್ದು ಬದಿಯ ಬಡಿಯುತ್ತ ಹಾರುವ ।
ಹದ್ದಿನಂತಿಹಳು ಸರ್ವಜ್ಞ ॥ ೧೮೬೧ ॥

ಉದ್ದ ವೊಲೆ ಜಾರೆ ತಾ । ಮುದ್ದು ಮುದುಕನ ಕೂಡೆ ।
ಬಿದ್ದ ವೊಲೆ ಎದ್ದು ಬಡಿವಾಗ ಹಾಳೂರ ।
ಹದ್ದಾಡಿದಂತೆ ಸರ್ವಜ್ಞ ॥ ೧೮೬೨ ॥

ಮುದುಕಿ ಮಿಂಡನ ಮೆಚ್ಚಿ । ಕುದಿಹಕ್ಕೆ ಒಳಗಾಗಿ ।
ಹದದ ತೆಂಗಾಯ ನರಿ ತಿಂದು ಓಗಡಿನ ।
ಬೆದರು ಪಿಡಿದಂತೆ ಸರ್ವಜ್ಞ ॥ ೧೮೬೩ ॥

ಉಂಡುಂಡು ಮಲಗುವ । ಭಂಡವನು ಬೊಗಳುಗ ।
ಕಂಡವರ ಬಯಸಿ ಮಿಡುಕುವ ಹೆಂಗಸರು ।
ದಿಂಡೆಯರು ಕಾಣೊ ! ಸರ್ವಜ್ಞ ॥ ೧೮೬೪ ॥

ಮಿಂಡೆಯ ಗಂಡ ತಾ । ದಂಡಿಗೆ ಹೋಗಿಹರೆ ।
ಹಿಂಡಿಯ ಹೆಡಿಗೆಗೆ ಕೋಣನ ತಂದು ಕಣು ।
ಗಂಡು ಹೊಡೆದಂತೆ ಸರ್ವಜ್ಞ ॥ ೧೮೬೫ ॥

ಬಡವನ ಹೆಂಡತಿಯು । ಕಡು ಚೆಲುವೆಯಾದರೆ ।
ನಡು ಬೀದಿಯೊಳಗೆ ದವನವನು ಬಿತ್ತಲು ।
ಮುಡಿಯದವರಾರು ? ಸರ್ವಜ್ಞ ॥ ೧೮೬೬ ॥

ಬಡವನ ಸತಿಯು ತಾ । ಕಡು ನೀರೆಯಾದರೆ ।
ಹೆಡಿಗೆ ಲಡ್ಡುಗೆಯ ಹೊರಗಿರಿಸಿ ಹಸುಳೆಗಳ ।
ತಡೆಯ ಬಿಟ್ಟಂತೆ ಸರ್ವಜ್ಞ ॥ ೧೮೬೭ ॥

ಜಾಣೆಯ ಪತಿಯು ಪರ । ರಾಜ್ಯಕ್ಕೆ ಹೋಗಿಹರೆ ।
ಓಣಿಯ ಕುದುರೆ ಕರತಂದು ಕಡಲೆಗೆ ।
ನೇಣು ಸರಿದಂತೆ ಸರ್ವಜ್ಞ ॥ ೧೮೬೮ ॥

ಜಾರೆಯ ಗಂಡ ತಾ । ಬೇರೂರ ಸಾರಿದರೆ ।
ಆರಿದೋಗರಕೆ ವೊಸರಿಕ್ಕಿ ಕಾಗೆಗೆ ।
ತೋರಿಕೊಟ್ಟಂತೆ ಸರ್ವಜ್ಞ ॥ ೧೮೬೯ ॥

ಮಡದಿಯೂ ಪುರುಷನೂ । ನಡೆದೊಡನೆ ಬರುವಾಗ ।
ಅಡಕೊತ್ತು ಮರೆಸಿ ತರಹೋಗಿ ಪಾಪವನು ।
ನಡೆಸಿದುದ ಕಂಡೆ ಸರ್ವಜ್ಞ ॥ ೧೮೭೦ ॥

ನಾರಿಯು ನಲ್ಲ ತಾ । ಊರಿಂಗೆ ಹೋಗಿಹರೆ ।
ನಾರಿ ಸಂಬಳಿಗೆ ಮರೆದಲ್ಲಿ ಕನ್ನದ ।
ಸೂರೆ ಹೋಗಿತ್ತು ಸರ್ವಜ್ಞ ॥ ೧೮೭೧ ॥

ಕರು ಸತ್ತ ಎಮ್ಮೆ ತಾ । ಕರುವಿಂಗೆ ಮೊರೆವಂತೆ ।
ಕರುವಗಲೆ ಕೋಣಂಗೆ ಮೊರೆವುದು, ಮೋಹದ ।
ತೆರನೆಲ್ಲ ಒಂದೆ ಸರ್ವಜ್ಞ ॥ ೧೮೭೨ ॥

## ೨೯. ವೇಶ್ಯಾಸ್ತ್ರೀ ಪದ್ಧತಿ

### ಲಕ್ಷಣಭೇದ

ಆಲಕ್ಕೆ ಹೂವಿಲ್ಲ । ಸಾಲಕ್ಕೆ ಕೊನೆಯಿಲ್ಲ ।
ಜಾಲಿಯ ಗಿಡಕೆ ಗಂಧಿಲ್ಲ, ದೇವನು ।
ಸೂಳೆಗಿಲ್ಲೆಂದ ಸರ್ವಜ್ಞ ॥ ೧೮೭೩ ॥

ಅತ್ತೆ ಮಕರಳಿಲ್ಲ । ಕತ್ತೆಗೆ ಕೋಡಿಲ್ಲ ।
ಹತ್ತಿಯ ಹೊಲಕೆ ಗಿಳಿಯಿಲ್ಲ, ಸೂಳೆಗೆ ।
ಸತ್ಯವಿಲ್ಲೆಂದ ಸರ್ವಜ್ಞ ॥ ೧೮೭೪ ॥

ಕತ್ತೆಯಲಿ ಗುಣವಿಲ್ಲ । ಕತ್ತಿಗೆ ದಯವಿಲ್ಲ ।
ಬತ್ತಿದ ಕೆರೆಗೆ ತುರುವಿಲ್ಲ, ಸೂಳೆಯರೊ ।
ಳುತ್ತಮರು ಇಲ್ಲ ಸರ್ವಜ್ಞ ॥ ೧೮೭೫ ॥

ಅರಳೆಯಲಿ ರಸವಿಲ್ಲ । ಕರುಳಿಗೆ ನಾಣ್ಚಿಲ್ಲ ।
ಮರುಳನಿಗಾರು ಇದಿರಿಲ್ಲ, ಸೂಳೆಯಲಿ ।
ಸರಲವೆ ಇಲ್ಲ ಸರ್ವಜ್ಞ ॥ ೧೮೭೬ ॥

ಕಾಲನಿಗೆ ದಿನವಿಲ್ಲ । ಸಾಲಕ್ಕೆ ಕೊನೆಯಿಲ್ಲ ।
ಕಾಲಿಲ್ಲದವಗೆ ಬಲವಿಲ್ಲ, ಸೂಳೆಗೆ ।
ಶೀಲವೇ ಇಲ್ಲ ಸರ್ವಜ್ಞ ॥ ೧೮೭೭ ॥

ಹೊರಸಿಂಗೆ ತೆನೆಯಿಲ್ಲ । ಕೆರಸಿಂಗೆ ಕಾಲಿಲ್ಲ ।
ಅರಸಿನ ಮನಕೆ ನಿಜವಿಲ್ಲ, ಸೂಳೆಗೆ ।
ಪುರುಷನೇ ಇಲ್ಲ ಸರ್ವಜ್ಞ ॥ ೧೮೭೮ ॥

ಬಾಳೆಗೆ ಮುಳ್ಳಿಲ್ಲ । ಕೋಳಿಗೆ ಮೊಲೆಯಿಲ್ಲ ।
ಕಾಳರಕ್ಕಸಗೆ ಭಯವಿಲ್ಲ, ಸೂಳೆಗೆ ।
ಕೀಳುಮೇಲಿಲ್ಲ ಸರ್ವಜ್ಞ ॥ ೧೮೭೯ ॥

ಕೋತಿಗೆ ಮತಿಯಿಲ್ಲ । ಮಾತಿಗೆ ಕೊನೆಯಿಲ್ಲ ।
ಸೋತು ಹೋದವಗೆ ಬಲವಿಲ್ಲ, ಸೂಳೆಗೆ ।
ನೀತಿಯೇ ಇಲ್ಲ ಸರ್ವಜ್ಞ ॥ ೧೮೮೦ ॥

ಎಲೆಗೆ ಬೀಜಗಳಿಲ್ಲ । ಮೊಲೆಗೆ ಎಲುವುಗಳಿಲ್ಲ ।
ಅಲಗಲಗು ಹಳಚಿ ಮಸೆಯಿಲ್ಲ, ಸೂಳೆಗೆ ।
ಕುಲಶೀಲವಿಲ್ಲ ಸರ್ವಜ್ಞ ॥ ೧೮೮೧ ॥

ಅರಳಿಮರ ಹೂವಿಲ್ಲ । ಕುರುಳು ಕೋಡಗಕಿಲ್ಲ ।
ಮರಣಕಾಲಕ್ಕೆ ಮದ್ದಿಲ್ಲ, ಸೂಳೆಗೆ ।
ಕರುಣವೇ ಇಲ್ಲ ಸರ್ವಜ್ಞ ॥ ೧೮೮೨ ॥

ಮತಿಯಿಲ್ಲ ಮರುಳಂಗೆ । ಗತಿಯಿಲ್ಲ ಬಡಗಂಗೆ ।
ಸ್ತುತಿಯಿಲ್ಲ ಸತತ ದುಡಿವಂಗೆ, ಸೂಳೆಗೆ ।
ವ್ರತವೆಂಬುದಿಲ್ಲ ಸರ್ವಜ್ಞ ॥ ೧೮೮೩ ॥

ಆವಿಂಗೆ ಹಾಲಿಲ್ಲೆ ? । ಹಾವಿಂಗೆ ವಿಷವಿಲ್ಲೆ ? ।
ಆವಾವ ಮರಕೆ ನೆರಳಿಲ್ಲೆ ? ಸೂಳೆಗೊಲಿ ।
ದೇವವರು ಇಲ್ಲೆ ? ಸರ್ವಜ್ಞ ॥ ೧೮೮೪ ॥

ಆವಿಂಗೆ ಹಾಲುಂಟು। ಹಾವಿಂಗೆ ವಿಷವುಂಟು।
ಆವಾವ ಮರಕೆ ನೆಳಲುಂಟು ಸೂಳೆತನ।
ಗೀವವರಿಗುಂಟು ಸರ್ವಜ್ಞ ॥ ೧೮೮೫ ॥

ತುಂಬೆಯ ಸೊಪ್ಪಿಂಗೆ। ಇಂಗೇಕೆ ಮೆಣಸೇಕೆ?।
ಶೃಂಗಾರವೇಕೆ ಬಡವಂಗೆ, ಸೂಳೆಗೆ।
ನಂಬುಗೆಯದೇಕೆ? ಸರ್ವಜ್ಞ ॥ ೧೮೮೬ ॥

ವಿವಿಧ ದೃಷ್ಟಾಂತಗಳು

ಹಕ್ಕಿಯು ಸೂಳೆಯು। ರಕ್ಕೆರಡು ಒಂದಯ್ಯ।
ಹಕ್ಕಿ ಹಾಲ್ದೆನೆಯ ಹರಿತಿಂದು ಕಂಕಿಯನು।
ಇಕ್ಕಿ ಹೋದಂತೆ ಸರ್ವಜ್ಞ ॥ ೧೮೮೭ ॥

ಕುದುರೆಯ ಸೂಳೆಯು। ಚದುರೆರಡು ಒಂದಯ್ಯ।
ಕುದುರೆ ಕಡಲೆಯನು ನಲೆ ತಿಂದು ಬಕ್ಕಣವ।
ನೊದರಿ ಬಿಟ್ಟಂತೆ ಸರ್ವಜ್ಞ ॥ ೧೮೮೮ ॥

ನೊಣನ ಸೂಳೆಯು। ಜೀನನೆರಡೊಂದಯ್ಯ।
ಈನನದ ಹೆಣನ ಹರಿತಿಂದು ಹಂದರವ।
ತಾನು ಬಿಟ್ಟಂತೆ ಸರ್ವಜ್ಞ ॥ ೧೮೮೯ ॥

ಕೀಡೆಯೂ ಸೂಳೆಯೂ। ನೋಡಲೆರಡೊಂದಯ್ಯ।
ಕೀಡೆ ಹಸುರೆಲೆಯ ಹರಿತಿಂದು ಕಂಬಿಯನು।
ಈಡಾಡಿದಂತೆ ಸರ್ವಜ್ಞ ॥ ೧೮೯೦ ॥

ಹರಗೋಲ ಸೂಳೆಯು। ತೆರನೆರಡು ಒಂದಯ್ಯ।
ಹರಗೋಲನೇರಿದವನಿಳಿಯೆ ಬೇರೊಬ್ಬ।
ಹರಿದೇರುವಂತೆ ಸರ್ವಜ್ಞ ॥ ೧೮೯೧ ॥

ಬಳ್ಳಿಯು ಬೆಲೆವೆಣ್ಣು। ಒಳ್ಳಿತೆಂದೆನಬೇಡ।
ಬಳ್ಳಿ ಹೆಮ್ಮರನ ಬಿಗಿದಪ್ಪಿ ಬೇರೊಂದ।
ಕಳ್ಳಾಡಿದಂತೆ ಸರ್ವಜ್ಞ ॥ ೧೮೯೨ ॥

## ಸೂಳೆಗೆ ಇವೆಲ್ಲ ಏಕೆ ?

ಹದ್ದು ಹಾವಿಗೆ ಏಕೆ ? । ಇದ್ದಲಿಗೆ ಮಡಿಯೇಕೆ ? ।
ಗುದ್ದಲಿಗೆ ಹೊನ್ನ ಹಿಡಿಯೇಕೆ ಸೂಳೆಗೆ ।
ನಿದ್ದೆಗಣ್ಣೇಕೆ ? ಸರ್ವಜ್ಞ ॥ ೧೮೯೩ ॥

ಹಂದಿಗಂದಣವೇಕೆ । ಅಂಧಕಗೆ ನೊಡರೇಕೆ ? ।
ಕುಂದು ಬಂದವಗೆ ಸೊಬಗೇಕೆ ? ಸೂಳೆಗೆ ।
ಮಂದತನವೇಕೆ ? ಸರ್ವಜ್ಞ ॥ ೧೮೯೪ ॥

ನಲ್ಲಗಂಬಲಿಯೇಕೆ । ಬಿಲ್ಲೇಕೆ ಶ್ರವಣಂಗೆ ? ।
ನಲ್ಲೆ ತಾನೇಕೆ ಮುದುಕಂಗೆ ? ಸೂಳೆಗೆ ।
ಒಲ್ಲದವನೇಕೆ ? ಸರ್ವಜ್ಞ ॥ ೧೮೯೫ ॥

ಅಲ್ಲದ ಮಾತೇಕೆ । ಸಲ್ಲದ ಸುತನೇಕೆ ? ।
ಹುಲ್ಲಿಗೆ ಹುಲ್ಲಿಯ ಕೆಳೆಯೇಕೆ ? ಸೂಳೆಗೆ ।
ಹಲ್ಲುದ್ದವೇಕೆ ? ಸರ್ವಜ್ಞ ॥ ೧೮೯೬ ॥

ಉಬ್ಬು ಬಡವಗೆ ಏಕೆ । ಕಬ್ಬೇಕೆ ಬೋಂಡಂಗೆ ? ।
ನಿಬ್ಬಣವು ಏಕೆ ಕುರುಡಂಗೆ ? ಸೂಳೆಗೆ ।
ಹುಬ್ಬುಗಣ್ಣೇಕೆ ? ಸರ್ವಜ್ಞ ॥ ೧೮೯೭ ॥

## ಸೂಳೆಗೆ ಇವು ಅಯೋಗ್ಯ

ಮೆಳೆಗೆ ಹಂದರ ಹೊಲ್ಲ । ಗಿಳಿಗೆ ಬಾವುಗ ಹೊಲ್ಲ ।
ಸುಳಿಗಾಳಿ ಹೊಲ್ಲ ನೊಡರಿಂಗೆ, ಸೂಳೆಗೆ ।
ಡೊಳೆಗಾಲು ಹೊಲ್ಲ ಸರ್ವಜ್ಞ ॥ ೧೮೯೮ ॥

ಹರಿದರಿವೆ ಉಡಹೊಲ್ಲ । ಮುರುವಾಳನಿರಹೊಲ್ಲ ।
ಮುರಿದಿರ್ದ ಹಲ್ಲ ನಗೆ ಹೊಲ್ಲ, ಸೂಳೆಗೆ ।
ಹೆರಿಗೆಯೇ ಹೊಲ್ಲ ಸರ್ವಜ್ಞ ॥ ೧೮೯೯ ॥

ಒಂದೆಲಗ ಮೆಲಹೊಲ್ಲ। ನಿಂದಕರ ನೆರೆಹೊಲ್ಲ।
ತಂದೆಯನು ಜರಿವ ಮಗಹೊಲ್ಲ, ಸೂಳೆಯ।
ದಂದುಗವೆ ಹೊಲ್ಲ ಸರ್ವಜ್ಞ ॥ ೧೯೦೦ ॥

ಕರಿಯ ಹೆಂಗಸು ಹೊಲ್ಲ। ನೆರಕೆಯ ಮನೆಹೊಲ್ಲ।
ಕರಕಾದ ಕೂಳನುಣಹೊಲ್ಲ, ಸೂಳೆಗೆ।
ಹುರುಕಾಗ ಹೊಲ್ಲ ಸರ್ವಜ್ಞ ॥ ೧೯೦೧ ॥

ನುಚ್ಚುಗೂಳುಣ ಹೊಲ್ಲ। ಚುಚ್ಚುಕರ ನೆರೆ ಹೊಲ್ಲ।
ಮಚ್ಚರದಿ ನಡೆವ ಮಗ ಹೊಲ್ಲ, ಸೂಳೆಗೆ।
ಮುಚ್ಚುಗಣ್ಹೊಲ್ಲ ಸರ್ವಜ್ಞ ॥ ೧೯೦೨ ॥

ಸೂಳೆಗೆ ಇವು ಲೇಸು

ಬೆಳೆಗೆ ಮಳೆ ಬರ ಲೇಸು। ಗಿಳಿಗೆ ಹಂಜರ ಲೇಸು।
ಸುಳಿಗಾಳಿ ಲೇಸು ಬೆಮರಿಂಗೆ, ಸೂಳೆಗೆ।
ಗಳಿಕೆ ಲೇಸೆಂದ ಸರ್ವಜ್ಞ ॥ ೧೯೦೩ ॥

ಬೆಲ್ಲದಂಬಲಿ ಲೇಸು। ಬಿಲ್ಲು ಶಬರಗೆ ಲೇಸು।
ಚಲ್ಲಾಟ ಲೇಸು ಹರೆಯಲ್ಲಿ ಸೂಳೆಗೆ।
ಗುಲ್ಲಾಟ ಲೇಸು ಸರ್ವಜ್ಞ ॥ ೧೯೦೪ ॥

ಸೂಳೆಯ ಆಶೆಗಳು

ಕುರುಬಂಗೆ ಕುರಿಯಾನೆ। ಮರಿಗಳಿಗೆ ಮೊಲೆಯಾನೆ।
ಸರುವರಿಗೆ ಮಳೆಯು ಬರುವಾನೆ, ಸೂಳೆಗೆ।
ಬೆರೆದಾಟದಾನೆ ಸರ್ವಜ್ಞ ॥ ೧೯೦೫ ॥

ತೋಟ ತೋಟಿಗಗಾನೆ। ಕೋಟೆ ಮನ್ನೆಯಗಾನೆ।
ನಾಟಿದ ಬೆಳೆಗೆ ಮಳೆಯಾನೆ, ಸೂಳೆಗೆ।
ನೋಟಗಳ ಆನೆ ಸರ್ವಜ್ಞ ॥ ೧೯೦೬ ॥

ಬಿಲ್ಲಾಸೆ ಬೇಡಂಗೆ। ಕೊಲ್ಲಾನೆ ಕಟುಗಂಗೆ।
ಬೆಲ್ಲದ ಆಸೆ ಬಾಲರಿಗೆ, ಸೂಳೆಗೆ।
ಚೆಲ್ಲಾಟದಾಸೆ ಸರ್ವಜ್ಞ ॥ ೧೯೦೭ ॥

ಒಕ್ಕಲಿಗೆ ಊರಾಸೆ। ಮಕ್ಕಳಿಗೆ ಮನೆಯಾಸೆ।
ಜಕ್ಕವಕ್ಕಿಗೆ ಕೊಳದಾಸೆ, ಸೂಳೆಗ।
ರೊಕ್ಕದ ಆಸೆ ಸರ್ವಜ್ಞ ॥ ೧೯೦೮ ॥

ಬಂಡಿಗೆ ಬಳೆಯಾಸೆ। ಮಿಂಡಿಗೆ ವೋಲೆಯಾಸೆ।
ಗಂಡನುಳ್ಳಳಿಗೆ ಗುಣದಾಸೆ, ಸೂಳೆಗೆ।
ಗಂಡುಗಳಾಸೆ ಸರ್ವಜ್ಞ ॥ ೧೯೦೯ ॥

ಸೂಳೆಯ ಜಾಣತನ

ಸಸಿಯುನೊಕ್ಕಲಿಗನು। ಹೊಸೆವಾಕೆ ಬೆಣ್ಣೆಯನು।
ಆಸಗ ಸೀರೆಯನು ಅರಿವಂತೆ, ಸೂಳೆ ತಾ।
ಹುಸಿವರರಿದಿಹಳು ಸರ್ವಜ್ಞ ॥ ೧೯೧೦ ॥

ಬಳ್ಳಿ ತೋಟಿಗ ಬಲ್ಲ। ಎಳ್ಳು ಗಾಣಿಗ ಬಲ್ಲ।
ಕಳ್ಳರನು ಬಲ್ಲ ತಳವಾರ, ಸೂಳೆ ಹಣ।
ನುಳ್ಳನರಿದಿಹಳು ಸರ್ವಜ್ಞ ॥ ೧೯೧೧ ॥

ನೆಲೆಯನಂಬಿಗ ಬಲ್ಲ। ಬಲೆಯ ಬೋನಿಗ ಬಲ್ಲ।
ಮಲೆಯ ಸಂಚಾರಿ ನೆರೆ ಬಲ್ಲ, ಸೂಳೆತನ।
ಗೊಲಿವನರಿದಿಹಳು ಸರ್ವಜ್ಞ ॥ ೧೯೧೨ ॥

ಬೆಲೆಯ ಚಿನ್ನಿಗ ಬಲ್ಲ। ನೆಲೆಯನಂಬಿಗ ಬಲ್ಲ।
ಮಲೆಯ ಬೆಂಚದಿಂದರಿವಂತೆ ಸೂಳೆ ನೆರೆ।
ಹೊಲಬನರಿದಿಹಳು ಸರ್ವಜ್ಞ ॥ ೧೯೧೩ ॥

ವಾನರನು ಮರವನ್ನ। ನೋನ ತನ್ನೊಡೆಯನ್ನ।
ಆನೆ ಮಾಹುತನ ಅರಿವಂತೆ ಸೂಳೆ ನೆರೆ।
ದಾನಿಯರಿದಿಹಳು ಸರ್ವಜ್ಞ ॥ ೧೯೧೪ ॥

ಮದಕರಿಯು ಮಾಹುತನ। ಕುದುರೆ ತಾ ರಾಹುತನ।
ಹದುಳವನರಿದು ನಡೆವಂತೆ ಸೂಳೆತನ।
ಗೊದುಗುವರನರಿಗು ಸರ್ವಜ್ಞ ॥ ೧೯೧೫ ॥

### ಸೂಳೆಯು ಅಪಕಾರಿ

ಬಂಧನದ ಆನೆಯದು । ವಿಂಧ್ಯವನು ನೆನೆವಂತೆ ।
ವಿಂಧ್ಯವಾನೆಯನು ನೆನೆವುದೆ ? ಆದವರ ।
ನೆಂದು ನೆನೆಯಳು ಸರ್ವಜ್ಞ ॥ ೧೯೧೬ ॥

ಹದ್ದು ಹಾವನು ನುಂಗು । ಮದ್ದು ಕುತ್ತವ ನುಂಗು ।
ನಿದ್ದೆಗೈಯುವನ ಮೃತಿ ನುಂಗು, ಸೂಳೆ ತಾ ।
ಹೊದ್ದಿದರ ನುಂಗು ಸರ್ವಜ್ಞ ॥ ೧೯೧೭ ॥

### ಸೂಳೆಯು ಬಾಯಿ ಶುದ್ಧ

ಕಾಳಿಯ ಧ್ವನಿ ಶುದ್ಧ । ಸೂಳೆಯ ತುಟಿ ಶುದ್ಧ ।
ಏಳ್ಗೆಯಿಂ ಹರಿವ ಜಲಶುದ್ಧ, ಸಗ್ಗಳೆಯ ।
ಜೂಳಿ ತಾ ಶುದ್ಧ ಸರ್ವಜ್ಞ ॥ ೧೯೧೮ ॥

ಬೆಲೆವೆಣ್ಣಿನಾ ಬಾಯಿ । ಹಲವೆಂಜಲೆನಬೇಡ ।
ಹುಳಿಮುಟ್ಟಿ ಕಿಲುಬು ಕೆಡುವಂತೆ ಬಾಯುವಳ ।
ಎಲೆ ಮೆಲಲು ಶುದ್ಧ ಸರ್ವಜ್ಞ ॥ ೧೯೧೯ ॥

### ಬಡವಗೆ ಸೂಳೆ ಒಲಿಯುವದು ಕ್ವಚಿತ

ಒಳ್ಳೆಬಳ್ಳಿಯು ಬಯಸಿ । ಕಳ್ಳಿಯನು ಹಬ್ಬಿದೊಲ್ ।
ಕಳ್ಳಗೆ ರಂಭೆಯೊಲಿದಿಹರೆ ಅದು ಮುನ್ನಿ ।
ನೆಳ್ಳಿನ ಋಣವು ಸರ್ವಜ್ಞ ॥ ೧೯೨೦ ॥

### ಹಣವಿದ್ದರೆ ಸೂಳೆ

ಅಂಬು ಬಿಲ್ಲಿಗವಶ್ಯ । ಶಂಭು ಸಹಜಗವಶ್ಯ ।
ನಂಬಿಗೆಯುವಶ್ಯ ಹರಡಂಗೆ, ಸೂಳೆಗೆ ।
ಚೆಂಬೊನ್ನವಶ್ಯ ಸರ್ವಜ್ಞ ॥ ೧೯೨೧ ॥

ಹಣವ ಕಂಡಾಕ್ಷಣವೆ । ಗುಣವಂತೆಯಾಗುವಳು ।
ಹಣ ಹೋದ ವಿಟನು ಸಾರಿದರೆ ಸೂಳೆಗೆ ।
ಹೆಣನ ಕಂಡಂತೆ ಸರ್ವಜ್ಞ ॥ ೧೯೨೨ ॥

ಹಣವ ಕಂಡರೆ ಬಾಯ | ಹೆಣ ಬಿಡುವದೆಂದಿರಲು |
ಹಣ ನೋಡಿ ಅಣಿಯ ಮಾಡುವಳು, ಇಲ್ಲದಿರೆ |
ಒಣಮಾತಿನವಳು ಸರ್ವಜ್ಞ || ೧೯೨೩ ||

ಬಿಕ್ಕು ಬಿಕ್ಕನೆ ತೋರಿ | ಇಕ್ಕುವಳು ಕಣ್ಣೀರ |
ಸಿಕ್ಕಿದಳು ಸೂಳೆಯೆನಬೇಡ, ಅದು ರೊಕ್ಕ |
ತಕ್ಕೊಂಬುವುದಕೆ ಸರ್ವಜ್ಞ || ೧೯೨೪ ||

ವಾರಾಂಗನೆಯರಿಂಗೆ | ಯಾರೆಂಜಲೇನಯ್ಯ |
ಊರೆಂಜಲನ್ನು ಚಪ್ಪರಿವ ಶುನಕಂಗೆ |
ಯಾರೆಂಜಲೇನು ಸರ್ವಜ್ಞ || ೧೯೨೫ ||

ಹಂಡ ಕೆಂದಗಳಿಲ್ಲ | ಹುಂಡಿ ಕಾರಿಗಳಿಲ್ಲ |
ಗಂಡರಿದ್ದೊಬ್ಬ ಮಗನಿಲ್ಲ, ಸೂಳೆಗೆರ |
ಡಂಡಿನಾರಂಬ ಸರ್ವಜ್ಞ || ೧೯೨೬ ||

ಅಡ್ಡಕೊಂಬಾಸೂಳೆ | ಗಡ್ಡವೆಂದೆನಬೇಡ |
ಗಡ್ಡ ಕಾಲಗುರು, ಅಡಕೆಲೆಯು, ಹೂವು ಮ |
ತ್ತಡ್ಡಮುಟ್ಟುವವು ಸರ್ವಜ್ಞ || ೧೯೨೭ ||

ಗದ್ದೆ ಹೊಲಗಳು ಇಲ್ಲ | ಸಿದ್ದಾಯ ಮುನ್ನಿಲ್ಲ |
ಉದ್ಯೋಗ ಗೆಯ್ವ ಮಗನಿಲ್ಲ, ಸೂಳೆಗೆ |
ಬದ್ದಿಯಾರಂಬ ಸರ್ವಜ್ಞ || ೧೯೨೮ ||

ಸೂಳೆಯನ್ನು ರಕ್ಷಿಸುವದು

ಮಾತು ಮಾತನೇ ಆಡಿ | ಮಾತಿನಲಿ ಮರೆಮಾಡಿ |
ಮಾತಿನೊಳು ಹಣವ ಮರಸಿ ತಾನೆದ್ದು ಹೋ |
ದಾತನೇ ಜಾಣ ಸರ್ವಜ್ಞ || ೧೯೨೯ ||

ಮಾತನೆ ಉಣ ಕೊಟ್ಟು | ಮಾತನೆ ಉಡಕೊಟ್ಟು |
ಮಾತಿನ ಮುತ್ತ ತೊಡಕೊಟ್ಟು ಬೆಳಗೆ ಹೋ |
ದಾತನೇ ಜಾಣ ಸರ್ವಜ್ಞ || ೧೯೩೦ ||

## ಮೂರ್ಖನ ವರ್ತನ

ರಚ್ಚೆಗೆಲೆ ಸೂಳೆಯನು । ನೆಚ್ಚುವನು ಕಡು ಹೆಡ್ಡ ।
ನಿಚ್ಚಲು ನಡೆವ ಪಥಕೊಲಿದು ಹೋರುವನು ।
ಹುಚ್ಚ ಕಾಣಯ್ಯ ಸರ್ವಜ್ಞ ॥ ೧೯೩೧ ॥

ಮಾರಿಕೊಂಬುವಳನ್ನು । ಮೀರಿ ನಂಬುವನೆಗ್ಗ ।
ಹಾರುವ ಹುಳವು ಹಣ್ಣೆಂದು ನೊಡೆರಿಂಗೆ ।
ಹಾರಿ ಸತ್ತಂತೆ ಸರ್ವಜ್ಞ ॥ ೧೯೩೨ ॥

ನೀರಿಲ್ಲದ ಕೆರೆಗೆ । ಊರಿಲ್ಲದ ಎರೆಗೆ ।
ಸೂರೆಹೋಗಿದ್ದ ಸಂತೆಗೆ, ಸೂಳೆಗೆ ।
ಸಾರುವನು ಹೆಡ್ಡ ಸರ್ವಜ್ಞ ॥ ೧೯೩೩ ॥

ಊರುಂಬ ಬಾವಿಂಗೆ । ಊರ ಹೆಬ್ಬಾಗಲಿಗೆ ।
ಆರವೆಯ ಮರದ ನೆರಳಿಂಗೆ ಸೂಳೆಗೆ ।
ಹೋರುವನು ಹೆಡ್ಡ ಸರ್ವಜ್ಞ ॥ ೧೯೩೪ ॥

ಅಪ್ಪಿ ಸಪ್ಪಾದವಳ । ನಪ್ಪುವನು ಕಡು ಹೆಡ್ಡ ।
ತುಪ್ಪವುಂಡೊಗೆದ ಎಲೆ ನೆಕ್ಕಿ ನಾಯಿ ಬಾಯ್ ।
ಚಪ್ಪರಿಸಿದಂತೆ ಸರ್ವಜ್ಞ ॥ ೧೯೩೫ ॥

## ಸೂಳೆಯು ಬೇಡ

ಒಡವೆಯನು ಕೊಟ್ಟರಾ । ಬಡವ ಬಲ್ಲಿದನೆಂದು ।
ಒಡವೆ ಸರಿ ಸುಖವ ಕೊಡುವಳೇ ? ಸೂಳೆಯು ।
ಗೊಡವೆಯೇ ಬೇಡ ಸರ್ವಜ್ಞ ॥ ೧೯೩೬ ॥

ಒಡವೆ ಕೊಟ್ಟಾ ಪುರುಷ । ಬಡವನೆಂದರಿದಿಹಳೆ ? ।
ತೊಡರಿಸುತ ಕೊಡಹಿ ಕಳುಹುವ ಸೂಳೆಯನು ।
ತೊಡಚುವವನೆಗ್ಗ ಸರ್ವಜ್ಞ ॥ ೧೯೩೭ ॥

ಹೊದ್ದಿದರೆ ಎನಗೆ ನೀ | ಮುದ್ದನಿಕ್ಕಿದಿ ಎಂದು |
ಬುದ್ಧಿಯಲಿ ಹಣವ ತೆಗೆವಳು ಸೂಳೆಯನು |
ಹೊದ್ದಬೇಡೆಂದ ಸರ್ವಜ್ಞ || ೧೯೩೮ ||

ಹಣವ ಕಂಡರೆ ಮುರುಕ | ಹೆಣನ ಕಂಡರೆ ಮುರುಕ |
ಹಣ ಗುಣವು ಹೋಗೆ ನೆರೆ ಹರಕು, ಬುದ್ಧಿಯದು |
ಹೆಣನಾದ ಬಳಿಕ! ಸರ್ವಜ್ಞ || ೧೯೩೯ ||

ದೇಶದ ಎಂಜವ | ಹೇಸದಲೆ ತಿಂಬುವರೆ |
ಬೇಸತ್ತೆನೆಂದು ಎನಬೇಡ ಅದಕೊಬ್ಬ |
ವೇಶಿಯೇ ನಾಕ್ಷಿ ಸರ್ವಜ್ಞ || ೯೪೦ ||

ಮೆಚ್ಚಿದಂತಿರುತಿಹಳು | ಮೆಚ್ಚು ಮತ್ತೊಬ್ಬನೊಳು |
ಮೆಚ್ಚಿದಳು ಸೂಳೆಯೆನಬೇಡ, ಅವಳಿನಿತು |
ನೆಚ್ಚಬೇಡೆಂದ ಸರ್ವಜ್ಞ || ೧೯೪೧ ||

ನಂಬಿಕೆಯ ಕೊಟ್ಟರೂ | ನಂಬದಿರು ಸೂಳೆಯನು |
ನಂಬಿಸಿ ಒಬ್ಬಗೆ ತಿಳಿಯದಿನ್ನೊಬ್ಬಗೆ |
ಇಂಬು ಮಾಡಿಹಳು ಸರ್ವಜ್ಞ || ೧೯೪೨ ||

ಇಂಬರಿಯದಾಕೆ ನೆರೆ | ನಂಬುಗೆಯ ತೋರಿದರೆ |
ತುಂಬಿದ ಕೆರೆಯ ನಡು ತೆವರ ಮಾಮರದ |
ಕೊಂಬೆ ಕಾತಂತೆ ಸರ್ವಜ್ಞ || ೧೯೪೩ ||

ಸೂಳೆ ಸೂತ್ರದ ನೇಣು | ಗಾಳವಾಕೆಯ ಮೊಗವು |
ಮೋಳಯ್ಸುವವಳು ಸಲೆಬೆಂಡು, ಮಿಂಡ ತಾ |
ಬಾಳೆಮೀನೆಂದ! ಸರ್ವಜ್ಞ || ೧೯೪೪ ||

ಬೇಡತಿಯ ಸೂಳೆಯು | ಆಡಿನ ಬೆಣ್ಣೆಯು |
ಕಾಡ ಕಗ್ಗೊರಲೆ ಕೈಹಿದೊಂಡೆ ನಾತಗಳು |
ತೀಡಿದರೆ ಬಿಡವು! ಸರ್ವಜ್ಞ || ೧೯೪೫ ||

ಜತ್ತು ಹೆಂಡತಿ ಮೇಲೆ। ಮತ್ತೆ ಸೂಳೆಯು ಏಕೆ।
ಕುತ್ತವದು ಬಂದು ಮುಸುಗರೆವ ಮನುಜಂಗೆ।
ಮತ್ತೆ ಕಿಚ್ಚೇಕೆ ಸರ್ವಜ್ಞ ॥ ೧೯೪೬ ॥

ಸಂತೆಯಂಗಡಿಸೂಳೆ। ಮುಂತೊಲಿವ ಡೊಂಬತಿಯು।
ಎಂತು ಗಂಡುಸಿಯು, ಜೋಗತಿಯು ಹೋದವನ।
ಸಂತಾನ ಕೆಡಗು ಸರ್ವಜ್ಞ ॥ ೧೯೪೭ ॥

ಏತ್ತ ಹೋದರು ಬೆನ್ನ। ಹತ್ತಿ ಬರುವಳ ಕಂಡು।
ಮೆತ್ತನ ಸೂಳೆಯೆನಬೇಡ, ಆವಳೊಲುಮೆ।
ಮೃತ್ಯು ಕಾಣಯ್ಯ ಸರ್ವಜ್ಞ ॥ ೧೯೪೮ ॥

ಎತ್ತಣದ ಕಾಲಕ್ಕೆ। ಅತ್ತಿ ಹಣ್ಣಾದಂತೆ।
ಅತ್ತಳು ಸೂಳೆಯೆನಬೇಡ, ಕಣ್ಣೀರು।
ಕುತ್ತು ಕಾಣಯ್ಯ ಸರ್ವಜ್ಞ ॥ ೧೯೪೯ ॥

ಒಡೆದ ಕಣ್ಬಂದಿಹರೆ। ಸಿಡಿಲೆರಗಿ ಉಳಿದಿಹರೆ।
ನಡುಗಡಲೊಳ್ಮುಳುಗಿ ಒದುಕಿದರೆ ಸೂಳೆಯ।
ನುಡಿಯ ನಂಬುವದು ಸರ್ವಜ್ಞ ॥ ೧೯೫೦ ॥

ಕೊಟ್ಟಾತ ಬರಡಾದ। ಬಿಟ್ಟಾತ ಹಯನಾದ।
ಕೊಟ್ಟವಳ ಪಡೆವೆನೆನುವಾತ ತಾ ಮೊದಲೆ।
ಬಟ್ಟ ಬಯಲಾದ ಸರ್ವಜ್ಞ ॥ ೧೯೫೧ ॥

ಸೂಳೆಯನು ನೆರೆ ನಂಬಿ। ಗಾಳಕ್ಕೆ ಸಿಲುಕದಿರು।
ಆಳವಾಗಿಹುದು ಅವಳ ಕುಳಿ, ಕಂಡಿಹರೆ।
ಹೇಳದಲೆ ತೊಲಗು। ಸರ್ವಜ್ಞ ॥ ೧೯೫೨ ॥

ಜಾಲೆಯಿಂ ಮರ ಕೆಡುಗು। ಮೋಳೆಯಿಂ ಕೆರೆ ಕೆಡುಗು।
ಆಳು ಇಲ್ಲದನ ಹೊಲ ಕೆಡುಗು, ಸಂಸಾರ।
ಸೂಳೆಯಿಂ ಕೆಡುಗು ಸರ್ವಜ್ಞ ॥ ೧೯೫೩ ।

ನಾರಿಯರ ನಿಜವನ್ನು । ನೀರಿನ ನೆಲೆಯನ್ನು ।
ಜಾರೆಯರ ತನುವಿನೊಳಗನ್ನು ಅರಿಯದಲೆ ।
ಸಾರಿದವ ಕೆಡುಗು ಸರ್ವಜ್ಞ || ೧೯೫೪ ||
ನೋಟಕ್ಕೆ ಬಲು ಚಂದ । ಕೂಟಕ್ಕೆ ಕಡು ನರಕ ।
ನಾಟಿಸಿಲು ಪ್ರಾಣ, ಧನ ಹಾನಿ, ಸೂಳೆಯೋ ।
ರಾಟವೇ ಬೇಡ ಸರ್ವಜ್ಞ || ೧೯೫೫ ||
ರಂಭೆಯೊಡಗೂಡದಿರು । ನಂಬುಗೆಯ ಮಾಡದಿರು ||
ಇಂಬರಿಯದವಳ ಸಂಗವದು ಒಡಲೊಳಗೆ ।
ಅಂಬು ಮುರಿದಂತೆ ಸರ್ವಜ್ಞ || ೧೯೫೬ ||
ಸೂಳೆಯನು ಹೋದವನ । ಬಾಳುವೆಯನೇನೆಂಬೆ ! ।
ಮೂಳನಾಯಾಗಿ, ಹುಣ್ಣೊಡೆದು, ಹಲ್ಲುದರಿ ।
ಗೋಳಾಡಿ ಸಾವ ! ಸರ್ವಜ್ಞ || ೧೯೫೭ ||
ಹಣವು ಹರೆಯಿರುವನಕ । ಗಣಗಣಿಸುವಳು ಗಣಿಕೆ ।
ಹಣವು ಹರೆ ಹೋದ ಬಳಿಕಾ ಸೂಳೆ ।
ಶುನಕನಂತಿಹಳು ! ಸರ್ವಜ್ಞ || ೧೯೫೮ ||
ಸೂಳೆ ಸುಂಕದ ನಾಯಿ । ಮೇಳ ಬಿಂಕದ ನಾಯಿ ।
ಸೂಳೆಯ ಮಗಳು ಮರಿನಾಯಿ, ಅವರವ್ವ ।
ಬೋಳ ನಾಯೆಂದ ಸರ್ವಜ್ಞ || ೧೯೫೯ ||
ಸೂಳೆ ಮಿಂಡಗೆ ನಾಯಿ । ಸೂಳೆ ಕುಂಟಣಿ ನಾಯಿ ।
ಸೂಳೆಯರ ಅವ್ವ ಮುದಿನಾಯಿ, ಅವರಪ್ಪ ।
ಮೂಳನಾಯೆಂದ ಸರ್ವಜ್ಞ || ೧೯೬೦ ||

## ೩೦. ರಸವಾದ ಪದ್ಧತಿ

ಬಂಗಾರ ಮಾಡುವದು

ರಸವುಂಟಂಗಡಿಯಲ್ಲಿ । ಕಿಸುವುಂಟು ಸಾಲೆಯಲಿ ।
ವಸುಭಟನು ಎಂಬ ಗಿಡನುಂಟು ವಾದಿಗಳು ।
ಹಸಿದರೇಕೆಂದ ? ಸರ್ವಜ್ಞ || ೧೯೬೧ ||

ಶಶಕನ ಕಿವಿಯಂತೆ । ಎಸೆದಿರ್ದ್ದದಾ ಪತ್ರ ।
ವೃಷಕುಂಭವದರ ರಸದೊಳಗೆ ಬೆರೆದಿಹರೆ ।
ಹುಸಿಯಲ್ಲ ಕನಕ ಸರ್ವಜ್ಞ ॥ ೧೯೬೨ ॥

ವೃಷಭನ ಕೊಂಬಿನಂ । ತೆಸೆದಿಪ್ಪುದದರ ಕಾಯ್ ।
ವಸುಭಟನೆಂಬ ಗಿಡದಿಂದ ಕನಕವದು ।
ಹುಸಿಯಲ್ಲ ನೋಡ ಸರ್ವಜ್ಞ ॥ ೧೯೬೩ ॥

ಉತ್ತರಣೆ ಉಪ್ಪಲಿಗೆ । ಮತ್ತಲ್ಲ ಶಿಶುಮಾರ ।
ಕತ್ತೆಯ ಮೂತ್ರವೆರೆದಿಹರೆ ರಸಭಸ್ಮ ।
ಉತ್ತಮವದಕ್ಕು ಸರ್ವಜ್ಞ ॥ ೧೯೬೪ ॥

ಗುಡ ಮಾತುಲಂಗಕವು । ಪೊಡವಿಯೊಳಗೆನೆದಿಕ್ಕು ।
ಒಡಗೂಡೆ ಬಿಸಿನಿ ರಸದೊಡನೆ ಬಡತನ ।
ವಡಗಿ ಸಿರಿಬಕ್ಕು ಸರ್ವಜ್ಞ ॥ ೧೯೬೫ ॥

ತಾಳಕದ ಸತ್ವವನು । ಮೇಳಯಿಸಿ ರಸದೊಳಗೆ ।
ಬಾಳದ ಬಿಳಿಲನೊಡಗೂಡೆ ತಾರೆ ತಾ ।
ಹೇಳಿದಂತಕ್ಕು ಸರ್ವಜ್ಞ ॥ ೧೯೬೬ ॥

ಗಂಧಕದ ತೈಲವನು । ಕುಂದದಲೆ ರಸಕಿತ್ತು ।
ಕಂದಿದ ತಾರೆಯೊಡಗೂಡೆ ಹೇಮ ತಾ ।
ಮುಂದೆ ಬಂದಕ್ಕು ಸರ್ವಜ್ಞ ॥ ೧೯೬೭ ॥

ಇಂಗುಳದ ತೈಲದಲಿ । ವಂಗ ಬೆರೆ ಬಂಗಾರ ।
ಅಂಗನೆಗುಂಟು ತನಗುಂಟು, ನೆರೆಮನೆಯ ।
ಸಂಗಾತಿಗುಂಟು ಸರ್ವಜ್ಞ ॥ ೧೯೬೮ ॥

ಹತ್ತಾರೆ ಕಾಯಿಂಗೆ । ಮತ್ತೆ ವಂಗವು ಕೂಡೆ ।
ಉತ್ತಮದ ಲೋಹ ತನಗಕ್ಕು, ಲೋಕದಲಿ ।
ಸ್ತುತ್ಯತಾನಕ್ಕು ಸರ್ವಜ್ಞ ॥ ೧೯೬೯ ॥

ತುತ್ತನಾಗವು ನಾಗ । ಮತ್ತೆ ನಾಗವು ನಾಗ ।
ಉತ್ತಮದ ನಾಗ ಒಡಗೂಡೆ, ಹೇಮವದು ।
ಹತ್ತಿ ಬಂದಕ್ಕು ಸರ್ವಜ್ಞ ॥ ೧೯೭೦ ॥

ನಾಗ ಸತುವುಗಳೆರಡು । ನಾಗದ ರಸ ಮೂರು ।
ಮೋಗೆ ಅಂಜಿಯನು ಒಡಗೂಡೆ ಹೇಮ ತಾ ।
ನಾಗಲೇ ಬಕ್ಕು ಸರ್ವಜ್ಞ ॥ ೧೯೭೧ ॥

ರಸವಂಗ ತಾರೆಗಳ । ಹಸುಗೆಗಳು ಒಂದೊಂದು ।
ಕಿಸುವೆಂಟು ತೆರದಿ ಒಡಗೂಡಲಾತಾರೆ ।
ಶಶಿಯಂದವಕ್ಕು ಸರ್ವಜ್ಞ ॥ ೧೯೭೨ ॥

ಸೀಗೆ ಬಾಗೆಯ ಬೇರು । ಕಾಗೆ ಮೋರೆಯ ಗಡ್ಡೆ ।
ನಾಗರವು ಸತುವನೊಡಗೂಡೆ ಹೇಮ ತಾ ।
ನಾಗಲೇ ಬಕ್ಕು ಸರ್ವಜ್ಞ ॥ ೧೯೭೩ ॥

ಬಳ್ಳಿ ತುರುಚಿಯ ಬೇರ । ಒಳ್ಳಿತಾಗಿಯೆ ಹಣಿದು ।
ಬೆಳ್ಳಿಯ ರಸದಿ ಬೆರೆಯಲ್ಕೆ ಹೇಮ ತಾ ।
ಬಳ್ಳದಲಿ ಬಕ್ಕು ಸರ್ವಜ್ಞ ॥ ೧೯೭೪ ॥

ಕಂಡಕಂಡುದನೆಲ್ಲ । ಹಿಂಡಿ ಭಂಡಾಗದಲೆ ।
ಕುಂಡಲಿಯು ಇಪ್ಪ ಗಿಡವೊಂದ ವಂಗಕ್ಕೆ ।
ಹಿಂಡಿ ನೋಡೆಂದ! ಸರ್ವಜ್ಞ ॥ ೧೯೭೫ ॥

ಓದಿ ವಾದಿಗಳೆಲ್ಲ । ಕಾದು ವಾದವ ಮಾಡಿ ।
ಊದಲು ಬೂದಿ ಒಳನೇರಿ ಬಾಯಾರಿ ।
ಹೋದುದನು ಕಂಡೆ ಸರ್ವಜ್ಞ ॥ ೧೯೭೬ ॥

ಸಾದು ಸಿದ್ಧರ ನಂಬಿ । ಕಾದ ಒಡವೆಯ ಕೊಟ್ಟು ।
ಹೋದಲ್ಲಿ ಹೇಮಕೂದಲ್ಕೆ ಗೂದೆ ತಾ ।
ಹಾದುದನು ಕಂಡೆ! ಸರ್ವಜ್ಞ ॥ ೧೯೭೭ ॥

### ಸ್ತ್ರೀವಶ್ಯ

ಇಂಗುಳದ ಬೇರಿನೊಳು । ವಂಗವನು ಬೆರಸಿದರೆ ।
ಅಂಗನೆಯು ತನಗೆ ವಶವಕ್ಕು । ವೈರಿ ತಾ ।
ಸಂಗಾತಿಯಕ್ಕು ಸರ್ವಜ್ಞ ॥ ೧೯೭೮ ॥

ವಿಷಮುಷ್ಟಿ ನಾಂಗುಲಿಕ । ಶಶನಯನ ಸಿತ್ರವರ ।
ರಸವು ತಾಂಬೂಲದೊಡಗೂಡೆ ಸ್ತ್ರೀವಶವು ।
ಹುಸಿಯಲ್ಲ ನೋಡ ಸರ್ವಜ್ಞ ॥ ೧೯೭೯ ॥

ಕತ್ತೆಗಿವಿ ಸಹದೇವಿ । ಮತ್ತೆತ್ತು ನಾಲಗೆಯು ।
ಉತ್ತರಣಿವೆರಸಿ ತಿಲಕವಿಡೆ ಲೋಕ ತ ।
ನ್ನತ್ತ ನಾರುವದು ಸರ್ವಜ್ಞ ॥ ೧೯೮೦ ॥

## ೩೧ ಅನ್ನ ಪದ್ಧತಿ

### ಹೊಟ್ಟೆ ಎಲ್ಲವನ್ನು ಮಾಡಿಸುವದು

ಕೊಟ್ಟಣವ ಕುಟ್ಟುವದು । ಮೊಟ್ಟೆಯನು ಹೊರಿಸುವದು ।
ಬಿಟ್ಟಿ ಕೂಲಿಗಳ ಮಾಡುವುದು ಗೇಣು ।
ಹೊಟ್ಟೆ ಕಾಣಯ್ಯ ಸರ್ವಜ್ಞ ॥ ೧೯೮೧ ॥

ಸಾಲವನು ಮಾಡುವದು । ಹೇಲ ತಾ ಬಳಿಸುವದು ।
ಕಾಲಿನ ಕೆಳಗೆ ಹಾಕುವುದು, ತುತ್ತಿನ ।
ಚೀಲ ನೋಡಯ್ಯ ಸರ್ವಜ್ಞ ॥ ೧೯೮೨ ॥

ಕುಲವನ್ನು ಕೆಡಿಸುವದು । ಛಲವನ್ನು ಬಿಡಿಸುವದು ।
ಹೊಲೆಯನ ಮನೆಯ ಹೊಗಿಸುವದು, ಕೂಳಿನ ।
ಬಲುಮೆ ನೋಡೆಂದ ಸರ್ವಜ್ಞ ॥ ೧೯೮೩ ॥

ಕನ್ನವನು ಕೊರಿಸುವದು । ಭಿನ್ನವನು ತರಿಸುವದು ।
ಬನ್ನದ ಸೆರೆಗೆ ಒಯ್ಯುವದು, ಒಂದು ಹಿಡಿ ।
ಅನ್ನ ನೋಡೆಂದ ಸರ್ವಜ್ಞ ॥ ೧೯೮೪ ॥

ಹೊಟ್ಟೆಯನು ಕಟ್ಟುವದು । ಬಟ್ಟೆಯಲಿ ಬಡಿಸುವದು ।
ಕಟ್ಟಾಳ ಭಂಗ ಪಡಿಸುವದು ಗೇಣುದ್ದ ।
ಹೊಟ್ಟೆ ಕಾಣಯ್ಯ ಸರ್ವಜ್ಞ ॥ ೧೯೮೫ ॥

ಅಟ್ಟೆ ಹರಿದಾಡುವದು । ಬಟ್ಟೆಯಲಿ ಮೆರೆಯುವದು ।
ಹೊಟ್ಟೆ ಹುಣ್ಣಾಗಿ ನಗಿಸುವದು, ಒಂದು ನೆರೆ ।
ಹಿಟ್ಟು ಕಾಣಯ್ಯ ಸರ್ವಜ್ಞ ॥ ೧೯೮೬ ॥

ಉಗುರ ತಿದ್ದಿಸುವದು । ಮುಗುಳ ನಗೆ ನಗಿಸುವದು ।
ಹೆಗರಣದ ಮಾತ ನುಡಿಸುವದು, ಬೋನದ ।
ಬಗೆಯ ನೋಡೆಂದ । ಸರ್ವಜ್ಞ

ಉಕ್ಕುವದು ಸೊಕ್ಕುವದು । ಕೆಕ್ಕನೇ ಕೆಲೆಯುವದು ।
ರಕ್ಕಸನೋಲು ಸೀಳಿಹುದು ಒಂದು ನೆರೆ ।
ಅಕ್ಕಿಯ ಗುಣವು ಸರ್ವಜ್ಞ ॥ ೧೯೮೮ ॥

ಊಟವಿದ್ದರೆ ಕೂಟ

ಬಟ್ಟೆಯನು ಉಡಿಸುವದು । ನೆಟ್ಟೆಯೆಂದೆನಿಸುವದು ।
ಕಟ್ಟಾಣಿ ಸತಿಯ ಕುಣಿಸುವದು, ಚೋಟುದ್ದ ।
ಹೊಟ್ಟೆ ಕಾಣಯ್ಯ ಸರ್ವಜ್ಞ ॥ ೧೯೮೯ ॥

ಸಾಂಬ್ರಾಣಿ ಏರುವರೆ । ಕೊಂಬೆಯನು ಸೀಳುವರೆ ।
ರಂಭೆಯರ ತೋಳಲೊರಗುವರೆ ಒಡಲಿಗಿ ।
ಷ್ಟಂಬಲಿಯು ಬೇಕು ಸರ್ವಜ್ಞ ॥ ೧೯೯೦ ॥

ಓರೆಯಾಯಿತು ಬಿಲ್ಲು । ಜಾರಿಹೋಯಿತು ಅಂಬು ।
ಕೀರೆಯ ನೊಪ್ಪು ತಿಂಬಾಗ ಕಾಮ ತಾ ।
ನಾರಾರನೆಚ್ಚ ಸರ್ವಜ್ಞ ॥ ೧೯೯೧ ॥

ಕಾಟಿಯನು ಹಾಕಿದರೆ । ಓಟವಿಹುದಾರತಿಗೆ ।
ನ್ಯಾಟಿಸೆವ ಬಿಲ್ಲು ಮುರಿದಿಹರೆ ಲೋಕಕ್ಕೆ ।
ಕೋಟಲೆಯು ತಾನೆ ಸರ್ವಜ್ಞ ॥ ೧೯೯೨ ॥

ಉಪ್ಪು ಕಾಮನ ಬಿಲ್ಲು । ತುಪ್ಪವಯ್ದ್ದಲರಂಬು ।
ಬಪ್ಪ ಭೋಗಗಳು ರತಿಯಾಗಿ ಕೂಳು ಕಂ ।
ದರ್ಪ ಕಾಣಯ್ಯ ಸರ್ವಜ್ಞ ॥ ೧೯೯೩ ॥

ಕೂಳಿಲ್ಲದೆ ಕೆಲಸ ನಡೆಯದು

ನೇತ್ರಗಳು ಕಾಣಿಸವು । ಶ್ರೋತ್ರಗಳು ಕೇಳಿಸವು ।
ಗಾತ್ರಗಳಿದ್ದು ನಡೆಯವು, ಕೂಳೊಂದು ।
ರಾತ್ರಿ ತಪ್ಪಿದರೆ ಸರಜ್ಞ ॥ ೧೯೯೪ ॥

ಅಡಿಗಳಿದ್ದೇಳವವು । ನುಡಿಗಳುರೆ ಕೇಳಿಸವು ।
ಮಡದಿಯರ ಮಾತು ಸೊಗಸವು, ಕೂಳು ತಾ ।
ತಡೆದರರಗಳಿಗೆ ಸರ್ವಜ್ಞ ॥ ೧೯೯೫ ॥

ವಿದ್ಯೆಗಳು ಬಾರವು । ಬುದ್ಧಿಗಳು ತೋರವು ।
ಮುದ್ದಿನ ಮಾತು ಸೊಗಸವು, ಬೋನದ ।
ಮುದ್ದೆ ತಪ್ಪಿದರೆ ಸರ್ವಜ್ಞ ॥ ೧೯೯೬ ॥

ಹಣೆ ಕಟ್ಟಿ ಹತ್ತುವದು । ಕಣಕಾಲು ಬತ್ತುವದು ।
ಅಣಕದ ಮಾತು ಸೊಗಸದು, ಕೂಳೊಂದು ।
ಕ್ಷಣವು ತಪ್ಪಿದರೆ ಸರ್ವಜ್ಞ ॥ ೧೯೯೭ ॥

ಕಣ್ಣುಗಳು ಇಳಿಯುವವು । ಬಣ್ಣಗಳು ಅಳಿಯುವವು ।
ಹುಣ್ಣಿಮೆಯು ಹೋದ ಶಶಿಯಂತೆ, ಅಶನವನು ।
ಉಣ್ಣದವನೊಡಲು ಸರ್ವಜ್ಞ ॥ ೧೯೯೮ ॥

ಆಳು ಇದ್ದರೆ ಅರಸು । ಕೂಳು ಇದ್ದರೆ ಬಿರಸು ।
ಆಳು ಕೂಳುಗಳ ಮೇಳವಿಲ್ಲದ ಮನೆಯು ।
ಬಾಳುಗೇಡೆಂದ ಸರ್ವಜ್ಞ ॥ ೧೯೯೯ ॥

## ತಾತ್ಪರ್ಯ

ಕೂಳಿಲ್ಲದವನೊಡಲು । ಹಾಳುಮನೆಯಂತಿಕ್ಕು ।
ಹೇಳದೆ ಹೊಕ್ಕ ರುಜೆಗಳಿಂ ತನುವಡಗಿ ।
ಹಾಳೆಯಂತಕ್ಕು ಸರ್ವಜ್ಞ ॥ ೨೦೦೦ ॥

ಕೂಳು ಹೋಗುವತನಕ । ಗೂಳಿಯಂತಿರುತಿಕ್ಕು ।
ಕೂಳು ಹೋಗದ ಮುದಿ ಬರಲು ಹರಿಯುವ ।
ಮೂಳನಾಯಕ್ಕು ಸರ್ವಜ್ಞ ॥ ೨೦೦೧ ॥

ಕೂಳು ಕುತ್ತವೆ ಕುತ್ತ । ಕೂಳು ಮೇಳವೆ ಮೇಳ ।
ಕೂಳೊಂದು ಗಳಿಗೆ ತಡೆದಿಹರೆ ಪಾತರದ ।
ಮೇಳ ಮುರಿದಂತೆ ಸರ್ವಜ್ಞ ॥ ೨೦೦೨ ॥

ಹೊತ್ತದೆ ಹೊಗೆಯದೆ । ಮತ್ತೆ ಉರಿಯಿಲ್ಲದೆ ।
ನಿತ್ಯವೂ ಹೊತ್ತಿ ಕಿಚ್ಚಿಲ್ಲದಾಕಿಚ್ಚು ।
ತುತ್ತ ಬೆಂದಿವುದು ಸರ್ವಜ್ಞ ॥ ೨೦೦೩ ॥

ತುತ್ತು ತುತ್ತಿಗೆ ಹೊಟ್ಟೆ । ತಿತ್ತಿಯಂತಾಗುವದು ।
ತುತ್ತ ಅರಗಳಿಗೆ ತಡೆದಿಹರೆ ಹೆಡೆ ಹಾವು ।
ಹುತ್ತ ಬಿಟ್ಟಂತೆ ಸರ್ವಜ್ಞ ॥ ೨೦೦೪ ॥

ಎತ್ತ ಹೋದರು ಒಂದು । ತುತ್ತು ಕಟ್ಟಿರಬೇಕು ।
ತುತ್ತೊಂದು ಗಳಿಗೆ ತಡೆದಿಹರೆ ಕೈ ಹಿಡಿದು ।
ಎತ್ತಬೇಕೆಂದ ಸರ್ವಜ್ಞ ॥ ೨೦೦೫ ॥

ತಿತ್ತಿ ಹೊಟ್ಟೆಗೆ ಒಂದು । ತುತ್ತು ತಾ ಹಾಕುವದು ।
ತುತ್ತೆಂಬ ಶಿವನ ತೊರೆದಿಹರೆ ಸುಡುಗಾಡಿ ।
ಗೆತ್ತಬೇಕೆಂದ ಸರ್ವಜ್ಞ ॥ ೨೦೦೬ ॥

ಅನ್ನದೇವರ ಮುಂದೆ । ಇನ್ನುದೇವರು ಉಂಟೆ? ।
ಅನ್ನವುಂಟಾದರುಣಲುಂಟು, ಜಗದೊಳಗೆ ।
ಅನ್ನವೇ ದೈವ ಸರ್ವಜ್ಞ ॥ ೨೦೦೭ ॥

# ೩೨. ವೈದ್ಯ ಪದ್ಧತಿ

## ಆಹಾರ ಕ್ರಮ

ಉಂಡು ಕೆಂಡವ ಕಾಸಿ । ಉಂಡು ಶತಪದ ನಡೆದು ।
ಉಂಡೆಡದ ಮಗ್ಗುಲಲಿ ಮಲಗೆ ವೈದ್ಯನ ।
ಭಂಡಾಟವಿಲ್ಲ ಸರ್ವಜ್ಞ ॥ ೨೦೦೮ ॥

ಉಂಡು ನೂರಡಿ ಎಣಿಸಿ । ಕೆಂಡಕ್ಕೆ ಕೈ ಕಾಸಿ ।
ಗಂಡು ವೇಲಾಗಿ ಮಲಗಿದನು ವೈದ್ಯನ ।
ಗಂಡೆ ಕಾಣಯ್ಯ ಸರ್ವಜ್ಞ ॥ ೨೦೦೯ ॥

ಹಸಿಯದಿರೆ ಕಡುಗಾಯ್ದ । ಬಿಸಿನೀರ ಕುಡಿಯುವದು ।
ಹಸಿವಕ್ಕು ಸಿಕ್ಕ ಮಲವಕ್ಕು, ದೇಹವು ।
ಸಸಿನವಾಗಿಹುದು ಸರ್ವಜ್ಞ ॥ ೨೦೧೦ ॥

ಹಸಿವಿಲ್ಲದುಣ ಬೇಡ । ಹಸಿದು ಮತ್ತಿರಬೇಡ ।
ಬಿಸಿಗೂಡಿ ತಂಗೂಳುಣಬೇಡ ವೈದ್ಯನ ।
ಬೆಸಸಲೇ ಬೇಡ ಸರ್ವಜ್ಞ ॥ ೨೦೧೧ ॥

ಹಸಿಯದಿರೆ ಉಣಬೇಡ । ಹಸಿದು ಮತ್ತಿರಬೇಡ ।
ಬಿಸಿಬೇಡ ತಂಗೂಳುಣಬೇಡ ವೈದ್ಯನ ।
ಗಸಣೆ ಬೇಡೆಂದ ಸರ್ವಜ್ಞ ॥ ೨೦೧೨ ॥

ಒಚ್ಚೊತ್ತು ಉಂಬುವದು । ಕಿಚ್ಚತಾ ಕಾಯುವದು ।
ಬೆಚ್ಚನ ರಾವಿಲೊರಗಿದರೆ ವೈದ್ಯನ ।
ಕಿಚ್ಚಲಿಕ್ಕೆಂದ ಸರ್ವಜ್ಞ ॥ ೨೦೧೩ ॥

ಕಚ್ಚೆ ನಾಲಿಗೆ ಮನವು । ಇಚ್ಛೆಯಲಿ ಇದ್ದಿಹರೆ ।
ನುಚ್ಚು ಮಜ್ಜಿಗೆಯು ಹಿತವಕ್ಕು, ಆಯುಶ್ಯ ।
ಹೆಚ್ಚಾಗಲಕ್ಕು ಸರ್ವಜ್ಞ ॥ ೨೦೧೪ ॥

ನಾಲಗೆಯು ಸವಿಸುಖಕೆ । ಚೀಲವನು ತುಂಬಿದರೆ ।
ಶೂಲೆಗಳು ಹಲವು ತೆರನಾಗಿ ರುಜೆಗಳಿಂ ।
ಕಾಲನೊಶನಕ್ಕು ಸರ್ವಜ್ಞ ॥ ೨೦೧೫ ॥

ನೀತಿಯಿಂದ ಗತಿ

ನಾಲಿಗೆಯು ಕೀಲವನು । ಶೀಲದಲಿ ತಾನರಿದು ।
ಶೂಲವದು ರುಚಿಯು ಎಂದಿಹನು ಮುದಿಯಲಿ ।
ಬಾಲನಂತಿಹನು ಸರ್ವಜ್ಞ ॥ ೨೦೧೬ ॥

ನಾಲಿಗೆಯು ಕಟ್ಟಿಹನು । ಕಾಲನಿಗೆ ದೂರನಹ ।
ನಾಲಿಗೆಯು ರುಚಿಯು ಮೇಲಾಡುತಿರಲವನ ।
ಕಾಲ ಹತ್ತಿರವು ಸರ್ವಜ್ಞ ॥ ೨೦೧೭ ॥

ರುಚಿಗಳನು ನೆರೆಗಳೆದು । ಶುಚಿಗಳಲಿ ಮೆರೆವಂಗೆ ।
ಪಚನವದು ಬೆಳಗಿ ಬಲದಿ ಬಾಳುವನೆಂಬ ।
ವಚನವೊಂದಿಹುದು ಸರ್ವಜ್ಞ ॥ ೨೦೧೮ ॥

ಆಹಾರಗಳ ಪರಿಣಾಮ

ಅಕ್ಕಿಯನು ಉಂಬುವನು । ಹಕ್ಕಿಯಂತಾಗುವನು ।
ಸಿಕ್ಕು ರೋಗದಲಿ ವೈದ್ಯನಿಗೆ ರೊಕ್ಕವ ।
ನಿಕ್ಕುತ್ತಲಿರುವ ಸರ್ವಜ್ಞ ॥ ೨೦೧೯ ॥

ಜೋಳವನು ತಿಂಬುವನು । ತೋಳದಂತಾಗುವನು ।
ಬೇಳೆ ಬೆಲ್ಲಗಳನುಂಬುವನು ಬಹು ಕಾಲ ।
ಬಾಳನೆಂದರಿಗು ಸರ್ವಜ್ಞ ॥ ೨೦೨೦ ॥

ನವಣೆಯನು ಉಂಬುವನು । ಹವಣಾಗಿ ಇರುತಿಹನು ।
ಭವಣೆಗಳಿಗವನು ಒಳಬೀಳನೀ ಮಾತು ।
ಟವಣೆಯಲ್ಲೆಂದ ಸರ್ವಜ್ಞ ॥ ೨೦೨೧ ॥

ರಾಗಿಯನು ಉಂಬುವ ನಿ । ರೋಗಿ ಎಂದೆನಿಸುವನು ।
ರಾಗಿಯು ಭೋಗಿಗಳಿಗಲ್ಲ, ಬಡವರಿ ।
ಗಾಗಿ ಬೆಳೆದಿಹುದು ಸರ್ವಜ್ಞ ॥ ೨೦೨೨ ॥

ಒಮ್ಮೆಯುಂಡವ ತ್ಯಾಗಿ । ಇಮ್ಮೆಯುಂಡವ ಭೋಗಿ ।
ಬಿಮ್ಮಗುಂಡವ ನೆರೆರೋಗಿ ಯೋಗಿ ತಾ ।
ಸುಮ್ಮಗಿರುತಿಹನು ಸರ್ವಜ್ಞ ॥ ೨೦೨೩ ॥

ಹೆಮ್ಮಿಟಲಿ ಹೇರೆಕ್ಕೆ । ರಮ್ಯದ ರಸದಾಳಿ ।
ಒಮ್ಮಾನದರ್ಧ ಉದಕ ಕಷಾಯದಿಂ ।
ಕೆಮ್ಮೆಲ್ಲ ಕೆಡುಗು ಸರ್ವಜ್ಞ ॥ ೨೦೨೪ ॥

ತಕ್ಕ ಗಿಡದಿಂದ ರುಜೆ । ಫಕ್ಕನೆ ಅಡಗಿಹುದು ।
ತಕ್ಕಾದ ಗಿಡನ ಕೊಡಲರಿಯದನ ಮಾತ್ರೆ ।
ವೈಕುಂಠಯಾತ್ರೆ ಸರ್ವಜ್ಞ ॥ ೨೦೨೫ ॥

## ೩೩. ಬೆಡಗಿನ ಪದ್ಧತಿ

### ವಿವಿಧ ಒಗಟುಗಳು

#### ಪ್ರಾಣಿ, ಮರ, ವಸ್ತುಗಳು.

ಕಲ್ಲರಳಿ ಹೂವಾಗಿ । ಎಲ್ಲರಿಗೆ ಬೇಕಾಗಿ ।
ಮಲ್ಲಿಕಾರ್ಜುನನ ಶಿಖರಕ್ಕೆ ಬೆಳಕಾಗಿ ।
ಬಲ್ಲವರು ಹೇಳಿ ಸರ್ವಜ್ಞ ॥ ೨೦೨೬ ॥

ಮರನೊತ್ತಿ ಬೇಯುವದು । ಉರಿತಾಗಿ ಬೇಯದದು ।
ಪುರಗಳ ನುಂಗಿ ಬೊಗಳುವದು ಲೋಕದೊಳು ।
ನರನಿದೇನಿಹುದು ಸರ್ವಜ್ಞ ॥ ೨೦೨೭ ॥

ಉರಿ ಬಂದು ಬೇಲಿಯನು । ಹರಿದು ಹೊಕ್ಕುದ ಕಂಡೆ ।
ಅರಿಯದಿದು ಬಗೆಗೆ ಕವಿಕುಲದ ಶ್ರೇಷ್ಠರುಗ ।
ಳರಿದರಿದ ಪೇಳಿ ಸರ್ವಜ್ಞ ॥ ೨೦೨೮ ॥

ಕಾಲಿಲ್ಲದಲೆ ಹರಿಗು । ತೋಳಿಲ್ಲದಲೆ ಹೊರುಗು ।
ನಾಲಿಗಿಲ್ಲದಲೆ ಉಲಿವುದು ಕವಿಕುಲದ ।
ಮೇಲುಗಳು ಪೇಳಿ ಸರ್ವಜ್ಞ ॥ ೨೦೨೯ ॥

ಇರಿದರೆಯು ಏರಿಲ್ಲ । ಹರಿದರೆಯು ಸೀಳಿಲ್ಲ ।
ತಿರಿಗೊಳ ಕೊಂಡು ಋಣವಿಲ್ಲ, ಕವಿಗಳಲಿ ।
ಆರಿದರಿದ ಪೇಳಿ ಸರ್ವಜ್ಞ ॥ ೨೦೩೦ ॥

ಆಡೆಂದರಾಡದದು । ಆಡ ಮರನೇರುವದು ।
ಕೂಡದೆ ಕೊಂಕಿ ನಡೆಯುವದು ಕಡಿದರ ।
ಬಾಡದದು ಪೇಳಿ ಸರ್ವಜ್ಞ ॥ ೨೦೩೧ ॥

ಕತ್ತಿಗದು ಹರಿದಿಹುದು । ಮತ್ತೆ ಬರುತೇಳುವದು ।
ಕಿತ್ತು ಬಿಸಾಡಲದು ನಡದು, ಕವಿಜನರು ।
ಅರ್ತಿಯಿಂ ಪೇಳಿ ಸರ್ವಜ್ಞ ॥ ೨೦೩೨ ॥

ಕಚ್ಚಿದರೆ ಕಚ್ಚುವದು । ಕಿಚ್ಚಲ್ಲ ಚೇಳಲ್ಲ ।
ಆಶ್ಚರ್ಯವಲ್ಲ, ಅರಿದಲ್ಲ, ಈ ಮಾತು ।
ನಿಶ್ಚಯವೆಂದ ಸರ್ವಜ್ಞ ॥ ೨೦೩೩ ॥

ಹತ್ತುಸಾಸಿರ ಕಣ್ಣು । ನೆತ್ತಿಲುಂದರು ಬಾಲ ।
ಹುತ್ತಿನ ಹುಳುವ ಹಿಡಿಯುವದು ಕವಿಜನರ ।
ಮೊತ್ತವಿದ ಪೇಳಿ ಸರ್ವಜ್ಞ ॥ ೨೦೩೪ ॥

ತನ್ನ ಸುತ್ತಲು ಮಣಿಯು । ಬೆಣ್ಣೆ ಕುಡಿವಾಲುಗಳ ।
ತಿನ್ನದಲೆ ಹಿಡಿದು ತರುತಿಹುದು ಕವಿಗಳಿದ ।
ನನ್ನಿಯಿಂ ಪೇಳಿ ಸರ್ವಜ್ಞ ॥ ೨೦೩೫ ॥

ಬಟ್ಟಲದ ಬಾಯಂತೆ । ಹುಟ್ಟುವದು ಜಗದೊಳಗೆ ।
ಮುಟ್ಟದದು ತನ್ನ ಹೆಂಡಿರನು ಕವಿಗಳಲಿ ।
ದಿಟ್ಟರಿದ ಪೇಳಿ ಸರ್ವಜ್ಞ ॥ ೨೦೩೬ ॥

ಹಲ್ಲು ನಾಲಿಗೆಯಿಲ್ಲ | ಸೊಲ್ಲು ಸೋಜಿಗವಲ್ಲ |
ಕೊಲ್ಲದೆ ಮೃಗವ ಹಿಡಿಯುವುದು, ಲೋಕದೊಳ |
ಗೆಲ್ಲ ರಾವಿನೊಳು ಸರ್ವಜ್ಞ || ೨೦೩೭ ||

ಆಸನದಲುಂಬುವದು | ಸೂಸುವದು ಬಾಯಲ್ಲಿ |
ಬೇಸರದ ಹೊತ್ತು ಕೊಲ್ಲುವದು, ಕವಿಗಳಲಿ |
ಸಾಸಿಗಳು ಪೇಳಿ ಸರ್ವಜ್ಞ || ೨೦೩೮ ||

ಹಲವು ಮಕ್ಕಳ ತಂದೆ | ತಲೆಯಲ್ಲಿ ಜುಟ್ಟವಗೆ |
ಸಲೆ ಗಳಿಗೆ ಜಾವವರಿವನ ಹೆಂಡತಿಗೆ |
ಮೊಲೆಯಿಲ್ಲ ನೋಡ ಸರ್ವಜ್ಞ || ೨೦೩೯ ||

ಮಣಿಯ ಮಾಡಿದನೊಬ್ಬ | ಹೆಣೆದು ಕಟ್ಟಿದನೊಬ್ಬ |
ಕುಣಿದಾಡಿ ಸತ್ತನವನೊಬ್ಬ ಸಂತೆಯೊಳು |
ಹೆಣನ ಮಾರಿದನು ಸರ್ವಜ್ಞ || ೨೦೪೦ ||

ಎಂಟು ಬಳ್ಳದ ನಾಮ | ಗಂಟಲಲಿ ಮುಳ್ಳುಂಟು |
ಬಂಟರನು ಹಿಡಿದು ಬಡಿಸುವದು, ಕವಿಗಳಲಿ |
ಬಂಟರಿದ ಪೇಳಿ ಸರ್ವಜ್ಞ || ೨೦೪೧ ||

ನೆತ್ತಿಯಲಿ ಉಂಬುವದು | ಸುತ್ತಲೂ ಸುರಿಸುವದು |
ಎತ್ತಿದರೆ ಎರಡು ಹೋಳಹುದು, ಕವಿಗಳಿದ |
ಕುತ್ತರವ ಪೇಳಿ ಸರ್ವಜ್ಞ || ೨೦೪೨ ||

ಮಂಡೆ ಬಾಯೊಳಗಿಕ್ಕು | ಚಂಡಿಕೆಯು ಹೊರಗಿಕ್ಕು |
ಹೆಂಡತಿಯು ಕಡೆಯೆ ಬರುತಿಕ್ಕು, ಕಡೆಗೊಂದು |
ಉಂಡೆಯಂತಕ್ಕು ಸರ್ವಜ್ಞ || ೨೦೪೩ ||

ಕೋಡಗವು ಕುದುರೆಯಲಿ | ನೋಡನೋಡುತ ಹುಟ್ಟಿ |
ಕಾಡಾನೆಗೆರಡು ಗರಿಮೂಡಿ ಗಗನದಿರಿ |
ದಾಡುವುದ ಕಂಡೆ ಸರ್ವಜ್ಞ || ೨೦೪೪ ||

ಧರೆಯಲ್ಲಿ ಹುಟ್ಟಿ ಅಂ | ತರದಲ್ಲಿ ತಿರುವುದು |
ವೊರೆದೇರಿ ಕಿಡಿಯನುಗುಳುವುದು ಕವಿಗಳಲಿ |
ಅರಿದರಿದ ಪೇಳಿ ಸರ್ವಜ್ಞ || ೨೦೪೫ ||

ಕಾಲುಂಟು ನಡೆಯದದು | ಮೂಲೆಯಲಿ ಕಟ್ಟಿಹುದು |
ಬಾಲಕರ ನೊಮ್ಮ ಹೊರುತಿಹುದು, ಕವಿಗಳಲಿ |
ಬಾಲರಿದ ವೇಳಿ ಸರ್ವಜ್ಞ || ೨೦೪೬ ||

ಅರಮನೆಯಲಿರುತಿಹುದು | ಕರದಲ್ಲಿ ಬರುತಿಹುದು |
ಕೊರೆದು ವಂಶಜರ ತಿನುತಿಹುದು, ಕವಿಗಳಲಿ |
ದೊರೆಗಳಿದ ವೇಳಿ ಸರ್ವಜ್ಞ || ೨೦೪೭ ||

ಪಾತಾಳಕಿಳಿಯುವದು | ಸೀತಳವ ತರುತಿಹುದು |
ಭೂತಳದ ಮೇಲೆ ಇರುತಿಹುದು ಅದು ತಾನು |
ಏತರದು ಪೇಳಿ ಸರ್ವಜ್ಞ || ೨೦೪೮ ||

ಕರ್ಪೂರದಿ ಹುಟ್ಟಿಹುದು | ಕರ್ಪೂರವು ತಾನಲ್ಲ |
ಕರ್ಪೂರವು ಅಹುದು ಬಿಳಿಯಲ್ಲ, ಈ ಮಾತು |
ಕರ್ಪ್ಪದಲುಂಟು ಸರ್ವಜ್ಞ || ೨೦೪೯ ||

ನಾಡೆಲೆಯ ಮೆಲ್ಲುವಳ | ಕೊಡೆ ಬೆಳ್ಳಗೆ ಬಾಯಿ |
ಊಡಿದ ಅರುವೆ ಮೊಲೆಕಟ್ಟನಾಕೆಯನು |
ಕಾಡಬೇಡೆಂದ ಸರ್ವಜ್ಞ || ೨೦೫೦ ||

ಹತ್ತೇಳುತಲೆ ಕೆಂಪು | ಮತ್ತಾರುತಲೆ ಕಪ್ಪು |
ಹೆತ್ತವ್ವನೊಡಲನುರಿಸುವದು, ಕವಿಗಳಿದ |
ರರ್ಥವನು ಪೇಳಿ ಸರ್ವಜ್ಞ || ೨೦೫೧ ||

ಎಂತುಂಬರಂಬಲಿಯು | ಮುಂತೊಬ್ಬನೈದಾನೆ |
ಅಂತಕನಲ್ಲ, ಅಜನಲ್ಲ, ಈ ತುತ್ತ |
ನೆಂತುಂಬರಯ್ಯ | ಸರ್ವಜ್ಞ || ೨೦೫೨ ||

ಅತ್ತಲಂಬಲಿಯೊಳಗೆ । ಇತ್ತೊಬ್ಬನೈದಾನೆ ।
ಅತ್ತವನ ನೋಡ ಜವನಲ್ಲ,ತ್ತಿಅಂಬಲಿಯು ।
ನೆತ್ತಂಬನಯ್ಯ ಸರ್ವಜ್ಞ ॥ ೧೦೫೩ ॥

ಮುಂಗೈಯೊಳಾಡುವದು । ಹಿಂಗುವದು ಹೊಂಗುವದು ।
ಸಿಂಗಿಯಲಿ ಸಿಳ್ಳ ಬಿಡುತಿಹುದು, ಆ ಮಿಗದ ।
ಸಂಗವನು ನೋಡು ಸರ್ವಜ್ಞ ॥ ೧೦೫೪ ॥

ಅಂಬಾಳ ನೆಲೆಯೆಂದು । ನಂಬಿ ಬೆನ್ನಲಿ ಬಂದು ।
ಅಂಬೆಂದು ಬೆನ್ನ ಗರಿ ತೋರ್‍ಪುದಾಮಿಗವ ।
ನಿಂಬರಿದು ಪೇಳಿ ಸರ್ವಜ್ಞ ॥ ೧೦೫೫ ॥

ಕಳಚರಣವದಕಿದ್ದು । ಕರೆದಲ್ಲಿ ಬಾರದದು ।
ಕರದಲ್ಲಿ ಹುಟ್ಟಿ ಸ್ಥಿರವಾಗಿ ಇರುವದಿದ ।
ರಿರವರಿದು ಪೇಳಿ ಸರ್ವಜ್ಞ ॥ ೧೦೫೬ ॥

ಕೆನ್ನೆಯಲಿ ಕುಡಿವಾಲ । ತನ್ನ ಸುತ್ತಲು ಮಣಿಯು ।
ತನ್ನ ದೇಹವನು ಹಣ್ಣುವದು, ಕವಿಗಳಲಿ ।
ಚೆನ್ನರಿದ ಪೇಳಿ ಸರ್ವಜ್ಞ ॥ ೧೦೫೭ ॥

ಬಂದಿಹೆನು ನಾನೊಮ್ಮೆ । ಬಂದು ಹೋಗುವೆನೊಮ್ಮೆ ।
ಬಂದೊಮ್ಮೆ ಹೋಗಿ ನಾ ಬಾರೆ, ಕವಿಗಳಲಿ ।
ವಂದ್ಯರಿದ ಪೇಳಿ ಸರ್ವಜ್ಞ ॥ ೧೦೫೮ ॥

ಮೂರು ಕಾಲಲಿ ನಿಂತು । ಗೀರಿ ತಿಂಬುದು ಮರನ ।
ಆರಾರಿ ನೀರ ಕುಡಿದಿಹುದು ಕವಿಗಳಲಿ ।
ಧೀರರಿದ ಪೇಳಿ ಸರ್ವಜ್ಞ ॥ ೧೦೫೯ ॥

ಅರೆವ ಕಲ್ಲಿನ ಮೇಲೆ । ಮರವು ಹುಟ್ಟಿದ ಕಂಡೆ ।
ಮರದ ಮೇಲೆರಡು ಕರ ಕಂಡೆ, ವಾಸನೆಯು ।
ಬರುತಿಹುದ ಕಂಡೆ ಸರ್ವಜ್ಞ ॥ ೧೦೬೦ ॥

ಒಣಗಿದ ಮರ ಚಿಗಿತು। ಬಿಣಿಲು ಬಿಡುವುದ ಕಂಡೆ।
ತಣಿಗೆಯ ತಾಣಕದು ಬಹುದು, ಕವಿಗಳಲಿ।
ಗುಣಯುತರು ಪೇಳಿ ಸರ್ವಜ್ಞ ॥ ೨೦೬೧ ॥

ಅಟ್ಟರಾವಾಡಿಗನ। ಸುಟ್ಟಹರು ಕುಂಟಿಗೆಯ।
ಹುಟ್ಟಿಯ ಮೂಗ ಹರಿದರೀಮೂರು ಭವ।
ಗೆಟ್ಟು ಕೂಡಿದರು ಸರ್ವಜ್ಞ ॥ ೨೦೬೨ ॥

ಇನ್ನು ಬಲ್ಲರೆ ಕಾಯಿ। ಮುನ್ನೂರ ಅರವತ್ತು।
ಹಣ್ಣು ಹನ್ನೆರಡು ಗೊನೆ ಮೂರು, ತೊಟ್ಟೊಂದು।
ಚೆನ್ನಾಗಿ ಪೇಳಿ ಸರ್ವಜ್ಞ ॥ ೨೦೬೩ ॥

ಕಡೆ ಬಿಳಿದು ನಡುಗಪ್ಪು। ಉಡುವ ವಸ್ತ್ರವದಲ್ಲ।
ಬಿಡದೆ ನೀರುಂಟು ಮಡುವಲ್ಲ, ಕವಿಗಳೇ।
ಬೆಡಗ ಪೇಳುವದು ಸರ್ವಜ್ಞ ॥ ೨೦೬೪ ॥

ಕರವುಂಟು ಕಾಲಿಲ್ಲ। ಶಿರಹರಿದ ಮುಂಡವದು।
ನರದಿ ಬಿಗಿದಾರು ತುಂಡದಕೆ ಕವಿಗಳಲಿ।
ಅರಿದರಿದ ಪೇಳಿ ಸರ್ವಜ್ಞ ॥ ೨೦೬೫ ॥

ಕೂತು ಮಾತಾಡುತ್ತ। ಯಾತವನು ಹೊಡೆದಿಹರೆ।
ಕಾತ ಕಾಯಿಗಳು ಹೆಡಗೆಯಲಿ ಮಿನುಪ ಮಿಡಿ।
ಸೌತೆಯಂತಿಹವು ಸರ್ವಜ್ಞ ॥ ೨೦೬೬ ॥

ಹತ್ತು ಸಾಸಿರ ಕಣ್ಣು। ಕತ್ತಿನಲಿ ಕಿರಿಬಾಲ।
ತುತ್ತನೆ ಹಿಡಿದು ತರುತಿಹುದು ಕವಿಗಳಿದ।
ರರ್ಥವನು ಪೇಳಿ ಸರ್ವಜ್ಞ ॥ ೨೦೬೭ ॥

ಅರವತ್ತು ಸಿಂಹ ಒಂ। ದಿರುವೆ ಕಚ್ಚಿದ ಕಂಡೆ।
ಕೆರೆಯ ಕೋಡೊಡೆದು ಧರೆ ಬೆಂದು ಕೈಲಾಸ।
ಉರಿವುದನು ಕಂಡೆ ಸರ್ವಜ್ಞ ॥ ೨೦೬೮ ॥

ನಲ್ಲ ದೇವಾಸಾಲೆ । ಹುಲ್ಲೆಗೊಂಬತ್ತು ಮುಖ ।
ಬೆಳ್ಳಿಲಿಗೆ ನಾಲ್ಕು ತನಿಗೋಡು ಮೂಡಿದ್ದ ।
ನಿಲ್ಲಿಯೇ ಕಂಡೆ ಸರ್ವಜ್ಞ || ೨೦೬೯ ||

ತೆಂಗು ಬಟ್ಟಲು ನುಂಗಿ । ಮುಂಗಲಿಯನಿಲಿ ನುಂಗಿ ।
ಗಂಗೆವಾಳುಕರ ಹರ ನುಂಗಿ ಜಗವು ಬೆಳ ।
ದಿಂಗಳಂತಿಕ್ಕು ಸರ್ವಜ್ಞ || ೨೦೭೦ ||

ಜಲದ ಒಳಗಣ ಮೀನು । ಹೊಳೆವ ಕೊಂಬಿನ ಮೇಲೆ ।
ಬೆಳೆದ ಗಿರಿಕಂಡುಕೊಳುತಿರ್ಕು ಕನ್ನಡದ ।
ಒಳಗನಾರ್ಬಲ್ಲ ಸರ್ವಜ್ಞ || ೨೦೭೧ ||

ಚಟುಲ ಲೋಚನೆಯಂತೆ । ಕುಟಿಲ ಕುಂತಳೆಯಂತೆ ।
ವಿಟಹೆಣ್ಣಿನಂತೆ ಹಗಲಲ್ಲಿ, ಇರುಳು ಸಂ ।
ಗಟಿನ ಕಾಯಂತೆ ಸರ್ವಜ್ಞ || ೨೦೭೨ ||

ಸಣ್ಣ ದೊಡ್ಡವನಲ್ಲ । ಅಣ್ಣನರಿವುದು ಅಲ್ಲ ।
ಹೆಣ್ಣಿಕ್ಕು ಲೋಕದೊಳಗೆಲ್ಲ ಇದನು ಬ ।
ಲ್ಲಣ್ಣಗಳು ಹೇಳಿ ಸರ್ವಜ್ಞ || ೨೦೭೩ ||

ಅಡವಿಯಲಿ ಹುಟ್ಟಿಹುದು । ಗಿಡಮರನು ಆಗಿಹುದು ।
ಕಡಿದರೆ ಕಂಪ ಕೊಡುತಿಹುದು, ಇದನೊಡೆದು ।
ತಡೆಯದೆ ಹೇಳಿ ಸರ್ವಜ್ಞ || ೨೦೭೪ ||

ಗಣಿಕೆಯ ಮೂಗಿನಲಿ । ಮೊಣಕಾಲ ಹುಟ್ಟಿಹುದು ।
ತೃಣನುಂಡು ನೀರನುಣನೊಲ್ಲದಂತದಕೆ ।
ಎಣಿಕೆಯಿಲ್ಲೆಂದ ಸರ್ವಜ್ಞ || ೨೦೭೫ ||

ಆಕೆಯನು ತಾ ಹೋಗೆ । ಈಕೆ ಬಾರದ ಕಂಡು ।
ಆಕೆ ಮರೆ ಸಾರಿ ನೆರೆದು ತಾ ಮರಳಿ ಮ ।
ತ್ತಾಕೆಯನೆ ತಂದ ಸರ್ವಜ್ಞ || ೨೦೭೬ ||

ಸೃಷ್ಟಿಯನು ಆಳುವಗೆ । ಹುಟ್ಟಿಹನು ಮಗನೊಬ್ಬ ।
ಆಟ್ಟಿಯದು ಬೇರೆ, ತಲೆ ಬೇರೆ, ಅವನಿಗೆ ।
ಕೊಟ್ಟ ವರ ಬೇರೆ ಸರ್ವಜ್ಞ ॥ ೨೦೭೭ ॥

ಬೆಟ್ಟದಂತಾನೆಯದು । ಬಟ್ಟೆಯಲಿ ಬರೆ ಕಂಡು ।
ಕಟ್ಟಿಟ್ಟ ಕಣ್ಣ ಹರಿಯಲದು ಕಂಚಿಯನು ।
ಮುಟ್ಟಿದುದ ಕಂಡೆ ಸರ್ವಜ್ಞ ॥ ೨೦೭೮ ॥

ಎತ್ತು ಗಾಣವ ನುಂಗು । ಕತ್ತರಿಯು ಕಣಿ ನುಂಗು ।
ಸುತ್ತಿ ಹೊಡೆಯುವನ ನೊಗ ನುಂಗು, ಈ ಮಾತು ।
ಸತ್ಯ ತಾನೆಂದ ಸರ್ವಜ್ಞ ॥ ೨೦೭೯ ॥

ನೂರಮೂವತ್ತುಗುರಿ । ಬೇರೆ ಇನ್ನೊಂದು ತಲೆ ।
ಊರಿದವು ಎರಡು ಸಮಪಾದ, ಮತ್ತೆರಡ ।
ನೂರದೇಕೆಂದ ಸರ್ವಜ್ಞ ॥ ೨೦೮೦ ॥

ಕಾಯುವರು ಹಲಬರು । ಕಾವ ಗೊಲ್ಲರ ಕಾಣೆ ।
ಮೇಯುವದು ಮರನ ನುಣ್ಣಗದು ಕವಿಗಳಲಿ ।
ಗಾವಿಲರು ಪೇಳಿ ಸರ್ವಜ್ಞ ॥ ೨೦೮೧ ॥

ಅಂತರದಲಡಿ ನಾಲ್ಕು । ಸ್ವಂತವಿಟ್ಟವು ನಾಲ್ಕು ।
ಮುಂತೆರಡು ಕೋಡು ಕಿವಿಯಾರು, ಕಣ್ಣೇಳು ।
ಎಂತ ಮೃಗವಯ್ಯ ಸರ್ವಜ್ಞ ॥ ೨೦೮೨ ॥

ಏರಿಯ ಕೆಳಗಿಲ್ಲ । ಬೇರೆ ತೋಟದಲಿಲ್ಲ ।
ದಾರಿಯಲಿ ಇಲ್ಲ, ಬಿಸಿಲಿಲ್ಲ, ಈ ಮಾತು ।
ಯಾರಿಗರಿದಲ್ಲ ಸರ್ವಜ್ಞ ॥ ೨೦೮೩ ॥

ಕಾಲು ನಾಲ್ಕುಂಟದಕೆ । ಹೇಳುವರೆ ಮೃಗವಲ್ಲ ।
ಮೇಲೆ ತಲೆ ಮೂರು ಅಜನಲ್ಲ, ಕವಿಗಳಲಿ ।
ಬಾಲರಿದ ಪೇಳಿ ಸರ್ವಜ್ಞ ॥ ೨೦೮೪ ॥

ಹರೆಯಲ್ಲಿ ಹಸುರಾಗಿ | ನೆರೆಯಲ್ಲಿ ಕಿಸುವಾಗಿ |
ಸುರರರಿಯದಮೃತವು ನರರಿಂಗೆ ದೊರೆದಿಹುದು |
ಅರಿದರಿದ ವೇಳಿ ಸರ್ವಜ್ಞ || ೨೦೮೫ ||

ಕಾಲಿಲ್ಲ ಕೊಂಬುಂಟು । ಬಾಲದ ಪಕ್ಷಿಯದು ।
ಮೇಲೆ ಹಾರುವದು ಹದ್ದಲ್ಲ, ಕವಿಗಳಲಿ ।
ಬಾಲರಿದ ವೇಳಿ ಸರ್ವಜ್ಞ || ೨೦೮೬ ||

ಮೀನು ಮುಟ್ಟದ ವಾರಿ | ದಾನವಾರಿಯು ತಾನು |
ಮಾನವರಿಗಾಗಿ ಬೆಳೆಸಿಹನು ಕವಿಗಳಲಿ |
ಮಾನಿಸರು ವೇಳಿ ಸರ್ವಜ್ಞ || ೨೦೮೭ ||

ಒರೆಯುಂಟು ಒರೆಯದದು | ಒರೆತಿಹರೆ ಒರೆಯುವದು |
ಕೆರೆಬಾವಿಯೊರತೆ ತಾನಲ್ಲ, ಕವಿಜನಗ ।
ಳರಿತಿದನು ವೇಳಿ ಸರ್ವಜ್ಞ || ೨೦೮೮ ||

ಸಂದಮೇಲ್ಬಡುತಿಹುದು । ಬೆಂದಮೇಲುರಿದಿಹುದು ।
ಬಂಧುಗಳನೆದ್ದು ಬಡಿದಿಹುದು, ಕವಿಗಳಲಿ ।
ನಂದನರು ವೇಳಿ ಸರ್ವಜ್ಞ || ೨೦೮೯ ||

ಕಣ್ಣುಂಟು ಕಾಣದದು | ಕಣ್ದೆರೆದು ನೋಡುವದು ।
ಮಣ್ಣಿನಲಿ ಹುಟ್ಟಿ ಬೆಳಗಿಹುದು, ಇದನು ಬ |
ಲ್ಲಣ್ಣಗಳು ವೇಳಿ ಸರ್ವಜ್ಞ || ೨೦೯೦ ||

ಹಲ್ಲುಂಟು ಮೃಗವಲ್ಲ। ಸೊಲ್ಲು ಸೋಜಿಗವಲ್ಲ ।
ಕೊಲ್ಲುವದು ತನ್ನ ನಂಬಿದರ, ಅರಿದರಿದ |
ಬಲ್ಲವರು ವೇಳಿ ಸರ್ವಜ್ಞ || ೨೦೯೧ ||

ಅರಸು ಬಿಟ್ಟವನು ಸ | ಮ್ಬರಿಸಿ ಬೆಸಳಿಗೆ ತುಂಬಿ |
ಉರಿವ ಕಿಚ್ಚಿನಲಿ ತಾನಿರಿಸಿ ಪರಿವಾರ ।
ಕರೆದಿಹುದ ಕಂಡೆ ಸರ್ವಜ್ಞ || ೨೦೯೨ ||

ಗೂಡನ್ನು ಕಡಿದಿಹರೆ । ಓಡೆಲ್ಲ ಮಡಿಕೆಗಳು ।
ಓಡಬಡಿದಿಹರೆ ಮಡಿಕೆಯೊಂದರ ಮೇಲೆ ।
ಆಡಕಿರುವದೇನು? ಸರ್ವಜ್ಞ ॥ ೨೦೯೩ ॥

ನೀರಿನಲಿ ತಾ ಹುಟ್ಟಿ । ನೀರ ನೆರೆ ನಂಬದದು ।
ನಾರಿಯರ ನಂಬಿ ಕೆಟ್ಟಿಹುದು, ಈ ಮಾತು ।
ಆರಿಗರಿದಲ್ಲ ಸರ್ವಜ್ಞ ॥ ೨೦೯೪ ॥

ಕಪ್ಪುಬಣ್ಣದ ನೀರೆ । ಒಪ್ಪುವಳು ಗಗನದಲಿ ।
ಕಪ್ಪಿನ ಸೀರೆ ಬಿಳಿಯಾಗೆ ಆವಳನ್ನು ।
ಅಪ್ಪುವವರಿಲ್ಲ ಸರ್ವಜ್ಞ ॥ ೨೦೯೫ ॥

ಹುಟ್ಟಿದ ಮನೆ ಬಿಟ್ಟು । ಸಿಟ್ಟಿನಲಿ ಹೊರಟಿಹಳು ।
ಸಿಟ್ಟಳಿದು ಮನೆಗೆ ಬರುತಿಹಳು, ಕವಿಗಳಲಿ ।
ದಿಟ್ಟರಿದ ವೇಳೆ ಸರ್ವಜ್ಞ ॥ ೨೦೯೬ ॥

ಬೆಳ್ಳಗೆ ಇರುತಿಹುದು । ಉಳ್ಳಾಡಿ ಬರುತಿಹುದು ।
ಸುಳ್ಳಲ್ಲ ಸತಿಯರಳಿಸುವದು, ಕವಿಗಳಲಿ ।
ಉಳ್ಳವರು ವೇಳಿ ಸರ್ವಜ್ಞ ॥ ೨೦೯೭ ॥

ನಳಿದೋಳಿನಾಕೆ ತಾ । ಸುಳಿದೆಗೆದು ಬೆಳೆದಿಹಳು ।
ಕಳೆಯುಳ್ಳ ಹಸುಳೆ ಹಲವಾಗೆ, ತಾನಾಗಿ ।
ಆಳಿದು ಹೋಗುವಳು ಸರ್ವಜ್ಞ ॥ ೨೦೯೮ ॥

ಬಂದಿಹೆನು ಮತ್ತೊಮ್ಮೆ । ಬಂದಂತೆ ಹೋಗಿಹೆನು ।
ನಿಂದಿಹೆನು ಎಂದು ಇರಲೊಲ್ಲೆ, ಹೋಗಿಹರೆ ।
ಬಂದಿಹೆನು ಬಾರೆ ಸರ್ವಜ್ಞ ॥ ೨೦೯೯ ॥

ಪ್ರಥಮದಲಿ ಹುಲಿಯಂತೆ । ದ್ವಿತಿಯದಲಿ ಇಲಿಯಂತೆ ।
ತೃತಿಯದಲಿ ತಾನು ಕಪಿಯಂತ, ಕವಿಗಳಲಿ ।
ಮತಿವಂತರರುಹಿ ಸರ್ವಜ್ಞ ॥ ೨೧೦೦ ॥

# ಶಬ್ದಾರ್ಥಕೋಶ



ಅಕ್ಕರ=(೧) ಅಕ್ಷರ, ವಿದ್ಯೆ, (೨) ಹಣೆಯಬರೆಹ, (೩) ಪ್ರೀತಿ.
ಅಕ್ಕಳಿಸಿದ = ಒಳಸೇರಿದ, ತೆಳುವಾದ
ಅಕ್ಕುಳಿ = ಅಂಜಿಕೆ, ಭಯ
ಅಖಂಡ = ಸಂಪೂರ್ಣ
ಅಗಡ = ಇರಿಕಳ, ಎಟ್ಟಿ, ಒಡೆಯುವ
ಅಗಳು = ಕಂದಕ
ಅಗಿ = ತಿನ್ನು, ಮೊಳಕೆ, ಸಸಿ
ಅಗ್ಗ =(೧) ಶ್ರೇಷ್ಠ, ಬಲಿಷ್ಠ (೨) ಕ್ಷುದ್ರ
ಅಗ್ಗವಾಡು = ಜರಿ, ಹೀಯಾಳಿಸು
ಅಘ = ಪಾಪ, ಕೇಡು, ನೋವು
ಅಂಕ = ಯುದ್ಧ, ಕಾಳಗ
ಅಂಕುರಿಸು = ಹುಟ್ಟು, ಮೊಳೆ (೨) ತಳವೂರು, ನೆಲಿಸು
ಅಂಗ = ಶರೀರ, ದೇಹ
ಅಂಗಜ = ಕಾಮ
ಅಂಗಿ = ಅರ್ಧಾಂಗಿ, ಹೆಂಡತಿ
ಅಚ್ಯುತ = ಚ್ಯುತಿಯಿಲ್ಲದವ, ಕೃಷ್ಣ
ಅಜ =(೧) ಬ್ರಹ್ಮ (೨) ಆಡು
ಅಜಾತ = ಹುಟ್ಟಿಲ್ಲದವ, ಶಿವ
ಅಟ್ಟಾಸ = ವೈಭವ
ಅಂಚಿತ = ಹೊಳೆದದ್ದು, ಚೀಲ
ಅಂಜಿ = (೧) ಹಂಜಿ, ಅರಳೆ (೨) ಗಂಧಕಧೃತಿ
ಅಟ್ಟಡವಿ = ದಟ್ಟವಾದ ಕಾಡು
ಅಟ್ಟಣ = ಅಟ್ಟ, ಮೇಲ್ಮಾಳಿಗೆ

ಅಟ್ಟಟ್ಟಿ = ಬೆನ್ನು ಹತ್ತಿ, ಮೇಲಿಂದ ಮೇಲೆ,
ಒಂದೇ ಸಮನೆ

ಅಟ್ಟಾಳು = ದೂತ, ಸೇವಕ, ದನಕಾಯುವವ

ಅಟ್ಟಿಕಬ್ಬುವಾಕೆ = ಹೆಂಡತಿ

ಅಟ್ಟು = ಬೆನ್ನು ಹತ್ತು, ಓಡಿಸು, ದಪ್ಪವಾಗಿ ಲೇಪಿಸು

ಅಟ್ಟುಳಿ = ಜಂಜಾಟ, ತೊಂದರೆ, ಹಿಂಡು, ಗುಂಪು

ಅಟ್ಟೆ = ಮುಂಡ, ದಿಂಬ

ಅಡಕು = ಸಂಗ್ರಹಿಸು, ಸಾಲಾಗಿ ಇಡು

ಅಡಸು = ಪ್ರಾಪ್ತವಾಗು, ಹತ್ತು, ಅಂಟು

ಅಡಗು = ಮಾಂಸ

ಅಡಿ = ಬುಡ, ಮೂಲ

ಅಡಿಗೆ = ಪಾಯಸ, ಹುಗ್ಗಿ

ಅಡಿರಜ = ಕಾಲುಧೂಳು

ಅಡಿಯಿಡು = ಹೆಜ್ಜೆಯಿಡು, ಹೋಗು, ತಡಮಾಡು

ಅಡ್ಡ = ೨ ಆಣೆ ೪ ಪೈ

ಅಣ = ಜಾಣ, ಯುಕ್ತಿವಂತ

ಅಣಕ = (೧) ಹುಡುಗಾಟ, ಹಾಸ್ಯ, ನಗೆ (೨) ಸೌಕರ್ಯ
ಸೌಂದರ್ಯ (೩) ಮರ್ಮ

ಅಣಜಾಣ = ಅತಿ ಚತುರ

ಅಣಬೆ = ಅಳಿಂಬೆ, ನಾಯಿಕೊಡೆ

ಅಣಲು = ಮುಖ, ಬಾಯಿ

ಅಣಿ = ಸಿದ್ಧ, ಗುರಿ, ದಂಡು

ಅಣುರೇಣು = ಧೂಳಿನ ಸೂಕ್ಷ್ಮಕಣ

ಅಂಡಲೆ = (೧) ಜಾಗ್ರತೆಗೊಳಿಸು, (೨) ಹತ್ತಿಕ್ಕು, ಒತ್ತಿಡು

ಅಂಡೆ = ಬಿದಿರಿನ ಪಾತ್ರೆ, ಬುದ್ದಲಿಕೆ

ಅತಿಕೂಟ = ಅತಿಸ್ನೇಹ, ಸುರತ ಸುಖ

ಅತಿಗಳೆ = ಅಲ್ಲಗಳೆ, ಒಲ್ಲೆನ್ನು, ತಿರಸ್ಕರಿಸು

ಅತಿಪಂಥ = ಮಹಾಜೂಜು, ತೀಕ್ಷ್ಣ ಪಂದ್ಯಾಟ
ಅದರು = ( ನಾ ) ಲೋಹದಕಲ್ಲು, ( ಕ್ರಿ ) ನಡಗು
ಅದ್ದ = ಅರ್ಧ
ಅಧ್ವಾನ = ಸಂಕಟ, ಆಪತ್ತು
ಅನಲ = ಬೆಂಕಿ
ಅನವರತ = ಯಾವಾಗಲು
ಅನಂತ = ಮೇರೆಯಿಲ್ಲದ, ವಿಷ್ಣು, ಶಿವ
ಅನಿತುದ್ದ = ಅಷ್ಟುದ್ದ
ಅನಿಲ = ವಾಯು, ಗಾಳಿ
ಅನು = ಸ್ಥಳ, ಸಂಗಡ, ಜೊತೆ, ಸಿದ್ಧ
ಅನುನಯ = ವಿನಯ, ಪ್ರಾರ್ಥನೆ, ಸ್ನೇಹ
ಅನುವು = ರೀತಿ, ಸ್ಥಳ, ಯೋಗ್ಯಮಾರ್ಗ
ಅಂತಕ = ಮೃತ್ಯು, ಯಮ
ಅಂದ = ರೀತಿ, ಹಾಗೆ, ಸೌಂದರ್ಯ
ಅಂದಳ = ಪಲ್ಲಕ್ಕಿ
ಅಪ್ಪುವಳು = ಹೆಂಡತಿ
ಅಬ್ಧಿ = ಸಮುದ್ರ
ಅಬ್ಬೆ = ಅಮ್ಮ, ಮುದುಕಿ
ಅಭವ = ಹುಟ್ಟಿಲ್ಲದವ, ಶಿವ
ಅಮರ = ಮರಣವಿಲ್ಲದ, ದೇವತೆ
ಅಮ್ಮದೊಡೆ = ಶಕ್ತಿ ಸಾಲದಿದ್ದರೆ
ಅಮ್ಮನಾಡು = ಶಕ್ತಿ ತೋರಿಸು
ಅಮ್ಮು = ಶಕ್ತಿ, ಪರಾಕ್ರಮ
ಅಮ್ಮೆ = ಮುದುಕಿ, ವಿಧವೆ
ಅಂಬರ = ಆಕಾಶ
ಅಂಬು = ಬಾಣ, ನೀರು
ಅಂಬುಧಿ = ಸಮುದ್ರ

ಅಂಬುಧಿಯ ಗಾಯನ = ತೆರೆಗಳ ಘೋಷ
ಅಯ್ತರು = ಬರು
ಅಯ್ಸು = ಅಯ್ದು, ಒಳ್ಳೆದು, ಅಷ್ಟಕ್ಕೆ
ಅಯ್ಮೊಗ = ಶಿವನ ಐದು ಮುಖಗಳು
ಅರಚು = ಒದರು, ಕಿರಿಚು
ಅರತ = ಒಣಗಿದ
ಅರನಾರಿ ಪುರುಷ = ಪಾರ್ಶ್ವವಾಯು, ಷಂಡ, ನಪುಂಸಕ
ಅರಬು = ನೀರಿನ ಕೊರತೆ
ಅರಸು = ಹುಡುಕು
ಅರಳು = ಹೂವು
ಅರಿಕೆ = ತಿಳುವಿಕೆ, ವಿವೇಕ
ಅರಿದು = ಆಶ್ಚರ್ಯ, ಅಸಾಧ್ಯ
ಅರೆ = ತಿಕ್ಕು, ಅರ್ಧ
ಅರಿವಿನ ಅರಿವು = ಬ್ರಹ್ಮಜ್ಞಾನ, ಅನುಭಾವ
ಅರ್ಕ = ಸೂರ್ಯ
ಅರ್ತಿ = ಪ್ರೀತಿ, ಮೆಚ್ಚಿಗೆ
ಅಲಗು = ಕತ್ತಿ
ಅಲಸಿಕೆ = ಆಲಸ್ಯ, ಮೈಗಳ್ಳತನ
ಅಲೆ = ಸಮುದ್ರದ ತೆರೆ ( ಕ್ರಿ ) ಸಂಚರಿಸು
ಅಲ್ಲ = ಶುಂಠಿ, ಕಾರಗೆಣಸು
ಅಲ್ಲದ ಮಾತು = ನಿಂದೆ, ಬೈಗಳ
ಅವಶೌಚ = ಮೈಲಿಗೆ, ಅಶುದ್ಧ
ಅವುಕು = ಅಪ್ಪು, ಆಲಂಗಿಸು
ಅಶನ = ಆಹಾರ
ಅಸಗ = ಅಗಸ, ಮಡಿವಳ
ಅಸದಳ = ಅಸಾಧ್ಯ
ಅಸಮಾಕ್ಷ = ಮುಕ್ಕಣ್ಣ, ಶಿವ
ಅಸಮಾನ = ಇಜ್ಜೋಡು, ವಿರುದ್ಧಗುಣ

ಅಸಿ = ಕತ್ತಿ, ಖಡ್ಗ
ಅಸಿಯಳು = ತೆಳುವಾದವಳು, ಗರ್ಭಿಣಿಯಲ್ಲದವಳು
ಅಸು = ಜೀವ, ಪ್ರಾಣ
ಅಸುರ = ರಾಕ್ಷಸ
ಅಸ್ತಿ = ಎಲುವು
ಅಳ = ಸಾಮಿಪ್ಯ, ನೋಂಕು
ಅಳವು = ಶಕ್ತಿ, ಸಾಮರ್ಥ್ಯ
ಅಳಲು = ದುಃಖ, ಅಳುವು
ಅಳಿ = ನಾಶವಾಗು ( ನಾ ) ಗುಂಗೀಹುಳ, ಭ್ರಮರ
ಅಳಿದಳಿದು = ಬಿಟ್ಟು ಬಿಟ್ಟು
ಅಳಿಯಾಸೆ = ಅಲ್ಪ ಆಪೇಕ್ಷೆ, ಜೀನತನ
ಅಳು = ದುಃಖ, ಮನನೋಯಿಸುವ ಮಾತು
ಅಳುಕು = ಅಂಜು, ಅಂಜಿಕೆ, ಭಯಪಡು
ಅಳುವು = ತೊಂದರೆ ಕೊಡು, ಬಯಸು, ಅಪೇಕ್ಷಿಸು
ಅಳೆ = ಮಜ್ಜಿಗೆ

## ಆ

ಆಗದ = ಕೈಯಿಂದಾಗದ ( ೨ ) ಪ್ರಯೋಜನಕ್ಕೆ ಬಾರದ, ನೇರಿಕೆಯಿಲ್ಲದ ( ೩ ) ವೈರತ್ವವಿರುವ
ಆಗಮಾತೀತ = ಆಗಮಗಳಿಗೆ ಮೀರಿದ
ಆಗಲಿಸು = ಆಗುಮಾಡು, ತೀರಿಸು, ತಿರುಗಿ ಹುಟ್ಟಿಸು
ಆಗಲು = ಯಾವಾಗಲು, ಸದಾ
ಆಗು = ಸಹಾಯ ಮಾಡು, ತೀರು, ಸ್ಥಿತಿ
ಆಡಿಕೊಳ್ಳು = ಹಂಗಿಸು, ಬೆನ್ನ ಹಿಂದೆ ಮಾತಾಡು
ಆಡು = ಅಜ, ಬ್ರಹ್ಮ, ಕುಣಿದಾಡು, ಲಾಗಹೊಡಿ, ತೋರಿಸು, ಮಾತಾಡು
ಆಣವ = ಮಲತ್ರಯಗಳಲ್ಲೊಂದು

ಆದವ= (ಆಗು ಧಾ.) ಕಾಪಾಡುವವ, ಸೃಷ್ಟಿಕರ್ತ, ಪರಿಪಾಲಕ
ಆದೇಶ = ಹಣೆಯ ಬರೆಹ [ ಸಹಾಯಕ
ಆನು = ನಾನು
ಆಂಬ್ಲ = ಹುಳಿ, ಆಂಬ್ರ, ನಾರು
ಆಯ = ಏಕಾಂತ, ಚೆನ್ನಾಗಿ, ನಿಜವಸ್ತು, ವಿಸ್ತಾರ, ಬ್ರಹ್ಮ
ಆಯತ = ಲಾಭ, ಅನಾಯಾಸವಾಗಿ ದೊರೆತದ್ದು
(೨) ಪ್ರಯೋಜನ (೩) ಯೋಗ್ಯತೆ, ಸೌಂದರ್ಯ
ಆರಡಿ = ೬ ಕಾಲಿನ ಹುಳ, ಭ್ರಮರ
ಆರಡಿಗೊಳ್ = (೧) ಜೇನು ಹುಳದಂತೆ ಸಂಗ್ರಹಿಸು
(೨) ಷಟ್ಸ್ಥಲಗಳಿಂದ ಜ್ಞಾನಾನುಭವ ಸಂಪಾದಿಸಿಕೊಳ್ಳು
ಆರಂಬ = ಒಕ್ಕಲುತನ, ಕೃಷಿ, ಬೇಸಾಯ
ಆರವೆಯ ಮರ = ಆರಾಮು ತೆಗೆದುಕೊಳ್ಳುವ ನೆರಳಿನ ಮರ
ಆರು = ಶಕ್ತನಾಗು
ಆರಾಧ್ಯ = ಗುರು, ಪೂಜ್ಯ, ವಂದ್ಯ
ಆರು ಬಣ್ಣ = ಹುಟ್ಟುವದು ಸಾಯುವದು ಮುಂತಾದ
೬ ಸ್ಥಿತಿಗಳು
ಆರೈ = ೧ ವಿಚಾರಿಸು ೨ ನೆಲೆ ತಿಳಿ ೩. ಕಾಪಾಡು
೪. ಜಾಗ್ರತೆಯಿಂದಿರು, ೫. ಹುಡುಕು
ಆರೈಸು = ಬಯಸು
ಆಲಿ = ಕಣ್ಣು
ಆವಗಂ = ಯಾವಾಗಲು
ಆವರಣ = ಹೊದಿಕೆ, ಮುಸುಕು
ಆಸನ = ಕೂಡ್ರುವ ಸ್ಥಳ, ಕುಂಡೆ, ಕೆಳಭಾಗ
ಆಸರ = ಬೇಸರಿಕೆ
ಅಸುರದ = ಭಾರವಾದ, ಹೆಚ್ಚಾದ
ಆಳು = ಮುಳುಗು
ಆಳ್ವ = ಆಳುವವ, ಅರಸ, ದೊರೆ

## ಇ

ಇಕ್ಕು = ನೀಡು, ದಾನಮಾಡು
ಇಕ್ಕೆ = ಸ್ಥಳ, ಮನೆ
ಇಟ್ಟೆಯಾಳು = ಈಟಿಯ ಆಳು, ಕಾವಲುಗಾರ, ಅಂಗರಕ್ಷಕ
ಇಟ್ಟೆಡೆ = (೧) ಬಿಕ್ಕಟ್ಟು (೨) ಗಂಟಿಟ್ಟ ಸ್ಥಲ
ಇಟ್ಟೆಯ = ಅಂಗರಕ್ಷಕ, ಮೈಗಾವಲು
ಇಂದು = ಚಂದ್ರ
ಇಂದುಧರ = ಶಿವ
ಇಪ್ಪವಳು = ಹೆಂಡತಿ
ಇಮ್ಮನ = ಎರಡು ಮನ, ಸಂದೇಹ
ಇಂಬರಿವ = ಹಿತೆಯಾದ, ಅರ್ಧಾಂಗಿ
ಇಂಬಿಡು = ಗರ್ಭಾಧಾನಮಾಡು
ಇಂಬಿನ = ಪುಷ್ಟವಾದ, ದಪ್ಪವಾದ
ಇಂಬು = ಸ್ಥಳ, ಯೋಗ್ಯತೆ
ಇರದೆ = ಬಿಡದೆ
ಇರಬು = ತಗ್ಗು, ಪ್ರಪಾತ ಸ್ಥಳ
ಇರವು = ಇರುವಿಕೆ, ಜೀವನ, ನಿಜಸ್ಥಿತಿ, ಉತ್ತಮ ಸ್ಥಿತಿ

## ಈ

ಈಡಾಡು = ಒಗೆ, ಬಿಸಾಡು, ಹಾಳುಮಾಡು
ಈಡು = ಸರಿ, ಸಮ
ಈಡೇರು = ಸಂಭವಿಸು, ಜಯವಾಗು, ಸುಖವಾಗು
ಈಯ್ = ಕೊಡು
ಈವ = ಕೊಡುವ
ಈರೈದು = (೨×೫) ಹತ್ತು
ಈಶ = ಒಡೆಯ, ಅರಸು, ಶಿವ
ಈಳೆ = ನಿಂಬೆ, ಕಿತ್ತಳೆ

## ಉ

ಉಕ್ಕು = ಹೊರಚೆಲ್ಲು, ಮೀರಿ ತಪ್ಪು
ಉಕ್ತಿ = ಮಾತು, ಶಬ್ದ, ನುಡಿ
ಉಗಿ = ಹುಟ್ಟಿಬರು, ಉಬ್ಬು, ಹೊರಹೊಮ್ಮು, ಉಗುಳು
ಉಂಕೆ = ನೂಲು ತೀಡುವ ಸಾಮಗ್ರಿ
ಉಗ್ರ = ಸಿಟ್ಟಿನ, ಶಿವ
ಉಜ್ಜುಗ = ಉದ್ಯೋಗ, ಕಾಯಕ
ಉಡಿಗೆ = ಉಟ್ಟಿದ್ದು, ಕಾವಿಯ ವಸ್ತ್ರ, ಲಾಂಛನ
ಉಡು = ನಡಕ್ಕೆ ಕಟ್ಟು, ಧರಿಸು
ಉಡುಗಿಸು = ಆಟೋಪದಲ್ಲಿಟ್ಟುಕೊಳ್ಳು, ಜಿತೇಂದ್ರಿಯನಾಗಿರು
ಉಡುಗು = ಮುದುರಿಕೊಳ್ಳು, ಸಣ್ಣಾಗು, ಕಡಿಮೆಯಾಗು
ಉಂಡಿಗೆ = ರಶೀದಿ ಚೀಟಿ, ಲಾಂಛನ
ಉತ್ತಮದಫಲ = ಪುಣ್ಯದಫಲ
ಉತ್ತರಣೆ = ಉತ್ರಾಣಿಗಿಡ
ಉತ್ತುಂಗ = ಉನ್ನತವಾದ, ಶ್ರೇಷ್ಠ
ಉದಕ = ನೀರು, ಗಂಜಿ, ಬಸಿದ ನೀರು
ಉದ್ದಂಡ = ಬಹಳ, ಮೇಲಕ್ಕೇರಿದ, ಗರ್ವಿಷ್ಠ, ಹೆಮ್ಮೆಯ
ಉಪಜಿಹ್ವೆ = ಎರಡುನಾಲಿಗೆ, ಸುಳ್ಳು, ಸರ್ಪ
ಉಪ್ಪಲಿಗೆ = ಉಪ್ಪಲಿಗಿಡ ( ಮಕರಂಗ )
ಉಮ್ಮಳಿಸು = ಶೆಖೆಯಾಗು, ಗಮ್ಮಕುಚ್ಚು
ಉಬ್ಬಸ = ತೇಗು, ಶ್ರಮದಕೆಲಸ, ಕಷ್ಟ
ಉಂಬಳಿ = ಇನಾಮುಭೂಮಿ, ಜಹಗೀರು
ಉರ = ಎದೆ, ಮೊಲೆ
ಉರಗ = ಹಾವು, ಸರ್ಪ
ಉರಗಭೂಷಣ = ಶಿವ
ಉರವಣಿಸಿ = ಉದ್ವೇಗದಿಂದ, ಶೀಘ್ರವಾಗಿ
ಉರಿ = ಬೆಂಕಿ, ಕೋಪ, ಜಠರಾಗ್ನಿ

ಉರು = ( ಉರಿ )ದೊಡ್ಡ, (೨) ಹೊರಲಾರದ
ಉರ್ವಿ = ಭೂಮಿ, ಲೋಕ
ಉಲಿ = ಶಬ್ದ ಮಾಡು, ಒದರು
ಉಸಿರು = (ಉಸುರು) ಶ್ವಾಸ ಪರಾಕ್ರಮ, ಶಕ್ತಿ, (ಧಾ) ಹೇಳು
ಉಳುಮೆ = ಉಳಿದದ್ದು
ಉಳಿಗ = ಶಕುನದ ಹಕ್ಕಿ, ಹಾಲಕ್ಕಿ

## ಊ

ಊಡು = ಉಣ್ಣಿಸು
ಊನ = ದೋಷ, ಕುಂದು
ಊರನರಿ = ಕುಯುಕ್ತಿಯ ಮನುಷ್ಯ, ಕಪಟಿ, ದುಷ್ಟ ಬುದ್ಧಿ
ಊರು = ( ನಾ ) ತೊಡೆ, ( ಧಾ ) ಚುಚ್ಚು, ಕಡಿ

## ಋ

ಋಜು = ಸರಲತೆ, ಸತ್ಯ

## ಎ

ಎಗ್ಗ = ಮೂರ್ಖ, ಬುದ್ಧಿಹೀನ
ಎಗ್ಗು = ಕಡಿಮೆ, ಸಿಗ್ಗು, ನಾಚಿಕೆ, ಸಂಕೋಚ
ಎಡನಾಯಿ = ಕನಿಷ್ಟ ಜಾತಿಯ ನಾಯಿ, ಕುನ್ನಿ
ಎಡರು = ವಿಘ್ನ, ಸಂಕಟ, ತೊಡಕು
ಎಡೆ = ಸ್ಥಾನ, ಕಾರಣ, ಮೂಲ
ಎಡೆಯಾಡು = ಅತ್ತಿಂದಿತ್ತ ಅಡ್ಡಾಡು
ಎಡೆಯಾಡಿಸು = ಓಡಾಡಿಸು
ಎಣೆ = ಸರಿ, ಸಮಾನ
ಎಂಟು ಕಂಟಕರು = ಅಷ್ಟ ಮದಗಳು
ಎಂಟು ಬಳ್ಳದ ನಾಮ = ( ಇರ್+ಕುಳ ) ಲ ಸೇರು, ಬಳ್ಳ
ಇಕ್ಕಳ, ತಂಡಾಸ
ಎತ್ತಿ ಹೋಗು = ದಂಡೆತ್ತಿ ಹೋಗು, ಮುತ್ತಿಗೆ ಹೆಗೆ

ಎತ್ತು ನಾಲಿಗೆ = ಎತ್ತಿನ ನಾಲಿಗೆಯ ಬಳ್ಳಿ
ಎರಕ = ಬೆಸಿಗೆ, ಪ್ರೀತಿ
ಎರಗು = ಹದ್ದಿನಂತೆ ಬಡಿ
ಎರಡು ನುಡಿ = ಸುಳ್ಳು
ಎರವು = ಕೊರತೆ, ಕಡ
ಎವೆ = ರೆಪ್ಪೆಯ ಕೂದಲು
ಎಸಗು = ಉದ್ಯೋಗಕ್ಕೆ ಹಚ್ಚು
ಎಸುಗೆ = ಎಸೆದದ್ದು, ಬಾಣ
ಎಸೆ = ಚಂದ ಕಾಣಿಸು, ಹೊರಹೊಮ್ಮು
ಎಳಸು = ಬಯಸು, ಅಪೇಕ್ಷಿಸು, ಜಗ್ಗು, ಎಳೆ

ಏ

ಏಕಾಕಿ = ಕೇವಲ ಒಂದು, ಒಂದೇ ಮಾತ್ರ
ಏಡಿಸು = ಅಣಕಿಸು, ಹಾಸ್ಯಮಾಡು
ಏಣಾಂಕ = ಚಂದ್ರ
ಏಣಾಂಕಧರ = ಶಿವ
ಏರಾಟ = ಹತ್ತುವದು, ಭೋಗ
ಏರಿ = ದಿನ್ನೆ
ಏರು = ಗಾಯ
ಏಳಿಗೆ = ಮೇಲ್ಮೆ, ಒಳ್ಳೆಯ ಸ್ಥಿತಿ
ಏಳ್ಗೆಯಿಂ = ಹೆಚ್ಚಾಗಿ, ಮೇಲಕ್ಕೆದ್ದು, ಉಕ್ಕಿ

ಐ

ಐಸೆ = ಅಷ್ಟೆ, ಒಳ್ಳೆಯದು

ಒ

ಒಕ್ಕರ = ಜಿಗಿ
ಒಕ್ಕಲಿಕ್ಕು = ನೆಲಸು, ತೊಂದರೆ ಕೊಡು, ಕೊಲ್ಲು
ಒಕ್ಕಾಗೆ = ಶಕುನವಾಗೆ, ಒಂದು ಕಾಗೆ
ಒಕ್ಕು = ಕೂಡಿಸು, ಸಂಗ್ರಹಿಸು, ತಿನ್ನು (ನಾ) ಶಕುನ

ಒಗತನ = ಬಾಳುವೆ
ಒಗೆ = ಹುಟ್ಟು, ಜನಿಸು
ಒಚ್ಚೊತ್ತು = ಒಂದು ಹೊತ್ತು, ಒಮ್ಮೆ, ಒಂದು ಸಲ
ಒಟ್ಟೈಸು = ಒಟ್ಟಾಗಿ ತಿಳಿ, ಅಲಕ್ಷಿಸು
ಒಡಬಡು = ಒಡಂಬಡು, ಸಮ್ಮತಿಸು
ಒಡಲಿಡಿ = ಹೊಟ್ಟೆಕಟ್ಟು, ಜೀನತನದಿಂದ ಜೀವಿಸು
ಒಡಲು = ದೇಹ
ಒಡಲೊಡವೆ = ಮಜ್ಜ, ಮಾಂಸ, ಕರುಳು ಇತ್ಯಾದಿ
ಒಡವೆ = ಆಭರಣ, ಜೀನಸು, ವಸ್ತು
ಒಡೆ = ಭಾಗವಾಗು, ಮುರಿ, ನಾಶವಾಗು, ಋತುಮತಿಯಾಗು
ಒತ್ತಡಿಕೆ = ಕೊರೆದ ಅಡಿಕೆ
ಒತ್ತಿ = ಓತಿಕಾಟ, ಡೊಣ್ಣೆಕಾಟ
ಒತ್ತು = ಗುದ್ದು, ಹೊಡೆ, ಸರಿಸು (ನಾ) ಸಮೀಪ
ಒತ್ತೆ = ಅಡವು, ಇಟ್ಟ ಸಾಮಾನು
ಒತ್ತೆಗೊಂಬಳು = ಸೂಳೆ, ವೇಶ್ಯಾ ಸ್ತ್ರೀ
ಒದರು = ಕೊಡಹು, ಜಾಡಿಸು
ಒಂದು = ಮೂಲ ವಸ್ತು, ಪರಬ್ರಹ್ಮ
ಒಂದೆಲಗು = ಬ್ರಹ್ಮೀಬಳ್ಳಿ
ಒಪ್ಪಚಿ = ಸ್ವಲ್ಪ, ಒಂದಿಷ್ಟು
ಒಪ್ಪರದಿ = ನೇರ, ಒಂದೇ ಮಾರ್ಗದಿಂದ ನಿಷ್ಕಪಟತನದಿಂದ ಖಂಡಿತವಾಗಿ
ಒಪ್ಪು = ಚೆಂದ ಕಾಣು, ಯೋಗ್ಯವಾಗಿರು
ಒಪ್ಪುವಳು = ಚೆಂದಕಾಣುವವಳು, ಪರಸ್ತ್ರೀ, ವೇಶ್ಯೆ
ಒಪ್ಪುಳ್ಳ = ಗುಣವತಿಯಾದ, ಪತಿವ್ರತೆಯಾದ
ಒಯ್ಯಾರ = ಬಡಿವಾರ, ಜಂಬ, ಬಿಂಕ, ಗರ್ವ, ಮುರುಕ
ಒರಕೊಳ್ಳು = ಗಟ್ಟಿಯಾಗಿ ಒರಕೊಳ್ಳು, ಹಬ್ಬು, ವಿಸ್ತರಿಸು
ಒರತೆ = ನೀರಿನ ಬುಗ್ಗೆ, ಊಟೆ, ಸೆಲೆ

ಒರೆ=(ಕ್ರಿ) ಹೇಳು (ನಾ) ಕತ್ತಿಯಿಡುವ ತೊಗಲಿನ ಚೀಲ, ತಿಕ್ಕು, [ಮಸೆ
ಒಲೆಯೊಳಗಿಡು = ಸುಡು, ತಿರಸ್ಕರಿಸು, ನಿಷೇಧಿಸು
ಒಸೆ = ಚೆಂದಕಾಣು, ಮೇಲಕ್ಕೆ ಬರು
ಒಲ್ಲಿ = ಶಲ್ಲೆ, ವಸ್ತ್ರ, ಮೇಲ್‌ಹೊದಿಕೆ
ಒಳಗು = ಗುಟ್ಟು, ರಹಸ್ಯಾರ್ಥ, ಮರ್ಮ

## ಓ

ಓಗಡು = ವಾಂತಿ, ಓಕರಿಕೆ
ಓಗರ = ಅನ್ನ, ಆಹಾರ
ಓಜ = ಆಚಾರ್ಯ, ಬ್ರಾಹ್ಮಣ, ಆಕ್ಕನಾಲೆ
ಓಜೆ = ಕ್ರಮ, ವರಸೆ, ಬಲ
ಓಡು = ಮಣ್ಣಿನ ಪಾತ್ರೆ, ಒಡೆದ ಗಡಿಗೆ, ಹಂಚಿನ ತುಂಡು
ಓತು =(ಓದು ಧಾ ) ಓದಿನಿಂದ ಬಂದದ್ದು, ಪಾಂಡಿತ್ಯ, ವಿದ್ಯೆ
ಓಪ = ( ಓ ಧಾ ಪ್ರೀತಿಸು ) ಪ್ರಿಯ
ಓರಂತೆ = ಚೆನ್ನಾಗಿ, ಹಾಗೆ, ನೆಟ್ಟಗೆ
ಓರೆಯಾಗು = ಬಾಗು, ಗುರಿತಪ್ಪು
ಓಲಗ = ಒಡ್ಡೋಲಗ ( ಒಟ್ಟು + ಓಲಗ ) ರಾಜಸಭೆ, ಮಂತ್ರಿಮಂಡಲ, ಸೇವೆ
ಓಲಾಡು = ಈಸು, ತೇಲಾಡು, ಸಂತೋಷದಲ್ಲಿ ಮುಳುಗು
ಓಲೈಸು = ( ಓಲಗಿಸು ) ಸೇವಿಸು, ಮೆಚ್ಚಿಸು
ಓಸರಿಸು = ಒಂದುಕಡೆಗೆ ಬಾಗು, ಓರೆಯಾಗು, ಹಿಂಜರಿ

## ಕ

ಕಕ್ಕಸದ = ದೀರ್ಘಶ್ವಾಸಬಿಡುವ, ದಪ್ಪಶರೀರವುಳ್ಳ
ಕಕ್ಕುಲತೆ = ಪ್ರೀತಿ
ಕಗ್ಗೊರಲೆ = ಕರಿತುಳಸಿ, ಕಾಮಕಸ್ತೂರಿ
ಕಂಕಿ = ಕಾಳಿನಮೇಲಿನ ಊಬು, ನೊರಗಿಹೋದವಳು

ಕಂಗಳ = ( ಕಣ್+ಕಳೆದ ) ಕುರುಡ
ಕಂಗಳು = ಕಣ್ಣುಗಳು
ಕಚ್ಚುಟಿ = ಕೌಪೀನ, ಲಂಗೋಟಿ
ಕಜ್ಜ = ಕಾರ್ಯ, ಕೆಲಸ
ಕಜ್ಜಾಯ = ಜೋಳದ ರೊಟ್ಟಿ, ತಿಂಡಿ, ಉಪಾಹಾರ
ಕಂಚಡ = ಚಡ್ಡಿ
ಕುಂಜ = ಕಮಲ, ತಾವರೆ
ಕಟಕ = ಊರು, ಪಟ್ಟಣ, ರಾಜಧಾನಿ
ಕಟಿ = ನಡು, ಸೊಂಟ
ಕಟಿಸೂತ್ರ = ನಡುಪಟ್ಟಿ, ಉಡುದಾರ
ಕಟ್ಟಾಣಿ = ಪ್ರಿಯಳು, ಹೆಂಡತಿ, ಬಹಳ ಬೆಲೆಯುಳ್ಳ, ಅತ್ಯುತ್ತಮ
ಕಟ್ಟಾಳು = ಬಲಿಷ್ಠ ಪುರುಷ
ಕಟ್ಟಿದಿರು = ನೆಟ್ಟಗೆ ಇದಿರು, ನೇರ
ಕಟ್ಟುವಡೆ = ಬಂಧಿಸು, ಕಟ್ಟು, ನೇತುಕೆ ಕಟ್ಟು
ಕಟ್ಟೆ - ಕೆರೆ, ಹೊಂಡ
ಕಡವಸ = ಸನ್ಯಾಸಿ ಉಡುವ ಚರ್ಮ
ಕಡುಕ = ಕಿವಿಯ ಆಭರಣ
ಕಡುಹು = ಆವೇಶ, ಬಲ, ಶೌರ್ಯ
ಕಣಕಟ್ಟು = ಕೈಚಮತ್ಕಾರ, ಮಂತ್ರ, ಮಾಟ
ಕಣಿಕ = ಕಾಳಿಲ್ಲದ ತೆನೆ, ದಂಟು, ಗೋದಿಯ ಹಿಟ್ಟಿನ ಕಣಕ
ಕಂಡಿತ = ಕಂಡದ್ದು, ಅನುಭವಜ್ಞಾನ
ಕಂಡೆ = ಕತ್ತಿ, ಕಠಾರಿ
ಕತ್ತು = ಕುತ್ತಿಗೆ
ಕತ್ತೆಗಿವಿ = ಕತ್ತೆ ಕಿರುಬನ ತೊಪ್ಪಲು
ಕದಳಿ = ಬಾಳೆ
ಕನಕ = ಬಂಗಾರ, ಚಿನ್ನ

ಕನಲು = ಸಿಟ್ಟಿಗೇಳು, ಕೋಪಿಸು
ಕನ್ನಡಿಗ = ಕನ್ನಡ ಭಾಷೆ ಆಡುವವ, ಹಾಸ್ಯಗಾರ, ಶಿವ
ಕಂತೆ = ತೇಪೆಯ ಹೊದಿಕೆ, ಕೌದಿ
ಕಂದನಾಡಿ = ಸುಷುಮ್ನ ನಾಡಿ
ಕಂದರ್ಪ = ಕಾಮ, ಮನ್ಮಥ
ಕಂದಿದ ತಾರೆ = ಕೀಳುತರದ ಬೆಳ್ಳಿ
ಕಪ್ಪರ = ಭಿಕ್ಷಾಪಾತ್ರೆ, ಮಣ್ಣಿನ ಪಾತ್ರೆ, ಹರಿವಾಣ
ಕಪ್ಪುಗೊರಲ = ನೀಲಕಂಠ, ಶಿವ
ಕಂಬಿ = ಸಲಾಕೆ, ತಂತಿ, ದೇಂಟು
ಕರ = ಕೈ, ಕಿರಣ
ಕರಡಿಗೆ = ಭರಣಿ, ಬುಟ್ಟಿ
ಕರತಲಾಮಲಕ = ಕೈಯಲ್ಲಿನ ನೆಲ್ಲಿಕಾಯಿ, ಪ್ರತ್ಯಕ್ಷ, ಸ್ಪಷ್ಟ
ಕರನಾಶ = ದೊಡ್ಡ ಕೇಡು
ಕರಿ = ಆನೆ, ಕಪ್ಪು
ಕರಿಗೊಂಡ = ಆನೆ ನುಂಗಿದ
ಕರಿಗೊಳ್ = ಪಕ್ವವಾಗು, ಸುಟ್ಟುಹೋಗು, ಸಮರಸವಾಗು
ಕರೆ = ತೀರ, ದಂಡೆ, ( ಧಾ. ) ಹಾಲುಹಿಂಡು
ಕರ್ಮ = ಕೆಲಸ, ಪಾಪ, ಪುನರ್ಜನ್ಮ
ಕಲು = ಕಲ್ಲು
ಕಲಿ = ವೀರ, ಶೂರ
ಕಲೆ = ಗುರುತು, ವಿದ್ಯೆ, ಕೌಶಲ್ಯ, ( ೨ ) ಕಪ್ಪು, ಅವಮಾನ, ಪ್ರಕಾಶ, ( ೩ ) ಮಿಶ್ರವಾಗು, ಬೆರೆ
ಕವಿ = ಕವಿತೆ, ಕಲ್ಪನೆ, ಸುಳ್ಳುಕಥೆ
ಕವಿ = (ನಾ) ವಿದ್ವಾಂಸ, ದರ್ಶಿ (ಕ್ರಿ) ಮುತ್ತು, ಸುತ್ತುಗಟ್ಟು
ಕಳವಳ = ಅಂಜಿಕೆ, ಭಯ, ವ್ಯಥೆ, ಚಿಂತೆ
ಕಳು = ಕಳವು ಮಾಡು, ಕದಿ

ಕಳೆ = ಹೊಲದ ಕಸ, ಸುಂದರವಾದ, ಪ್ರಕಾಶವುಳ್ಳ
ಕಷ್ಟವಾದವಳು = ನೋವಿನಿಂದ ಪೀಡಿತಳಾದವಳು,
ತಲೆ ಬೋಳಿಸಿದವಳು, ಮುಂಡೆ
ಕಸ್ತಿ = ಶಕ್ತಿ, ಪರಾಕ್ರಮ
ಕಾಕು = ಕೆಟ್ಟ, ದುಷ್ಟ, ನಿಷ್ಪ್ರಯೋಜನವಾದ
ಕಾಡಾಡಿ = ಕಾಡುಮನುಷ್ಯ, ಅಶಿಕ್ಷಿತ, ತಿಳಿಗೇಡಿ
ಕಾಣಿ = ಪೈ, ದಮ್ಮಡಿ, ಕಾಸು, ಸಮತೂಕಕ್ಕಾಗಿ ಕಟ್ಟಿದ ಭಾರ
ಕಾಣಿಕೆ = ಪ್ರತ್ಯಕ್ಷ, ಸಹಜ, ಇನಾಮು
ಕಾತರಿಸು = ತೊಂದರೆಕೊಡು, ಕಾಡಿಸು, ಅವಸರಮಾಡು
ಕಾತಂತೆ = ಕಾಯಿ ಬಿಟ್ಟಂತೆ
ಕಾದು ಎಳೆ = ಬರೆಕೊಡು
ಕಾರುಣಿಕ = ವಿಶೇಷ ಪುರುಷ, ವಿಭೂತಿ, ಪವಾಡಪುರುಷ
ಕಾಲುಕೆದರು = ಜಗಳ ತೆಗೆ
ಕಾಶಿಯ ಅಭವ = ವಿಶ್ವನಾಥ, ವಿಶ್ವೇಶ್ವರ
ಕಾಸ = ಕೆಮ್ಮು
ಕಾಸಿ = ಕಾವಿಯುವಸ್ತ್ರ, ಕೌಪೀನ
ಕಾಷ್ಟ = ಉರುವಲ ಕಟ್ಟಿಗೆ
ಕಾಳ್ = ಕೆಟ್ಟ, ಕಪ್ಪು
ಕಾಳಗ = ಯುದ್ಧ, ಜಗಳ
ಕಿಗ್ಗಳ = ಹೀನತನ, ಸಣ್ಣತನ, ನೀಚ ಮನಸ್ಸು
(೨) ಮುರಿದು ಬೀಳುವಂತಾಗು
ಕಿನಿ = ಸಿಟ್ಟಿಗೇಳು, ಕೋಪಿಸು
ಕಿಂಕರತೆ = ಸೇವಾಭಾವ, ದೈನ್ಯ, ದಾಸೋಹಂಭಾವ
ಕಿರುಮಾತು = ಹೀನನುಡಿ, ಬೈಗಳ
ಕಿಸವಾಯಿ = ಪೆದ್ದ, ಸಂಗಡಲೆ ಮರುಳಾಗುವವ
ಕಿಸುಕುಳ = ಕೊಳಚೆ, ರೊಜ್ಜು, ರೊಚ್ಚು, ಅಸಹ್ಯ
ಕಿಸು = ಕೆಂಪು, ತಾಮ್ರ

ಕೀತಿರು = ಕೀವು ತುಂಬಿರು
ಕೀಣ = ವಿಚಾರ
ಕೀಳ = ಗುಡಿಸಲು, ಚಪ್ಪರ
ಕೀಳಿನ ಕೂಳು    ಮಲ, ಅಮೇಧ್ಯ
ಕುಚ = ಮೊಲೆ
ಕುಂಜರ = ಆನೆ
ಕುಟ್ಟಿಕೊಳ್ಳು = ದೇಹದಂಡನೆ ಮಾಡು
ಕುಣಿಕೆ = ದಾರದ ಮಲವು, ಗಂಟು, ತಳ್ಳಿ, ಪ್ರೀತಿ
ಕುಂಟಿಗೆ = ಹಳ್ಳ, ಸುಣ್ಣದ ಹರಳು
ಕುಂಡಲಿ ಸರ್ಪ = ( ಯೋಗ ಪ್ರಯೋಗ ) ಬೆನ್ನುಹುರಿ, ಮಿದುಳುಬಳ್ಳಿ
ಕುಂಡೆ = ಕೆಳಭಾಗ, ಆಸನ, ಮಣ್ಣಿನ ಪಾತ್ರೆ
ಕುತ್ತು = ರೋಗ, ಸಂಕಟ
ಕುದಿಹ = ಕಾಮಬಾಧೆ
ಕುಂದಣಿಗೆ = ಒನಿಕೆ, ಭತ್ತದ ಕೊಟ್ಟಣ
ಕುಂದು = ರೋಗ, ಅವಮಾನ, ಕೊರತೆ
ಕುಪಿತ = ಕೋಪ, ಸಿಟ್ಟು
ಕುಂಭಿ = ಆನೆ, ಕಾಳಿನ ಸಂಗ್ರಹ
ಕುಂಭಿನಿ = ಭೂಮಿ, ದೇಶ
ಕುರಿತಾಡು = ಹೆಸರೆತ್ತಿ ದೋಷಹೊರಿಸು, ಚುಚ್ಚುವ ಮಾತಾಡು
ಕುರುಹು = ಸಂಜ್ಞೆ, ಸನ್ನೆ, ಒಂದುಬಗೆಯ ಆಯುಧ
ಕುರುಳು = ಉಂಗುರು ಕೂದಲು
ಕುಲಜ = ಉತ್ತಮಕುಲದವ, ಬ್ರಾಹ್ಮಣ
ಕುಳಿ = ಕುಣಿ, ಯೋನಿ
ಕುಳ್ಳ = ಗಿಡ್ಡ
ಕುಕ್ಷಿ = ಹೊಟ್ಟೆ

ಕೂಕತನ = ಕೆಟ್ಟ ಬುದ್ಧಿ, ಕುಹಕತನ
ಕೂಚು = ಕವಾಯತು, ಸಿಸ್ತು, ಪಾಳ್ಯ ಮಾಳಿಗೆಯ ಕುಂಬಿ, ಒಳನಂಚು
ಕೂಟಸ್ಥ = ನಿಶ್ಚಲ ಬುದ್ಧಿಯ, ದೃಢಚಿತ್ತವುಳ್ಳ, ಸ್ಥಿತಪ್ರಜ್ಞ
ಕೂಡು = ಜೊತೆ, ಹೆಂಡತಿ
ಕೂಪ = ತೆಗ್ಗು, ಬಾವಿ
ಕೂರಂಬು = ಹರಿತವಾದ ಬಾಣ
ಕೂರಲಗು = ಮೊನೆಯಾದ ಕತ್ತಿ
ಕೂರ್ದಸಿ = ಮೊನೆಯಾದ ಗೂಟ
ಕೂರ್ಪ = ನಲ್ಲ, ಗಂಡ, ಪ್ರಿಯ
ಕೂರ್ಮೆ = ಆಶೆ, ಪ್ರೀತಿ
ಕೂಸು = ಕನ್ಯೆ, ಲಗ್ನವಾಗದವಳು, ಕುಮಾರಿ
ಕೃತಕ = ಮೋಸ, ಕಪಟ
ಕೃಶ = ಸೊರಗಿದ, ಕ್ಷೀಣವಾದ
ಕೆಂಚನ = ಕೆಂಪಾಗಿರುವ, ಸುಂದರವಾದ
ಕೆಡೆ = ಬೀಳು, ನಾಶವಾಗು, ಹಾಳಾಗು
ಕೆಡೆಕೆಡೆ = ಬಾಯಿಗೆ ಬಂದಂತೆ ಬೈ
ಕೆಂಬೋತ = ಶಾಬತು ಕೋಳಿ
ಕೆಯ್ = ಹೊಲ
ಕೆಯ್ದು = ಆಯುಧ, ಶಸ್ತ್ರ, ಕತ್ತಿ
ಕೆರಳು = ದೊಡ್ಡದು ಮಾಡು, ಸಿಟ್ಟಿಗೇಳು
ಕೆಲನಾಗು = ತುಂಡಾಗು, ಭಾಗವಾಗು
ಕೆಲೆ = ಗಟ್ಟಿಯಾಗಿ ಮಾತಾಡು, ನಗು, ಒದರು, ಚೀರು
ಕೆಳೆ = ಗೆಳೆತನ
ಕೇಣ = ಮತ್ಸರ, ಸಿಟ್ಟು, ಲೋಭ, ಮನೋನಿಗ್ರಹ, ವೈರಾಗ್ಯ
ಕೇಶವ = ವಿಷ್ಣು
ಕೇಳಿ = ಕ್ರೀಡೆ, ಆಟ

ಕೈಗೆ ಬರು = ದೊರಕು, ಸಿಗು, ಪ್ರಯೋಜನಕ್ಕೆ ಬರು
ಕೈ ಮುಂಚಿಕೆ = ಸಣ್ಣ ಅಟ್ಟೆ
ಕೈ ಮುಂಚು = ಕೈ ಮಾಡು, ಹೊಡೆ
ಕೈಯಾರೆ = ಕೈಮುಟ್ಟೆ, ಸ್ವತಃ
ಕೈವಾರ = ಚಪ್ಪಳೆ ಹೊಗಳಿಕೆ, ಪ್ರಶಂಸೆ
ಕೊಜ್ಜೆ = ನಪುಂಸಕ, ಷಂಡ
ಕೊಡಹು = ಜಾಡಿಸು, ದೂರ ಮಾಡು, ಬೈ
ಕೊಂಡ = ಅಡವಿಯ ಕುರಿ
ಕೊಂಡಂತೆ = ( ಕೊಳ್ ಧಾ ) ತೆಗೆದುಕೊಳ್ಳು,
ಹಿಡಿದುಕೊಳ್ಳು
ಕೊಂಡಾಟ = ಹೊಗಳಿಗೆ, ಸ್ತೋತ್ರ
ಕೊಂಡೆಯ = ಚಾಡಿಕೋರ, ಗೂಢಚಾರ
ಕೊತ್ತಳ = ಕೋಟೆ, ಬುರುಜು
ಕೊತ್ತಿ = ಬೆಕ್ಕು
ಕೊನರು = ಚಿಗರು
ಕೊನರಿಸು = ಹೊರಚಿಮ್ಮು, ಚಿಗಿ
ಕೊನೆ = ತುದಿ, ಮುಂಭಾಗ
ಕೊಂತ = ಈಟಿ, ಬರ್ಚಿ
ಕೊರಡು = ಒಣಗಿದ ಮರ, ಮರದ ತುಂಡು
ಕೊರಳನಾಳ = ಸುಷುಮ್ನಾನಾಡಿ
ಕೊಲುವ ಧರ್ಮ = ವೈದಿಕ ಧರ್ಮ, ಯಜ್ಞ, ಕರ್ಮಕಾಂಡ
ಕೋಟಲೆ = ಕಷ್ಟ, ಸಂಕಟ
ಕೋಡಗ = ಮಂಗ, ಕಪಿ, ಬುದ್ಧಿಹೀನ, ಹರಿ, ವಿಷ್ಣು
ಕೋಲು = ಬಡಿಗೆ, ಬಾಣ
ಕೋಳು = ಸೆರೆ, ಬಂಧನ
ಕ್ರೀಡೆ = ಆಟ, ವಿನೋದ
ಕ್ರೂರ = ದಯವಿಲ್ಲದ, ದುರ್ಜನ

ಕ್ಲೇಶ = ದುಃಖ, ಸಂಕಟ
ಕ್ಷಮೆ = ದಯೆ, ಶಾಂತಿ
ಕ್ಷಾಮ = ಬರಗಾಲ
ಕ್ಷಾರ = ಉಪ್ಪು, ಕಾರ, ಬೂದಿ, ವಿಭೂತಿ
ಕ್ಷಿಪ್ರ = ಬೇಗ, ಶೀಘ್ರ
ಕ್ಷೀಣಿಸುವ ಕುತ್ತ = ಕ್ಷಯರೋಗ
ಕ್ಷೋಣಿ = ಭೂಮಿ, ಕ್ಷಿತಿ, ಭೂಲೋಕ
ಕ್ಷೋಭೆ = ಸಿಟ್ಟು, ಅವಕೃಪೆ, ಕೋಪ

## ಖ

ಖಗ = ಪಕ್ಷಿ
ಖಂಡಪರುಶು = ಶಿವ
ಖಂಡಸಕ್ಕರೆ = ಕಲ್ಲುಸಕ್ಕರೆ
ಖಂಡೆಯ = ಒಂದು ವಿಧವಾದ ಖಡ್ಗ
ಖತಿ = ಕೋಪ, ಸಿಟ್ಟು
ಖೂಳ = ಕೆಟ್ಟವ, ದುರ್ಜನ
ಖೂಳೆ = ದುಷ್ಟ ಸ್ತ್ರೀ

## ಗ

ಗಂಜಳ = (೧) ಮೂತ್ರ, ಹೊಲಸು, (೨) ಒಂದು ತರದ ಹುಲ್ಲು, ಆಂತರಗಂಗೆ, (೩) ಮರ್ಮಾಂಗದಕೇಶ
ಗಂಜಳದ ಬಾವಿ = ಯೋನಿ
ಗಡ = ತೀವ್ರ, ನಿಶ್ಚಯ
ಗಡಣ = ಸಮೂಹ, ರಾಶಿ, ಸ್ನೇಹ
ಗಡಿ = ಮೇರೆ, ಮಿತಿ, ಒಡ್ಡು
ಗಣಿಕ = ಕರಣಿಕ, ಜೋಯಿಸ
ಗಣಿಕೆ = ಸೂಳೆ, ವೇಶ್ಯಾಸ್ತ್ರೀ
ಗಂಡ = ಗಂಡಾಂತರ, ಶ್ರೇಷ್ಠ, ಅತ್ಯುತ್ತಮ

ಗಂಡತಿ = ಗಂಡನುಳ್ಳವಳು
ಗಂಡಸಿ = ಕೊಜ್ಜೆ, ನಪುಂಸಕ, ಷಂಡ
ಗಂಡು = ಬಲಭಾಗ
ಗಂಡುಗರಣಿ = ದೊಡ್ಡ ತುತ್ತು
ಗಂಡುಗಲಿ = ಮಹಾಶೂರ
ಗಂಧಕದ ತೈಲ = ಸಲ್ಫೂರಿಕ್ ಆಸಿಡ್
ಗಮನ = ಹೋಗುವಿಕೆ, ತಿರುಗಾಟ
ಗಮ್ಮನೆ = ಕೂಡಲೆ, ಶೀಘ್ರವಾಗಿ
ಗರ = ಭೂತ, ದೆವ್ವ
ಗರಳ = ವಿಷ, ಕಾಳಕೂಟ
ಗರಿ = ಹುಲ್ಲೆಲೆ, ಪುಚ್ಚ, ಹುಲ್ಲುಕಡ್ಡಿ
ಗರುವ = ಭಾರವಾದ, ಶ್ರೇಷ್ಠ
ಗರುವೆ = ದೊಡ್ಡಾಕೆ, ನೆರೆದವಳು
ಗಸಣೆ = ದುಃಖದ ಸಂಗತಿ, ಚಿಂತೆಯ ಮಾತು
ಗಹ್ವರ = ಗುಹೆ, ಗವಿ, ಆಡಕವಾದ ಸ್ಥಳ
ಗಳಹು = ಬಹಳ ಮಾತಾಡು, ಹರಟು
ಗಳಿಗೆ = ೨೪ ನಿಮಿಷ, ಸ್ವಲ್ಪ ಹೊತ್ತು
ಗಾಡ = ಗಟ್ಟಿಯಾಗಿ, ದೃಢವಾಗಿ
ಗಾತ್ರ = ದಪ್ಪನಾದ, ಅವಯವ, ತೊಡೆ, ಕಾಲು, ಇತ್ಯಾದಿ
ಗಾರು = ಸಿಟ್ಟು, ತೊಂದರೆ
ಗಾರುಡಿಗ = ಹಾವಾಡಿಗ
ಗಾರ್ದಭ = ಕತ್ತೆ
ಗಾವಿಲ = ಹಳ್ಳಿಯವ, ಹೆಡ್ಡ, ಲೋಭಿ
ಗಿಜವಾಯಿ = ಕಿಸವಾಯಿ, ಪ್ಯಾಲಿ
ಗಿಣ್ಣಲುಗಿಂಡಿ = ಸಣ್ಣಗಿಂಡಿ, ಸುಂಡಿಲು ಗಿಂಡಿ
ಗೀತವಿದ್ಯೆ = ಸಂಗೀತಶಾಸ್ತ್ರ
ಗೀತೆ = ಹಾಡು, ವಚನ, ತತ್ವಶಾಸ್ತ್ರ

ಗುಜ್ಜತನ = ಸಣ್ಣತನ, ಹೀನ ಮನಸ್ಸು, ಲೋಭ
ಗುಂಜಾಟ = ಕಿತ್ತಾಟ, ಜಗಳ
ಗುಂಜು = ಕಾಲಿಗೆ ಸುತ್ತುವ ಬಳ್ಳಿ
ಗುಡಿ = ನಿಶಾನೆ, ಧ್ವಜ
ಗುಡ = ಬೆಲ್ಲ, ಇಪ್ಪೆಯ ಗಿಡ
ಗುಡಿಕಟ್ಟು = ನಿಶಾನೆ ಏರಿಸು, ( ಸಂತೋಷಕ್ಕೆ ಕಾರಣ )
ಗುಂಡಿಗೆ = ಕಮಂಡಲು, ಕರಪಾತ್ರ
ಗುಣ = ಹಗ್ಗ, ದಾರ
ಗುದ್ದು = ಕುಣಿ, ಸಮಾಧಿ
ಗುಮ್ಮು = ಹೊಡೆ, ನಾಶಮಾಡು, ಗುದ್ದಿಕೊಡ್ರಿಸು
ಗೂಳಿ = ಹೋರಿ
ಗೆಣೆ = ಗೆಳೆತನ
ಗೆಯ್ವ = ಗೇಯ್ಯುವವ, ಸೇವಕ
ಗೊದ್ದ = ಇರುವೆ, ಓತಿಕಾಟ
ಗೊವೆ = ಗುಹೆ, ಏಕಾಂತ ಸ್ಥಳ
ಗೊರವ = ಭಿಕ್ಷುಕ
ಗೋಟು = ಬಲಿತ ಅಡಿಕೆ, ಪ್ರಾಯ ಹೋದ ಹೆಂಗಸು
ಗೋರ್ಕಲ್ಲು = ಗುಂಡುಕಲ್ಲು, ಬಂಡೆಗಲ್ಲು, ಗೋರಿಯ ಕಲ್ಲು
ಗೋವಿಂದ = ಕೃಷ್ಣ ( ವಿಷ್ಣುವಿನ ಅವತಾರ )

ಘ

ಘಸಣೆ = ಘರ್ಷಣೆ, ತಿಕ್ಕಾಟ
ಘೃತ = ತುಪ್ಪ

ಚ

ಚಟುಲ = ಚಂಚಲ
ಚದುರತನ = ಜಾಣತನ
ಚಂದನ = ಗಂಧ
ಚಂದಿರನ ಸೂಡಿದನ = ಚಂದ್ರನನ್ನು ತಲೆಯಲ್ಲಿ ಧರಿಸಿದವ

ಚಪ್ಪೆ = ಸಪ್ಪಗೆ, ರುಚಿಯಿಲ್ಲದ
ಚರ = ದೂತ, ಆಳು
ಚರಣ = ಪಾದ, ಕಾಲು
ಚಲದಂಕ = ಛಲದಿಂದ ಯುದ್ಧ ಮಾಡುವವ,
ಹಟಮಾರಿ ಸ್ವಭಾವದವ
ಚಾಟು = ಚಪ್ಪರ, ಮನೆ, ಆಸರ
ಚಾಮರ = ಕೂದಲಿನಿಂದ ಮಾಡಿದ ಬೀಸಣಿಕೆ, ಚೌರಿ
ಚಾರುತರ = ಅತಿ ಸುಂದರವಾದ
ಚಿಣ್ಣ = ಸಣ್ಣದಾದ, ಹುಡುಗ
ಚಿಣ್ಣೆ = ಚಿಣಿಯ ಕೋಲು, ಚಿಣಿಪಣಿ
ಚಿತ್ತ = ಮನಸ್ಸು, ಒಲುಮೆ, ಪ್ರೀತಿ
ಚಿರಕಾಲ = ಸದಾಕಾಲ
ಚಿಲುಮೆ = ನೀರಿನ ಒರತೆ, ಜವಳು ಭೂಮಿ
ಚುಚ್ಚಕ = ಚಾಡಿಕೋರ, ಜಗಳ ಹಚ್ಚುವವ
ಚುನ್ನ = ಹಾಸ್ಯ, ಕುವಾಡ
ಚುಂಬಿಸು = ಮುದ್ದಾಡು
ಚೆಂಬೊನ್ನ = ಬಂಗಾರ
ಚೆಲ್ಲ = ಚಲ್ಲಾಟ, ಚಿನ್ನಾಟ
ಚೊಕ್ಕಟ = ಶುದ್ಧ, ತಿಳಿಯಾದ, ಸ್ವಚ್ಛ, ಯೋಗ್ಯ, ನೀಟಾದ

ಛ

ಛಲ = ಹಟ, ಈರ್ಷೆ
ಛಾಯೆ = ಸೂರ್ಯನ ಹೆಂಡತಿ, ನೆರಳು
ಛಿದ್ರಿಸುವವ = ಭೇದ ಬುದ್ಧಿ ಹುಟ್ಟಿಸುವವ

ಜ

ಜಗ = ಸ್ಥಳ, ಮನೆ, ಊರು, ಲೋಕ
ಜಗಲಿ = ಕಟ್ಟೆ, ಅಗಲವಾದ, ಪ್ರಸಸ್ಥ
ಜಂಪೆ = ಮೀನುಗಂಡ, ಹರಡು

ಜಡಿ = ಹೊಡೆ, ತಿವಿ
ಜಡೆ = ಹೆಣೆದ ಇಲ್ಲವೆ ಸಿಕ್ಕುಗಟ್ಟಿದ ಕೂದಲು
ಜತ್ತು = ಜೋಡಗಲದ, ಪ್ರೀತಿಯ
ಜನಪತಿ = ಅರಸು, ಒಡೆಯ, ದೊರೆ
ಜನುಮದ ಹಾದಿ = ಜನ್ಮಾಂತರ ಚಕ್ರ
ಜನ್ನ = ಯಜ್ಞ, ಯಾಗ
ಜರಿ = ತಗ್ಗು, ಗುಡ್ಡದ ಇಳಿಜಾರು
ಜರೆ = ನಿಂದಿಸು, ತಿರಸ್ಕರಿಸು
ಜವ = ಯಮ
ಜಸ = ಕೀರ್ತಿ, ಯಶಸ್ಸು
ಜಾಣಿ = ಜ್ಞಾನಿ
ಜಾನಕ್ಕಿ = ಜಾನಕಿ, ಸೀತೆ
ಜಾರೆ =(ಕ್ರಿ) ಜಾರಲು, ತಪ್ಪು ಮಾಡಲು (ನಾ) ಸೂಳೆ
ಜಾಲ = ಬಲೆ, ಸಮೂಹ
ಜಾಲಗಾರ = ಬೆಸ್ತ, ಮೀನುಗಾರ, ಬಂಗಾರ ಸೋಸುವವ
ಜಾವ = ಕೆಲವು ತಾಸು, ಸ್ವಲ್ಪ ಸಮಯ
ಜಾಳಿಗೆ = ತೈಲಿ, ಹಣದ ಚೀಲ
ಜಾಳು = ವ್ಯರ್ಥವಾದ
ಜಿಗುಟು = ಚಿವುಟು
ಜಿನುಗು = ವ್ಯರ್ಥವಾಗಿ ಹಲಬು, ಗೊಣಗು
ಜೀವಚಯ = ಜೀವರಾಶಿ ಪ್ರಾಣಿಕೋಟಿ
ಜೂಳಿ = ನೀರು ತರುವ ತೊಗಲಿನ ಚೀಲದ ಬಾಯಿ
ಜೊನ್ನದಿರುಳು = ಬೆಳುದಿಂಗಳ ಕಾಲ
ಜೋಗತಿ = ಎಲ್ಲಮ್ಮನ ಭಕ್ತೆ, ಬಸವಿ, ಭಿಕ್ಷುಕಿ
ಜೋಳವಾಳಿ = ಪಾಲುಗಾರ, ಸ್ನೇಹಿತ

## ಟ

ಟವಣೆ = (ಟವಳಿ) ಸುಳ್ಳು, ಮೋಸ, ಕಪಟ

ಟೊಣೆ = ಹೊಡೆ, ಕದಿ, ಮೋಸಮಾಡು, ಸುಳ್ಳುಹೇಳು

## ಡ

ಡೊಗ್ಗೆ = ದಪ್ಪವಾದ, ಮಂದನ

ಡೋರು = ಡೊಗರು, ತಗ್ಗುಬಿದ್ದ, ಇಂಗಿದ

## ತ

ತಟ್ಟಿ = ತಾಟು, ತಾಬಂಡಿ

ತಟಬಡ = ತೊಡಕು, ತಳಕು, ಕೂಟ, ಸಂಯೋಗ

ತಡಿ = ದಂಡೆ, ಹೊಳೆಯು ತೀರ

ತಣಿಗೆ = ತಳಿಗೆ, ತಾಟು

ತಣಿವು = ತಂಪು, ತಣ್ಣಗಾದ

ತತಿ = ಗುಂಪು, ಸಮೂಹ, ನಾಲು

ತನಿ = ಸವಿ, ಮಧುರ, ಪಕ್ವ

ತನುವಡಗು = ಶರೀರವು ಹಾಳಾಗು, ನೊರಗು

ತನುಗೆಟ್ಟ = ಅಂಗಹೀನ, ಊನ,

ತವಸಿ = ಇಂಗಳದ ಜಾತಿಯು ಗಿಡ

ತಪ್ಪು = ವಚನಭಂಗ, ಬಿಡುಗಡೆ ಕೊಡು

ತಬ್ಬು = ಅಪ್ಪಿಕೊಳ್ಳು, ಆಲಿಂಗಿಸು

ತಮ್ಮಟ = ಚಿಮ್ಮಟಿಕೆ

ತರಣಿ = ಸೂರ್ಯ

ತರಿ = ಕತ್ತರಿಸು, ಹರಿ

ತರುವಲಿ = ಹುಡಿಗೆ, ಬಾಲೆ

ತರಂಗ = ತೆರೆ, ಅಲೆ

ತಲೆಗುತ್ತು = ತಲೆತಗ್ಗಿಸು

ತಲ್ಲಣ = ಸಂಕಟ, ಕಳವಳ, ಭೀಕರ

ತವಕ = ಆವಸರ

ತವೆ = ಚೆನ್ನಾಗಿ, ಅಧಿಕವಾಗಿ

ತಳಿಗೆ = ತಾಟು, ತಾಬಂಡಿ, ತಟ್ಟಿ

ತಳುವದೆ = ತಡಮಾಡದೆ. ತಪ್ಪದೆ
ತಳ್ಳಿ = ಸ್ನೇಹ, ಗೊಡವೆ
ತಾಗು = ಹಾಯು, ಇರಿ, ಬಡಿ
ತಾಟಕಿ = ಜಗಳಾಡುವವಳು, ಸುಳ್ಳಾಡುವವಳು
ತಾಟಗಿತ್ತಿ = ಕೆಳಗೆ ಮೇಲೆ ಮಾಡುವವಳು,
[ ಮೋಸಮಾಡುವವಳು
ತಾಣ = ಸ್ಥಾನ, ಸ್ಥಳ
ತಾರ = ಸೈ, ಕಾಣಿ
ತಾರಕ = ಉದ್ಧಾರಕ
ತಾರೆ = ಬೆಳ್ಳಿ, ನಕ್ಷತ್ರ, ಅಳಲಿಗಿಡ
ತಾರೇಶ = ಚಂದ್ರ
ತಾವು = ತಾಳು, ಸಹಿಸು, ಕಡೆ
ತಾಳಕದ ಸತ್ವ = ಗಂಧಕದ ಅರ್ಕ, (ಸಲ್ಫ್ಯೂರಿಕ್ ಅಸಿಡ್)
ತಾಳದೋಲೆ = ತಾಳದೋಲೆಯ ಸುರಳಿಯಿಂದ ಮಾಡಿದ ಕಿವಿಯ ಆಭರಣ
ತಿಟ್ಟೆ = ಸಣ್ಣಗುಡ್ಡ
ತಿಣ್ಣ = ದೊಡ್ಡ, ಸ್ಥೂಲವಾದ
ತಿಮಿರ = ಕತ್ತಲೆ, ಅಜ್ಞಾನ
ತಿರ = ಸ್ಥಿರವಾದ
ತಿರಿಗೂಳು = ಭಿಕ್ಷಾನ್ನ, ಬೇಡಿ ಇನ್ನೊಬ್ಬರಲ್ಲಿ ತಂದದ್ದು
ತಿರುಪೆ = ಭಿಕ್ಷೆ, ಬೇಡುವಿಕೆ, ಹೊಟ್ಟೆಗಾಗಿ ಕಲಿತ ವಿದ್ಯೆ
ತಿಲ = ಎಳ್ಳು
ತಿಲಕ = ಬೊಟ್ಟು, ಅಕ್ಷತೆ, ಶ್ರೇಷ್ಠ
ತಿಳಿ = (ಧಾ) ತಿಳಿದುಕೊಳ್ಳು, ಅರಿ, (ನಾ) ಮಜ್ಜಿಗೆ, ಗಂಜೀಯನೀರು, ಸಾರು, ಹುಳಿ
ತೀಟೆ = ತುರಿ, ವ್ಯಸನ
ತೀಡಿರಿ = ಗುದ್ದಿಕೊಲ್ಲು
ತೀಡು = ಸೋಂಕು, ಮುಟ್ಟು
ತುತ್ತ = ವೈಲುತುತ್ತ

ತುಡುಕು = ಮೈಮೇಲೆಬೀಳು, ಹಿಡಿ
ತುಡುಗುಣಿ = ಕದ್ದು ಉಣ್ಣುವವಳು, ಜಾರೆ
ತುಂಬು = ಒಕ್ಕಲು, ಜನವಸತಿ
ತುಂಬೆ = ಭ್ರಮರ, ಹುಲ್ಲಿನ ಜಾತಿಯ ತುಂಬೆ ಸೊಪ್ಪು
ತುಯ್ಯಲು = ತುಪ್ಪ, ಪಾಯಸ
ತುಯ್ಯಲ್ = ತೇವ, ಹಸಿ
ತುರುಗ = ಕುದುರೆ
ತುರುಗಾಹಿ = ದನಕಾಯುವವ
ತುರುಚೆ = ಚುರಚಿಯ ಗಿಡ
ತೂಗು = ಕೊಂಬೆ, ಜೋತಾಡುವ ಟೊಂಗೆ
ತೆಗಳು = ಹೀಯ್ಯಾಳಿಸು, ಹಳಿ, ಜರಿ
ತೆನೆ = ಕಾಳಿನ ತೆನೆ, ಹುಂಜದ ಜುಟ್ಟು
ತೆರೆದಹಸ್ತ = ಉದಾರಹಸ್ತ, ಕೊಡುಗೈ
ತೆವರ = ದಿನ್ನೆ, ದಿಬ್ಬ
ತೇಜ = ಕೀರ್ತಿ, ಘನತೆ, ಅಧಿಕಾರ
ತೇಜಿ = ಕುದುರೆ
ತೊಗೆ = ಬೇಳೆಯ ಸಾರು, ತೋವೆ
ತೊಟ್ಟು = ತುಂಬು, ಬಿಂದು, ಗುರಿ
ತೊಡಚು = ಮುಟ್ಟು, ನೋಂಕು
ತೊಡೆ = ಅಳಿಸು, ಒರಸು, ಮಾಜು
ತೊರೆ = (ಕ್ರಿ) ಬಿಡು (ನಾ) ಹಳ್ಳ, ಹೊಳೆ
ತೋವೆ = ಬೇಳೆಯ ಸಾರು
ತೋಯ = ನೀರು
ತೋಷ = ಸಂತೋಷ
ತ್ರಿಣಯ = ಮುಕ್ಕಣ್ಣ, ಶಿವ

## ದ

ದಟ್ಟಿ = ತೆರೆ, ಸೀರೆ

ದಟ್ಟಡಿ = ಮೆಲ್ನಡೆ, ತಪ್ಪುಹೆಜ್ಜೆ
ದಂತಿ = ಆನೆ
ದಂದುಗ = ತೊಂದರೆ, ತೊಡಗು, ಒಡನಾಟ
ದಂಡಿಗೆ = ತಂತಿಯ ವಾದ್ಯ, ಏಕದಾರಿ, ತಂಬೂರಿ
ದಳಗಾಲು = ದಪ್ಪನಾದ ಕಾಲು
ದಾತಾರ = ಧನಿ, ಒಡೆಯ, ರಕ್ಷಕ
ದಾಯ = ಲಾಭ
ದಾಳಿ = ಸೂರೆ, ಮುತ್ತಿಗೆ, ಗದ್ದಲ
ದಿಕ್ಕಾಗು = ಸಹಾಯಮಾಡು
ದಿಟ = ಸತ್ಯ, ನಿಜ, ದೃಢ
ದಿಂಡೆಯ = ದುರ್ಜನ, ತುಂಟ, ಪರಾಕ್ರಮಿ, ಮುಟ್ಟಾಳ
ದಿನಪತಿ = ಸೂರ್ಯ
ದುಮ್ಮಾನ = ದುಮ್ಮಾನ, ಕೆಟ್ಟಬುದ್ಧಿ, ಖೇದ, ಚಿಂತೆ
ದುಸ್ಮಾನ = ನೀಚ, ದುಷ್ಟ
ದುರಿತ = ಪಾಪ, ಕೇಡು
ದುರ್ಗ = ಕೋಟೆ, ಕೊತ್ತಳ
ದೆಸೆ = ದಿಕ್ಕು, ಗತಿ, ಸುದೈವ
ದೇಗುಲ = ದೇವಾಲಯ, ಗುಡಿ
ದೇವಸು = ದೇವರ ಸೊತ್ತು, ಆಭರಣ, ಪೂಜಾಸಾಮಗ್ರಿ ಮುಂತಾದದ್ದು
ದೇವಾಂಗ = (೧) ರಾಜವಸ್ತ್ರ, ರೇಶಿಮೆ, ಜರತಾರಿ ವಸ್ತ್ರ, (೨) ಲಂಗೋಟಿ, ಕೌಪೀನ, ಕಚ್ಚುಟ
ದೇಶಿಕ = ಪರದೇಶಿ, ಗುರು

## ಧ

ಧನಪತಿ = ಕುಬೇರ
ಧನುವೇಳೆ = ಮಳೆ ಬಿಲ್ಲು ( ಬೀಳುವ ಸಮಯ )
ಧವಳಾಂಕ = ಬಿಳಿಬಣ್ಣದ ಗುರುತುಳ್ಳ, ವಿಭೂತಿಧಾರಿ, ಶಿವ

ಧಾತುಕೆಡು = ಶಕ್ತಿಕುಂದು
ಧಾತ = ಸೂತ್ರಧಾರಿ
ಧಾರಿಣಿ = ಭೂಮಿ
ಧ್ರುವ = ನಿಶ್ಚಯ, ಸತ್ಯ, ನಿಜ

## ನ

ನಖ = ಉಗುರು
ನಚ್ಚು = ನಂಬು
ನಂಜು = ವಿಷ
ನಡು = ನಾಟು, ಹುಟ್ಟು, ನಡು
ನಡೆತರು = ಬರು, ಆಗಮಿಸು
ನಂಟು = ಸ್ನೇಹ, ಪ್ರೀತಿ, ಗೆಳೆತನ
ನನ್ನಿ = ಸತ್ಯ, ಪ್ರೀತಿ
ನಂದನವನ = ಇಂದ್ರನ ತೋಟ
ನಂದು = ಆರು
ನಯನ = ಕಣ್ಣು
ನಲ್ = ಒಳ್ಳೆಯ, ದೊಡ್ಡ, ಬಲಿಷ್ಠ
ನಲಿ = ಸಂತೋಷಪಡು
ನಲ್ಲ = ಗಂಡ, ಪ್ರಿಯ, ಹರೆಯದವ
ನಲ್ಲೆ = ಹೆಂಡತಿ, ಪ್ರಿಯೆ, ಸ್ತ್ರೀ
ನಸಿ = ಕ್ಷೀಣವಾಗು, ಸೊರಗು
ನಾಕ = ಸ್ವರ್ಗ
ನಾಗ = ಆನೆ, ಸರ್ಪ, ಆಕಾಶ, ಸಿಂಧೂರ, ಸೀಸ, ನಾಗದಾಳಿ ಬೇರು
ನಾಗವಲ್ಲಿ = ಒಂದು ಬಳ್ಳಿ, ವೀಳೆಯ
ನಾಗರ = ಜೇಕಿನ ಬೇರು, ಶುಂಠಿ
ನಾಂಗುಲಿಕ = ವ್ಯಾಲಗಂಧಿ, ಹಳದಿ ಹೂವಿನ ಬಳ್ಳಿ, ಅಗ್ನಿಸಿಲೆ

ನಾಡಮಾತು = ದೇಶದ ಸುದ್ದಿ, ರಾಜನೀತಿ, ಬೇರೊಬ್ಬರ ಸುದ್ದಿ, ಮನೆಯ ಮಾತಲ್ಲದ್ದು
ನಾಣ್ಯ = ಒಳ್ಳೆಗುಣ
ನಾಭಿ = ಹೊಕ್ಕಳು
ನಾಯಕ ನರಕ = ಮುಖ್ಯ ನರಕ, ನರಕಭೇದ
ನಾಯಿಗಳಾರು = ಅರಿಷಡ್ವರ್ಗಗಳು
ನಾರಂಗಿ = ಕಿತ್ತಳೆ
ನಾರಿ = ದಾರ, ನಾರು, ಹೆದೆ, ಸ್ತ್ರೀ
ನಾರು ಬೇರು = ಬಜ
ನಿಗಮ = ವೇದ
ನಿಚ್ಚಟ = ಕಪಟವಿಲ್ಲದ, ಕೇವಲ, ಕೈವಲ್ಯ, ಮೋಕ್ಷ
ನಿಚ್ಚಲು = ( ಸಂ, ನಿತ್ಯ ) ನಿಚ್ಚ, ಯಾವಾಗಲು
ನಿಟಿಲಾಕ್ಷ = ಫಾಳನೇತ್ರ, ಹಣೆಗಣ್ಣ, ಮುಕ್ಕಣ್ಣ, ಶಿವ
ನಿತ್ಯ = ಶಾಶ್ವತ ಜೀವಿ, ಶಿವಶರಣ
ನಿತ್ಯದಾನ = ತಪ್ಪದೆ ಸ್ವಲ್ಪವಾದರೂ ಕೊಡುವದು
ನಿತ್ಯರು = ನಿತ್ಯಾತ್ಮರು, ಶಿವಶರಣರು, ಮುಕ್ತರು
ನಿಧಿ = ಸಮುದ್ರ, ದ್ರವ್ಯ, ನಿಕ್ಷೇಪ
ನಿಧಿಪುರುಷ = ಕುಬೇರ
ನಿರವಯ = ಅಖಂಡ, ನಿಷ್ಕಲ
ನಿರಂಜನ = ಪಾಪರಹಿತ, ಶಿವ
ನಿರುತ = ನಿಶ್ಚಯ
ನಿರ್ಜರ = ಮುಪ್ಪಿಲ್ಲದವ, ದೇವತೆ
ನಿಲಕಾಲ = ವರ್ಷವೆಲ್ಲ, ನಿರಂತರ, ಯಾವಾಗಲು
ನಿಷ್ಪನ್ನ = ಪರಿಪೂರ್ಣ, ಸಿದ್ಧ, ಜೀವನ್ಮುಕ್ತ
ನಿಷ್ಠುರ = ಬಿರಸು ಮಾತು, ಕಠಿಣ, ದಯವಿಲ್ಲದ
ನೀತದೇಶ = ಮನಸ್ಸಿಗೆ ಆಧೀನವಾದ ಶರೀರ, ದೇಹ
ನೀರೆ = ಚೆಲುವೆ, ಸ್ತ್ರೀ
ನುಡಿಸುವವ = ಲಕ್ಷಿಸುವವ, ಸಹಾಯಕ

ನುಣ್ಣಗಾಗು = ನಾಶವಾಗು
ನೂರ್ಕಾಲ = ನೂರು ವರುಷ
ನೆಗಹು = ಮೇಲಕ್ಕೆತ್ತು, ಹೊರು, ಹಿಡಿದೆತ್ತು
ನೆಗಳು = ಮೊಸಳೆ
ನೆಗೆ = ಜಿಗಿ, ಹಾರು
ನೆತ್ತ = ಪಗಡೆಯ ಆಟ
ನೆಮ್ಮು = ಮುಟ್ಟು, ತಡವು, ತುಳಿ, ಹೊಡೆ, ಚುಚ್ಚು, ಕಡಿ
ನೆರವಿ = (ಗಣ) ಸಮೂಹ
ನೆರಹು = ನೆರವು, ಸಹಾಯ, ಜೊತೆ
ನೆರವೀಯು = ಸಹಾಯ ಮಾಡು
ನೆರವೇರಿಸು = ಕೊನೆಗಾಣಿಸು, ಈಡೇರಿಸು
ನೆರೆಗೊಳ್ಳು = ಆಳವಡು, ಸಮರಸವಾಗು
ನೆರೆ = ಕೂಡು, ಸಂಯೋಗವಾಗು, ಕೂದಲು ಬೆಳ್ಳಗಾಗು, ಮೈನೆರೆ, ದೊಡ್ಡವಳಾಗು
ನೆಲಗಟ್ಟು = ತಳಹದಿ, ಆಸ್ತಿವಾರ
ನೇಣು = ಹಗ್ಗ, ಉರ್ಲು
ನೇಸರು = ಸೂರ್ಯ
ನೇಹ = ಸ್ನೇಹ, ಪ್ರೀತಿ
ನೊಸಲು = ಹಣೆ
ನೋಡು = ಲಕ್ಷಿಸು, ಜೋಪಾನಮಾಡು

## ಪ

ಪಕ್ಕ = ಪಕ್ಷ ೧೫ ದಿನ
ಪಕ್ಕಲೆ = ನೀರುತರುವ ತೊಗಲಿನ ಚೀಲ
ಪಂಕಜನಾಭ = ವಿಷ್ಣು
ಪಂಕಜಾರಾತಿ = ಚಂದ್ರ
ಪಂಕೇಜ ಗಂಧಿ = ಕಮಲಗಂಧಿ
ಪಟ = ಆರಿವೆ, ಗಾಳಿಯಪಟ

ಪಡಿ = ಪ್ರತಿ, ಆಳತೆ, ನೇರು

ಪಡೆ = ( ಕ್ರಿ ) ಹೊಂದು, ದೊರಕಿಸು ( ನಾ ) ದಂಡು

ಪಡೆದುಂಬ = ಒತ್ತೆಯಿಂದ ಜೀವಿಸುವ

ಪತಾಕೆ = ನಿಶಾನೆ, ಬಾವುಟ, ಧ್ವಜ

ಪಥ = ದಾರಿ, ಮಾರ್ಗ, ಹಾದಿ

ಪನ್ನಗ = ಹಾವು, ಸರ್ಪ

ಪನ್ನಗಧರ = ಸರ್ಪಭೂಷಣ, ಶಿವ

ಪರಮಾನ್ನ = ಪಾಯಸ, ಕೀರು, ಹುಗ್ಗಿ

ಪರಿವೇಶ = ಗುಡಿ ಕಟ್ಟುವಿಕೆ

ಪರಿಣಾಮ = ಸುಖ, ಕ್ಷೇಮ

ಪರಿಭವ = ಜನ್ಮಚಕ್ರ, ಸಂಸಾರ

ಪರುಶನ = ಸ್ಪರ್ಶನ, ಮುಟ್ಟುವಿಕೆ

ಪರುಷ = ಸ್ಪರ್ಶವೇಧಿ, ಲೋಹವನ್ನು ಚಿನ್ನ ಮಾಡುವ ಕಲ್ಲು

ಪವನ ಪರಿ = ಪ್ರಾಣಾಯಾಮದ ರೀತಿ, ವಿಧಾನ

ಪಸರ = ಕಂಚಗಾರ ಅಂಗಡಿ

ಪಸರಿಸು = ವಿಸ್ತರಿಸು, ಹಬ್ಬು

ಪಾಂಥ = ದಾರಿಕಾರ

ಪಾಟಿಸಿದ = ಅತ್ಯಂತವಾದ, ಅತಿಶಯ

ಪಾತರ = ಕುಣಿತ, ನರ್ತನ

ಪಿತ್ತವರ = ಪಿತ್ತಘ್ನಿ ಬಳ್ಳಿ

ಪಿನಾಕಿ = ತ್ರಿಶೂಲಧಾರಿ, ಶಿವ

ಪಿಸುಣಿ = ನೀಚ, ಚಾಡಿಕೋರ, ಕೋಪಿಷ್ಠ, ಲೋಭಿ

ಪೀಠ = ಗದ್ದುಗೆ, ಶ್ರೇಷ್ಠಸ್ಥಾನ, ಅಧ್ಯಕ್ಷತೆ, ಹಿರಿಯತನ

ಪುತ್ಥಳಿ = ಗೊಂಬೆ

ಪುಂಜ = ಸಮೂಹ ಆಧಿಕ್ಯ

ಪುಡಿಗಡಬು = ಸೂಸಲ ಕಡಬು, ಕರಜೀಕಾಯಿ ಮುಂತಾದದ್ದು

ಪುರಹರ = ತ್ರಿಪುರಾಂತ, ಶಿವ
ಪುರುಷ = ಜೀವಾತ್ಮ, ಆತ್ಮ
ಪೂಸು = ಹಚ್ಚು, ಲೇಪಿಸು, ತಿಕ್ಕು, ಎಣ್ಣೆಮಜ್ಜನ
ಪೃಷ್ಠ = ಗುದ, ಕುಂಡೆ
ಪೆಂಪು = ದೊಡ್ಡತನ, ಉನ್ನತಿ, ಕೀರ್ತಿ
ಪೆರೆಪಿಂಗಿ = ಹೆರೆಹಿಂಗಿ, ( ಪರೆ ) ಅಜ್ಞಾನ, ಸಂಸಾರ,
ಮುಂತಾದದ್ದು
ಪೊಡಮಡು = ನಮಸ್ಕಾರಮಾಡು, ಸಾಷ್ಟಾಂಗ ಹಾಕು
( ೨ ) ಹೊಗಳು, ಕೈವಾರಿಸು
ಪೊಣರು = ಜಗಳ ಮಾಡುವಂತೆ ಕಾಣು
ಪೊರಮಡು = ಹೊರಗೆ ಹೋಗು, ಹೊರಡು
ಪೊರವಾರು = ಹಿಂಭಾಗ, ತಿಗ, ಕುಂಡೆ
ಪೊಳಲು = ನಗರ, ಪಟ್ಟಣ
ಪೊಳ್ಳುಗೆಡೆ = ಜೊಳ್ಳು ಮಾತಾಡು, ವ್ಯರ್ಥ ಮಾತಾಡು,
ಸುಳ್ಳು ಹೇಳು
ಪೋಪವರೆ = ಹೋಗುವರೆ
ಪ್ರತಿಪೆರಸು = ತಿರುಗಿ ಕೂಡಿಸು ( ಕರಗಿಸು )
ಪ್ರವೀಣ = ಜಾಣ, ನುರಿತವ
ಪ್ರಶಸ್ತ = ಅತ್ಯುತ್ತಮ, ಆಕ್ಷೇಪವಿಲ್ಲದ್ದು
ಪ್ರೌಢ = ಜಾಣ. ಜ್ಞಾನಿ
ಪ್ರೌಢತ್ವ = ತರುಣತ್ವ
ಪ್ರೌಢಿ = ಜಾಣ್ಮೆ, ನೈಪುಣ್ಯ
ಪ್ರೌಢೆ = ಸುಶಿಕ್ಷಿತಳು, ಜಾಣೆ, ಮಧ್ಯ ವಯಸ್ಸಿನವಳು

## ಫ

ಫಲಜೀವಿ = ಸಸ್ಯಾದಿ ವೃಕ್ಷಗಳು, ಹಣ್ಣಿನ ಮರಗಳು
ಫಲ್ಗುಣ = ಅರ್ಜುನ

## ಬ

ಬಕ = ಕೊಕ್ಕರೆ
ಬಕ್ಕಣ = ಚೀಲ, ತೋಮರಿ
ಬಗೆ = ತಿಳಿ, ವಿಚಾರಿಸು, ಎಣಿಸು, ವ್ಯವಹರಿಸು
ಬಜ್ಜರ = ವಜ್ರ
ಬಂಚನೆ = ವಂಚನೆ
ಬಟ್ಟೆತ್ತು = ದುಂಡಾಗಿ
ಬಣಗು = ಮೂಢ, ಕ್ಷುಲ್ಲಕ, ವ್ಯರ್ಥಮನುಷ್ಯ
ಬಣ್ಣ = ಅಲಂಕಾರ, ವಸ್ತ್ರಾಭರಣ
ಬಣ್ಣಿಸು = ವರ್ಣಿಸು, ಹೇಳು, ವಿವರಿಸು
ಬಂಡ = ಬಂಡವಳ, ದ್ರವ್ಯ, ಬೈಗಳು
ಬಂಡುಗೆಲೆ = ಬಂಡುನುಡಿ, ಹೊಲಸು ಮಾತಾಡು
ಬಂಡುಣಿ = ಜೇನುನೊಣ
ಬನ್ನ = ಕಷ್ಟ, ತೊಂದರೆ
ಬರಡಿಗೆ = ಹುರುಳಿಲ್ಲದ, ವ್ಯರ್ಥವಾದ
ಬರಡು = ಗೊಡ್ಡಾವು, ಹಿಂಡದ ಪಶು
ಬರುದೊರೆ = ( ಬರಿ + ತೊರೆ) ನೀರಿಲ್ಲದ ( ಹಳ್ಳ), ಹೊಳೆ
ಬರೆವ = ಕರಣಿಕ, ವಿಪ್ರ
ಬಲ = ಜನ, ಧನಶಕ್ತಿ
ಬಲವಂತ = ಶೂರ
ಬಲಿದು = ಬಹಳವಾಗಿ, ಅಹಂಕಾರದಿಂದ
ಬಲುಮೆ = ಬಲಾತ್ಕಾರ, ಜುಲುಮೆ
ಬಲ್ಲತನ = ಜಾಣತನ
ಬಲ್ಲಂದ = ಬಲ್ಲವ, ಜಾಣ, ಪಂಡಿತ, ಸರ್ವಜ್ಞ
ಬಲ್ಲಿತ್ತು = ಮೀರಿದ್ದು, ದೊಡ್ಡದು
ಬಳರು = ಶೂರರು
ಬಳಸು = ಬಳಿಕೆ, ಸಂಗ, ಒಡನಾಟ

ಬಳ್ಳ = ಆಳತೆಯ ನೀರು
ಬಳ್ಳು = ನರಿ, ಶಿವ
ಬಾಗೆಯ ಬೇರು = ಒಂದು ತರದ ಗಿಡ, ಸಿರಸಲ
ಬಾಟೆ = ದಾರಿ, ರಸ್ತೆ
ಬಾಡು = ಮಾಂಸ
ಬಾಳದ ಬಿಳಲು = ಬಾಳದಬೇರು
ಬಾಳಲೋಚನ = ಹಣೆಗಣ್ಣ, ಶಿವ
ಬಾಳ = ಕತ್ತಿ, ಖಡ್ಗ
ಬಾಸಿಂಗ = ಲಗ್ನದಲ್ಲಿ ಕಟ್ಟುವ ಹೂವಿನ ದಂಡೆ
ಬಿಂಕ = ಗರ್ವ, ಜಂಭ, ಕುಟಿಲತೆ
ಬಿಂಗು = ಅಭ್ರಕ
ಬಿಚ್ಚು = ಭಿಕ್ಷುಕ, ತಿರುಕ
ಬಿಟ್ಟಾಡು = ಬಿಟ್ಟು ತಿರುಗಾಡು, ಬೆನ್ನಹಿಂದೆ ಬೈ
ಬಿತ್ತರಿಸು = ವಿಸ್ತರಿಸು, ಹಬ್ಬು
ಬಿತ್ತು = ಬೀಜ, ಸಸಿ, ನಾಟಿಕೆ
ಬಿದಿರು = ದಾನಮಾಡು, ಕೊಟ್ಟುಬಿಡು, ಹರಡು
ಬಿದ್ದನಡು = ಶಕ್ತಿಹೋದ, ಬಾಗಿದನಡು
ಬಿದ್ದಿರು = ಮಲಗಿರು, ರೋಗದಲ್ಲಿರು
ಬಿನಗು = ಕೀಳು, ಪಾಮರ, ಕ್ಷುದ್ರ
ಬಿನ್ನಣದಿ = ಕೌಶಲ್ಯದಿಂದ
ಬಿನ್ನಾಣ = ವಿಜ್ಞಾನ, ಪ್ರತ್ಯಕ್ಷ, ಅಪರೋಕ್ಷಜ್ಞಾನ
ಬಿಮ್ಮಗೆ = ಗಟ್ಟಿಯಾಗಿ, ಬಿಗಿಯಾಗಿ, ಹೊಟ್ಟೆತುಂಬ
ಬಿರಸು = ಬಿರಸುಮಾತು, ಬಿರಿನುಡಿ, ಬಾಣದ ಹೊಡೆತ
ಬಿಳಿಲು = ಬಿಣಿಲು, ಉದ್ದವಾದ ಬೇರು
ಬೀಡುಗಾಲು = ದಪ್ಪವಾದ ಇಲ್ಲವೆ ಅಗಲವಾದ ಕಾಲು
ಬುದ್ಧಿ = ಹಿತೋಪದೇಶ, ಸುವಿಚಾರ, ಒಳ್ಳೆಯ ಮನಸ್ಸು, ಪ್ರಜ್ಞೆ, ವಿಚಾರಶಕ್ತಿ

ಬೂದಿ = ಭಸ್ಮ, ವಿಭೂತಿ
ಬೂರ = ಒಂದು ತರದ ಅರಳಿಯ ಮರ, ಬೂರಲ
ಬೆಡಗು = ಸೌಂದರ್ಯ, ಒಗಟು
ಬೆಟ್ಟಿತ್ತು = ಬಹಳವಾಗಿ, ಅತಿಶಯ, ಕಠಿಣವಾದ
ಬೆನಕ = ಗಣೇಶ
ಬೆನ್ನನಳಿ = ಸುಷುಮ್ನಾನಾಡಿ
ಬೆಂಚ = ಕೆರೆ
ಬೆಂದ = ಸುಟ್ಟ
ಬೆಂದುದು = ಅನ್ನ, ಆಹಾರ
ಬೆರಣಿ = ಕಾಕುಳ್ಳು
ಬೆರಳು ನಾಲ್ಕು = ಚತುರ್ದಳ ಕಮಲ
ಬೆರಳು ಚಾಳಿ = ಜಪದಲ್ಲಿ ಬೆರಳೆಣಿಸುವುದು
ಬೆಲೆವೆಣ್ಣು = ವೇಶ್ಯೆ, ಸೂಳೆ
ಬೆಸಗೊಳ್ಳು = ಕೇಳು, ವಿಚಾರಿಸು, ಪ್ರಾರ್ಥಿಸು
ಬೆಸಲಾದ = ಗಬ್ಬವಾದ
ಬೆಸಸು = ಕೇಳು, ಬೇಡಿಕೊಳ್ಳು, ಬಿನ್ನವಿಸು
ಬೆಳಗು = ಬೆಳಕು, ಜ್ಞಾನಜ್ಯೋತಿ, ಅನುಭಾವ
ಬೆಳ್ಳಾಳು = ಬೋಳೆಯ ಮನುಷ್ಯ, ಅಸಿಸರೆಯ, ದಡ್ಡ
ಬೆಳ್ಗೊಡೆ = ಬಿಳಿ ಕೊಡೆ, ಶ್ವೇತ ಛತ್ರ
ಬೇರ = ಬಡ್ಡಿಯ ಸಾಲ, ವ್ಯವಹಾರ, ವ್ಯಭಿಚಾರ
ಬೇಹಾರ = ವ್ಯಾಪಾರ, ಇಂದ್ರಿಯ ಕ್ರಿಯೆ
ಬೈಚಿಟ್ಟದ್ದು = ಕೂಡಿಟ್ಟದ್ದು, ಜ್ಞಾನಸಂಪಾದನೆ
ಬೈತ್ರ = ಹಡಗು, ಡೋಣಿ, ತೆಪ್ಪ
ಬೊಗನೆ = ಉದ್ಯೋಗ [ ಹೊಲಿದದ್ದು
ಬೊಂತೆ = ರಗಟೆ, ಹೊದಿಕೆ, ಕೌದಿ, ತುಂಡು ಕೂಡಿಸಿ
ಬೊಬ್ಬುಳಿ = ಗುರುಳಿ, ಬರುಗು, ಸಂಸಾರದ ಭ್ರಮೆ, ಅಜ್ಞಾನ
ಬೊಳ್ಳಿಡು = ಬೊಬ್ಬಿಡು, ಒದರು

ಬೋಗಾರ = ಕಂಚುಗಾರ
ಬೋದಿಗೆ = ಕಂಬದ ಮೇಲಿನ ಕಲ್ಲು
ಬೋಡ = ಹಲ್ಲಿಲ್ಲದವ, ಬಚ್ಚ       [ ಊರ ಮುಂದಿನ ಕಲ್ಲು
ಬೋರ್ಕಲ್ಲು = ಗುಂಡುಕಲ್ಲು, ದೊಡ್ಡ ಬಂಡೆ,
ಬ್ರಹ್ಮಸು = ಬ್ರಾಹ್ಮಣ, ಬ್ರಹ್ಮನ ಮಗ, ಕಾಮ
ಬ್ರಹ್ಮಾಂಡ = ಸೃಷ್ಟಿ, ವಿಶ್ವ

## ಭ

ಭಗ್ಗ = ಭರ್ಗ, ಶಿವ
ಭಂಗ = ನಾಚಿಕೆ, ಅಪಮಾನ, ನಷ್ಟ, ತೊಂದರೆ
ಭವಣೆ = ರೋಗ, ಸಂಕಟ
ಭವಿ = ಭವವುಳ್ಳವ, ಭಕ್ತನಲ್ಲದವ
ಭಾತಿ = ಪ್ರಕಾಶ
ಭಾನು = ಸೂರ್ಯ
ಭಾಂಡ = ಪಾತ್ರೆ, ಗಡಿಗೆ
ಭಾಷೆ = ಮಾತು, ಕೊಟ್ಟ ವಚನ, ಪ್ರತಿಜ್ಞೆ
ಭಿತ್ತಿ = ಗೋಡೆ
ಭುಜಗ = ಹಾವು, ಸರ್ಪ, ಆದಿಶೇಷ, ವಿಟ
ಭುವನ = ಲೋಕ
ಭೂತೇಶ = ಭೂತಗಳ ಒಡೆಯ, ಪಶುಪತಿ, ಈಶ್ವರ
ಭೂರಿ = ಬಹಳ, ಅತಿಶಯ
ಭೃಂಗ = ಭ್ರಮರ, ಗುಂಗಿಹುಳ, ಚಕೋರ ಪಕ್ಷಿ
ಭೋಂಕನೆ = ಫಕ್ಕನೆ, ಭೋರ್ಗರೆಯುತ್ತ
ಭ್ರೂಣ = ಗರ್ಭದೊಳಗಿನ ಪಿಂಡ

## ಮ

ಮಕರ = ಮೊಸಳೆ
ಮಕರ ತೋರಣ = ದೊಡ್ಡ ತೋರಣ, ಸಂತೋಷಕ್ಕೆ ಗುರುತು

ಮಗಿಲು = ಇಳಿಜಾರು, ಮಾಳಿಗೆ, ಚಾವಣಿ
ಮಗಿಯರಿಕ್ಷ = ಮಘಾ ನಕ್ಷತ್ರ
ಮಂಕಿ = ಹುಚ್ಚು ಹೆಂಗಸು
ಮಚ್ಚರ = ಮತ್ಸರ. ಗರ್ವ
ಮಂಚಿಕೆ = ಸಣ್ಣಅಟ್ಟ
ಮಂಜರಿ = ಬೆಕ್ಕು, ಬಾವುಗ
ಮಡಿ = (ಕ್ರಿ) ಸಾಯು, (ನಾ) ರೇಶಿಮೆಯ ವಸ್ತ್ರ
ಮಣಿಯಿಸು = ನಮಸ್ಕರಿಸಿಕೊಳ್ಳು, ಪೂಜಿಸಿಕೊಳ್ಳು
ಮಂಡನ = ಅಲಂಕಾರ, ಆಭರಣ, ಮಂಡಿಸು, ಭೂಷಣ
ಮತ್ತತೆ = ಕುಡಿಕತನ, ಅಮಲು
ಮಥನ = ತಿಕ್ಕಾಟ, ಜಗಳ, ಕಾಳಗ
ಮದವಾರಿ = ಪ್ರೇಮರಸ
ಮದಿಸು = ಗರ್ವಿಸು, ಸೊಕ್ಕು ಮಾಡು
ಮದ್ದು = ಔಷಧ, ಗಿಡ, ನಂಜು, ವಿಷ
ಮಧು = ಜೇನುತುಪ್ಪ
ಮಧ್ಯ ನಡು, ಸೊಂಟ
ಮಂತ್ರ = ಆಪ್ತಾಲೋಚನೆ, ಸುವಿಚಾರ, ವಿವೇಕ, ದೂರದೃಷ್ಟಿ
ಮಂದರಧರ = ಮಂದರಪರ್ವತವನ್ನು ಎತ್ತಿ ಹಿಡಿದವ, ವಿಷ್ಣು
ಮನಸಿಜಾರಿ = ಕಾಮನನ್ನು ಕೊಂದವ, ಶಿವ
ಮನ್ನಣೆ = ಮರ್ಯಾದೆ, ಬಹುಮಾನ
ಮನ್ನೆಯ = ಸೇನಾಪತಿ, ಮುಖ್ಯಸ್ಥ, ಪಾಳ್ಯಗಾರ
ಮರವು = ಅಜ್ಞಾನ, ವಿಸ್ಮೃತಿ
ಮಲ = ಪಾಪ, ದುಃಖ, ಹೊಲಸು
ಮಲಯಜ=ಮಲಯ ಪರ್ವತದಲ್ಲಿ ಹುಟ್ಟಿದ್ದು, ಗಂಧದ ಗಿಡ
ಮಸಣ = ಸ್ಮಶಾನ, ಸಮಾಧಿ

ಮಸಿವಣ್ಣ = ಕಪ್ಪು, ವ್ಯರ್ಥ, ನಿರರ್ಥಕ
ಮಸೆ = ಮಸೆದಾಟ, ಯುದ್ಧ, ಕಾಳಗ
ಮಾಚು, = ಮರೆಮಾಡು, ಕ್ಷಮಿಸು
ಮಾಡ = ಮಹಡಿ, ಅಂತಸ್ತಿನ ಮನೆ, ಮೇಲ್ಮಾಳಿಗೆ,
ಮಾಣದೆ = ಬಿಡದೆ, ಯಾವಾಗಲು
ಮಾಣಿಪು = ನಿಲ್ಲಿಸು, ತಡೆ, ತಿದ್ದು, ಸರಿಪಡಿಸು
ಮಾತುಲ = ಮಾವ
ಮಾತುಲಂಗಕ = ಮಾದಳ ಗಿಡ
ಮಾನ = ಎರಡು ಚಿಟ್ಟೆ, ಒಂದು ಅಳತೆ
ಮಾನವತಿ = ಪತಿವ್ರತೆ, ಸಜ್ಜನೆ
ಮಾನಸ = ಮನುಷ್ಯ
ಮಾನಿಸ್ಥ = ಸತ್ಪುರುಷರ ನೊತ್ತು
ಮಾನಿಸು=ಇನ್ನೊಬ್ಬರಿಗೆ ತಿಳಿಸು, ಪ್ರಕಟ್ಯಮಾಡು, ಗೌರವಿಸು
ಮಾರ = ಮನ್ಮಥ, ಕಾಮ
ಮಾರಸಂಹರ = ಶಿವ
ಮಾರಿ = ನೊಂಕು ರೋಗ, ಪಿಡುಗು, ಅಪಮಾನ, ಮರಣ
ಮಾರುತ = ಗಾಳಿ
ಮಾರ್ತಂಡ = ಸೂರ್ಯ
ಮಾಸ = ಗರ್ಭದಲ್ಲಿ ಹುದುಗಿರುವ ಚೀಲ, ಹೊಲಸು
ಮಿಗ = ಅಡವಿಯ ಮೃಗ, ಮಿಕ, ಹಂದಿ
ಮಿಗು = ಉಳಿ, ಹೆಚ್ಚಾಗು
ಮಿಂಚಾಗು = ಅಪರೂಪವಾಗಿ ಬರು
ಮಿಾಪರೆ = ಮಿಂದರೆ, ಜಳಕ ಮಾಡಿದರೆ
ಮೀಟು = ಅತಿಶಯ, ಮದವೇರಿದ, ಹೊರಚಿಮ್ಮುವ
ಮೀಹ = ಜಳಕ, ಸ್ನಾನ
ಮುಕುಟ = ಕಿರೀಟ
ಮುಕುರ = ಕನ್ನಡಿ

ಮುಕ್ಕಣ್ಣ = ಶಿವ
ಮುಗುಳಿ = ಜಾಲಿಯ ಜಾತಿಯ ಗಿಡ
ಮುಗ್ಗು = ಎಡವಿಬೀಳು, ತಗ್ಗಿನಲ್ಲಿಬೀಳು, ಮುಳುಗು
ಮುಟ್ಟಿದ = ಬಂದ, ಪ್ರಾಪ್ತವಾದ
ಮುಟ್ಟಿಡೆ = ಕಂಟಕ, ಸಂಕಟ
ಮುಂಡ = ದಿಂಬ, ತಲೆಹೋದ ಶರೀರ
ಮುಂಡಾಟ = ಮುದ್ದಾಟ
ಮುಂಡಿಗೆ = ತೊಲೆ, ಜಟಿಲಪ್ರಶ್ನೆ, ಸಮಸ್ಯೆ
ಮುದ್ದು = ಪ್ರೀತಿ, ಸುಂದರವಾದ
ಮುನಿಸು = ಕೋಪ, ಸಿಟ್ಟು
ಮುಂಬೆಳಗು = ಯೌವನ, ಹರೆ
ಮುರವಾಳ = ಬಾಳುವೆಮುರಿದ, ಹೆಂಡತಿಸತ್ತ
ಮುರುಕ = ಮುರಿದ, ಸೊಗು, ವೈಯ್ಯಾರ, ಬೆಡಗಿನ
ಮುರುವ = ಹುಚ್ಚ, ಊನ, ತಿರುಕ
ಮೂದಲೆ = ಹಾಸ್ಯ, ನಿಂದೆ, ಕುವಾಡ
ಮೂರರುಚಿದೋರಿ = ಸತ್ವ ಮುಂತಾದ ಗುಣತ್ರಯಗಳಿಂದ
ಇಲ್ಲವೆ ಮಲತ್ರಯಗಳಿಂದ ಕೂಡಿದ
ಮೃಡ = ಶಿವ
ಮೇಗೆ = ಮೇಲೆ, ಇದರ ಹೊರತು
ಮೇಟಿವಿದ್ಯೆ = ಒಕ್ಕಲುತನ
ಮೇಧಿನಿ = ಭೂಮಿ, ಲೋಕ
ಮೇರೆತಪ್ಪಿದ = ಮಿತಿಮೀರಿದ, ಅವಮರ್ಯಾದೆಯ
ಮೇಲು = ಹಿತ, ಕಲ್ಯಾಣ
ಮೇಳ = ಗಳೆತನ, ಸಂಗ, ಐಕ್ಯ, ರುಚಿ, ಸಮರಸ
ಮೈ = ಶರೀರ, ದೇಹ, ಯೋನಿ
ಮೈಥುನ = ಕೂಟ, ಸಂಭೋಗ, ಸುರತ
ಮೊಗ್ಗರ = ಗುಂಪು, ಜಂಗುಳಿ

ಮೊತ್ತ = ಗುಂಪು, ಸಮೂಹ
ಮೊರೆ = ಒದರು, ಶಬ್ದಮಾಡು, ಪ್ರಾರ್ಥಿಸು
ಮೋಚಿದ ಹೆಣ್ಣು = ಗಂಡಸತ್ತಾಕೆ, ರಂಡೆಮುಂಡೆ
ಮೋಟ = ಕೈಯಿಲ್ಲದ, ಮೊಂಡ
ಮೋಟೆತ್ತು = ಕುಂಟ ಎತ್ತು, ಅಡನಾಡಿ, ಮೊಂಡ, ಅಗಡು
ಮೋದು = ಹೊಡೆ, ಕುಟ್ಟು
ಮೋಳೆ = ಏಡಿ, ಉಪ್ಪಿನರಾಶಿ, ಜವಳು

## ಯ

ಯಮ = ಜವ, ಸೂರ್ಯನಮಗ, ಮರಣಕ್ಕೆ ಅಧಿದೇವತೆ
ಯೇತ = ಗಣಿಯಿಂದ ಹೊಡೆಯುವ ಕಪ್ಪಲೆ
ಯೋಗ = ಯೋಗಶಾಸ್ತ್ರ, ನಕ್ಷತ್ರಯೋಗ, ಲಗ್ನ, ಕೂಡಿ-
ಕೊಳ್ಳೋಣ, ಸ್ನೇಹ, ಐಕ್ಯ, ಸಾಮರಸ್ಯ
ಯೋಗವಟ್ಟಿಗೆ = ಯೋಗಿ ಸುತ್ತಿಕೊಳ್ಳುವ ವಸ್ತ್ರ
ಯೋನಿಜ = ಸ್ತ್ರೀಯಿಂದ ಹುಟ್ಟಿದವ, ಮನುಷ್ಯ

## ರ

ರಂಗು = ಕೆಂಪು, ಸುಂದರವಾದ
ರಚ್ಚೆ = ಕೀಳುನುಡಿ, ಬೈಗಳ, ಬಂಡುಮಾತು
ರಚ್ಚೆಗೆಲೆ = ಕೂಗಾಡಿ ಅವಾಚ್ಯ ನುಡಿಗಳನ್ನಾಡು
ರಜ = ಬೆಳ್ಳಿ, ಧೂಳು
ರಸ = ಪಾದರಸ, ಪಾರಜ
ರಸದಾಳಿ = ಒಂದು ಜಾತಿಯ ಕಬ್ಬು
ರಸಭಸ್ಮ = ಪಾರಜದ ಭಸ್ಮ
ರಾಜಾನ್ನ = ಶ್ರೇಷ್ಠವಾದ ಸಣ್ಣಭತ್ತ, ವಾಸನೆಯ ಅಕ್ಕಿ
ರಿಪು = ವೈರಿ, ಇದಿರಾಳು
ರೀತಿ = ಶೀಲ, ಶುದ್ಧನಡತೆ
ರುಜೆ = ರೋಗ

ರೂಢಿ = ಭೂಮಿ
ರೂಢಿಪತಿ = ಅರಸು

## ಲ

ಲಡ್ಡುಗೆ = ಲಾಡು, ಸಕ್ಕರೆಯ ಉಂಡೆ
ಲಲಿತ = ಸುಲಭ, ಸುಲಲಿತ, ಸುಂದರ
ಲಿಖಿತ = ಹಣೆಯಬರಹ
ಲೆಂಡ = ಲಂಡ, ತುಂಟ, ಮಾತುಕೇಳದ
ಲೇಪ = ವಜ್ರಲೇಪ
ಲೋಕೇಶ = ಈಶ್ವರ, ಶಿವ
ಲೋಚನ = ಕಣ್ಣು, ನೋಟ, ದೃಷ್ಟಿ
ಲೋಲುಪ್ತ = ಮುಳುಗಿದ
ಲೋವೆ = ಚಪ್ಪರ, ಚಾಟು, ಪಡಸಾಲೆ

## ವ

ವಂಶ = ಪೂರ್ವಾಶ್ರಯ, ಜಾತಿ, ಕುಲ
ವಂಗ = ಸೀಸ
ವಜ್ರ = ಉಳಿ, ಚಾನ, ಸಿಡಿಲು
ವದನ = ಮುಖ ಬಾಯಿ
ವದನೆ = ಸುಂದರ ಮುಖವುಳ್ಳವಳು, ಸ್ತ್ರೀ
ವನಧಿ = ಸಮುದ್ರ
ವನ್ಹಿ = ಬೆಂಕಿ
ವಂದ್ಯ = ಹೊಗಳಿಕೆ ಯೋಗ್ಯ
ವರರುಚಿ = ವೈಯ್ಯಾಕರಣಿಯೂ ಜ್ಯೋತಿಜ್ಞನೂ [ಆದವನ ಹೆಸರು
ವರುಷ = ಮಳೆ
ವಸನ = ವಸ್ತ್ರ, ಬಟ್ಟೆ
ವಸುಧೆ = ಭೂಲೋಕ, ಜಗತ್ತು
ವಸುಭಟ = ಅಡಸಲದಗಿಡ

ವಹಿಲ = ಬೇಗ, ತ್ವರೆಯಾಗಿ
ವಾಜಿ = ಕುದುರೆ
ವಾಡಿಗ = ವಾಟಿಕ, ತೋಟದಲ್ಲಿ ಬೆಳೆಯುವದು, ಅಡಿಕೆ
ವಾದ = ರಸವಾದ, ರಸಸಿದ್ಧಿ
ವಾದಿ = ರಸಜ್ಞ, ಸಿದ್ಧ, ಬಂಗಾರ ಮಾಡುವವ
ವಾಯು = ವ್ಯರ್ಥ, ನಿಷ್ಪ್ರಯೋಜನ
ವಾರಾಂಗನೆ = ವೇಶ್ಯಾಸ್ತ್ರೀ
ವಾರಿ = ನೀರು
ವಾರಿಧಿ = ಸಮುದ್ರ
ವಾರಿನಿಧಿ = ಜಲಾಶಯ, ಸಮುದ್ರ
ವಾಸು = ಓದು, ಹೇಳು
ವಿಂಗಡ – ಪ್ರತ್ಯೇಕವಾದ, ಜನವಿಲ್ಲದ ಏಕಾಂತ
ವಿತರಣ = ತ್ಯಾಗಬುದ್ಧಿ, ಉದಾರ ಮನಸ್ಸು
ವಿತ್ತ = ಹಣ, ಐಶ್ವರ್ಯ
ವಿನಯ = ದೈನ್ಯಭಾವ, ಸುಶೀಲ
ವಿಪ್ಪಣ = (೨ ಹಣ), ೯ ಆಣೆ ೩ ಕಾಸು
ವಿರಳವಾಡು = ಅಪರೂಪವಾಗಿ ತಿರುಗಾಡು
ವಿಶ್ವನುತ = ಪ್ರಸಿದ್ಧವಾದ, ಹೆಸರಾದ, ಕೀರ್ತಿವೆತ್ತ
ವಿಷಮುಷ್ಟಿ = ಒಂದು ಜಾತಿಯ ವನಸ್ಪತಿ
ವಿಷಯವುಳ್ಳವ = ವಿಷಯಲಂಪಟ
ವೀಸ = ಒಂದು ಆಣೆ
ವೃತ್ತ = ಬಟುವಾದ, ದುಂಡಗಾದ, ಪುಷ್ಟ
ವೃಷಕುಂಭ = ಆಟರೂಷ ( ವನಸ್ಪತಿ )
ವೇದಿಸು = ಹಿಡಿದು ತೋರಿಸು, ಸ್ಪಷ್ಟವಾಡು
ವೇಧಿಸು = ಸಂಬಂಧಿಸು, ಕೂಡಿಸಿ ಹೊಡೆ, ತೂತುಕೊರೆ
ವ್ಯಸನ – ಚಿಂತೆ, ದುಶ್ಚಟ, ಕೆಟ್ಟರೂಢಿ
ವ್ರಣ – ಹುಣ್ಣು, ಕುರು, ಗಡ್ಡೆ

## ಶ

ಶಂಕರನ ದಿಕ್ಕು = ದಕ್ಷಿಣ ದಿಕ್ಕು
ಶಬರ = ಬೇಡ, ಬೇಟೆಗಾರ, ಯೋಧ
ಶಯು = ಮಂಚ, ಹಾಸಿಕೆ, ಕೈ
ಶಯುನ = ನಿದ್ದೆ, ಕೂಟ
ಶರ = ಬಾಣ
ಶರಧಿ = ಸಮುದ್ರ
ಶಶಕ = ಮೊಲ
ಶಶನಯುನ = ಮೊಲದ ಕಣ್ಣು, ಒಂದು ಜಾತಿಯು ವನಸ್ಪತಿ, ಬಳ್ಳಿ
ಶಶಿ = ಚಂದ್ರ
ಶಶಿಧರ = ಚಂದ್ರಶೇಖರ, ಶಿವ
ಶಾನೆ = ಬಹಳ, ದೊಡ್ಡ
ಶಿಖಿ = ಬೆಂಕಿ, ಜುಟ್ಟು ನವಿಲು
ಶಿಶುಮಾರ = ಒಂದು ಜಾತಿಯು ಗಿಡ
ಶುಕ = ಗಿಳಿ, ಮೊಸಳೆ
ಶುಕ್ಲ = ಬಿಳಿ, ಧಾತು, ರೇತಸ್ಸು
ಶುನಕ = ನಾಯಿ
ಶೂಲಿ = ಶೂಲಪಾಣಿ, ಶಿವ
ಶೃಂಗ = ಕೋಡು, ಶಂಖ, ಆನೆ
ಶೃಂಗಿ = ಬಿಳಿಬಂಗಾರ
ಶ್ರವಣ = ಜೈನ ಇಲ್ಲವೆ ಬೌದ್ಧ, ಸನ್ಯಾಸಿ

## ಷ

ಷಂಡ = ನಪುಂಸಕ, ಕೊಜ್ಜೆ

## ಸ

ಸಗ್ಗಲಿ = ನೀರು ಹಾಕುವ ತೊಗಲಿನ ತೊಟ್ಟಿ, ಪಕಾಲಿ
ಸಂಗರ = ಸಂಗ್ರಾಮ, ಯುದ್ಧ, ವ್ಯಥೆ

ಸಂಗಾಟ = ಸ್ನೇಹ, ಪ್ರೀತಿ, ಒಡನಾಟ
ಸಂಗಾತಿ = ಸ್ನೇಹಿತ
ಸಂಗೊಳಿಸು = ಜೋಡಿಸು, ಕೂಡಿಸು, ಧರಿಸು,
ಲಿಂಗಾಂಗಕ್ಕೆ ಅಭೇದ್ಯವನ್ನು ತೋರಿಸು
ಸಂಗ್ರಾಮ = ಯುದ್ಧ, ಕದನ
ಸಜ್ಜನೆ = ಸುಶೀಲೆ, ಪತಿವ್ರತೆ, ಪಾತಿವ್ರತ್ಯ
ಸಜ್ಜೆ = ಶಯ್ಯೆ, ಹಾಸಿಕೆ, (೨) ಲಿಂಗವಿಡುವ ಕರಡಿಗೆ,
ಚೌಕ, (೩) ದೇಹ
ಸಂಚಕ =ಸಂಚಕಾರ, ಮುಂಗಡ
ಸಂಚಯಿಪು = ಸಂಚಯಿಸು, ಸಂಗ್ರಹಿಸು, ಕೂಡಿಡು
ಸಂಚಲದ = ಬಹಳ ಅಲ್ಲಾಡುವ, ಯುಕ್ತಿಯಿಂದ ಮಾಡಿದ
ಸಂಚಲೆ = ತಿರುಗಾಡುವವಳು, ಚಂಚಲ ಬುದ್ಧಿಯುವಳು
ಸಂಚಿತ = ಸಂಚಿತ ಕರ್ಮ
ಸಂಚಿ = ಚೀಲ
ಸಂಚು = ಒಳಸಂಚು, ಗುಟ್ಟು, ಮೋಸ
ಸಂಜೆ = ಸಂಧ್ಯಾವಂದನೆ
ಸಟೆ = ಸುಳ್ಳು
ಸಟ್ಟುಗ = ಹುಟ್ಟು, ಸೌಟು
ಸಣ್ಣಿಸು = (೧) ಸೂಸು ಮಣ್ಣಿನಿಂದ ಮೆತ್ತು
(೨) ದೇಹವನ್ನು ಕೊರಗಿಸಿ ಕೂಡಿಡು
ಸತ್ತಿಗೆ = ಕೊಡೆ, ಛತ್ತರಿ
ಸದನ=ಮನೆ, ಸ್ಥಳ
ಸದರ = (೧) ಸುಲಭ, (೨) ಭೀಕರ
ಸನುಮತ = ಒಪ್ಪಿಗೆ
ಸಂದ = (೧) ಪ್ರಾಪ್ತವಾದ, (೨) ಯೋಗ್ಯವಾದ
(೩) ಪ್ರಸಿದ್ಧವಾದ
ಸಂದರಿವು = ಬ್ರಹ್ಮಜ್ಞಾನ, ವೇದಾಂತ ಇಲ್ಲವೆ ಸಿದ್ಧಾಂತ,
ಅನುಭವಜ್ಞಾನ

ಸಂದರೂ = ದೊರೆತರೂ, ಕೊಟ್ಟರೂ
ಸಂದಿಸಿ = ಕೂಡಿಕೊಂಡು
ಸಂದಿಸಿಹ = ಬಂದ, ಕೂಡಿಕೊಂಡ, ಪ್ರಾಪ್ತವಾದ
ಸಂದಿಸು = ಕೂಡು, ಸುತ್ತುಗಟ್ಟು, ( ಕ್ರಿ ) ಮುತ್ತು
ಸಂದಿಹುದು = ಯೋಗ್ಯವಾಗಿರುವುದು, ಒಪ್ಪುವುದು, ಸಲ್ಲುವುದು
ಸಮುಗೋಷ್ಠಿ = ಸಲುಗೆಯ ಮಾತುಕಥೆ, ಸರಸ ನುಡಿ
ಸಮರ = ಯುದ್ಧ, ಕಾಳಗ
ಸಮಿಧೆ = ಸೌದೆ, ಉರುವಲ
ಸರವೆ = ಹುಲ್ಲಿನ ಹಗ್ಗ, ಹೊರಸಿನ ನುಲಿ
ಸರಸ = ಸರಿಕರಂತೆ ಮಾತಾಡು, ಸಲುಗೆಯ ಮಾತು
ಸರಸಿ = ಸರೋವರ
ಸರಸಿಜೋದ್ಭವ = ಕಮಲದಲ್ಲಿ ಹುಟ್ಟಿದವ, ಬ್ರಹ್ಮ
ಸರಿಮಾತು = ಯೋಗ್ಯ ಉತ್ತರ, ಪ್ರತ್ಯುತ್ತರ, ಸಲ್ಲಾಪ
ಸರ್ಪಭೂಷಣ = ಶಿವ
ಸಲೆ = ಚನ್ನಾಗಿ
ಸವಲಕ್ಷ = ಒಂದು ಲಕ್ಷಕ್ಕೆ ಸರಿ
ಸವಿ = ತಿನ್ನು, ರುಚಿನೋಡು, ಕುಡಿ
ಸಂವಳಿಸು = ಬೆರಸು, ಮಿಶ್ರಮಾಡು
ಸಸಿನ = ನೇರ, ನೆಟ್ಟಗೆ, ಕ್ಷೇಮಕರ
ಸಹಜ = ಸ್ವಾಭಾವಿಕವಾಗಿ ಭಕ್ತಿ ಗುಣವುಳ್ಳವ, ಸಹಜ ಮಾಟ ಸ್ಥಲದಲ್ಲಿರುವ ಭಕ್ತ
ಸಹದೇವಿ = ಒಂದು ಜಾತಿಯ ಕರಿಕೆ, ಜೇಕಿನ ಬೇರು
ಸಾಗರ = ಸಮುದ್ರ
ಸಾಟಿ = ಸರಿ, ಸಮ
ಸಾಂಬ್ರಾಣಿ = ಶಹಮೃಗ, ಉತ್ತಮ ಜಾತಿಯ ಕುದುರೆ, ತೇಜಿ
ಸಾರ = ಶ್ರೇಷ್ಠ, ರಸ, ಅಮೃತ, ಅರ್ಕ

ಸಾರಾಯ = ಸತ್ವ, ಮೋಕ್ಷ
ಸಾರು = ಹತ್ತಿರ ಹೋಗು, ಸಮೀಪಿಸು
ಸಾಲಿ = ಅಕ್ಕಸಾಲಿ, ಕುಂಬಾರಸಾಲಿ ಮುಂತಾದ್ದು
ಸಾಸಿ = ಸಾಹಸಿ, ಬಲ್ಲಿದ, ಧೈರ್ಯವುಳ್ಳವ
ಸಿಗ್ಗು = ನಾಚಿಕೆ
ಸಿಂಗಿ = ಚುಂಚು, ಚೂಪಾದ ಮುಳ್ಳು
ಸಿಡುಕು = ಶೀಘ್ರಕೋಪ
ಸಿದಿಗೆ = ಹೆಣ ಹೊರುವ ಚಟ್ಟ
ಸಿದ್ದಾಯ = ತೆರಿಗೆ, ಕಂದಾಯ
ಸಿಂಧು = ಸಮುದ್ರ
ಸಿರಿಗರ = ದುಡ್ಡಿನ ದೆವ್ವ, ರೊಕ್ಕದ ಭ್ರಾಂತಿ
ಸೀಗುರಿ = ಚೌರಿ, ಕೂದಲದ ಬೀಸಣಿಕೆ
ಸುಕ್ಕು = ಮುದುರಿಕೊಳ್ಳು, ಒಣಗು
ಸುಗುಡಿ = ಮೈನೆರೆಯದ ಹೆಂಗಸು
ಸುಘೃತ = ತಿಳಿದುಪ್ಪ
ಸುದತಿ = ಸುಂದರವಾದ ಹಲ್ಲುಳ್ಳವಳು, ಸ್ತ್ರೀ
ಸುಧಿ = ಬುದ್ಧಿ, ಜ್ಞಾನ
ಸುಧೆ = ಅಮೃತ
ಸುಧಿಯ ಸುಧೆ = ಅನುಭವ ಸಾರಾಮೃತ
ಸುರ = ದೇವತೆ
ಸುರತರು = ಕಲ್ಪವೃಕ್ಷ
ಸುರಧೇನು = ಕಾಮಧೇನು
ಸುರಪತಿ = ಇಂದ್ರ
ಸುರಭಿ = ಕಾಮಧೇನು
ಸುರಲತೆ = ಸ್ವರ್ಗದ ಬಳ್ಳಿ
ಸುರಿಗೆ = ಕತ್ತಿ, ಅಲಗು
ಸುಲಲಿತ = ಸರಳ, ಸುಲಭ, ನಿರ್ಮಲವಾದ, ಬ್ರಹ್ಮ

ಸುಲಿ = ಉಜ್ಜು, ಹಲ್ಲುತಿಕ್ಕು
ಸುಳುಹು = ಸಪ್ಪಳ, ತಿರುಗಾಟ
ಸೂಕರ = ಹಂದಿ
ಸೂಡು = ತಲೆಯಲ್ಲಿ ಧರಿಸು, ಮುಡಿ
ಸೂತ = ಸೇವಕ, ದಾಸ್ಯವೃತ್ತಿಯವ
ಸೂರೆ = ಸುಲಿಗೆ
ಸೂಸು = ಹೊರಚೆಲ್ಲು, ಒತ್ತಿಬರು, ಹರಿದಾಡು, ಪ್ರಕಟವಾಗು
ಸೆಣಸು = ಸಿಟ್ಟಿಗೇಳು, ಲೋಪಿಸು
ಸೊಡರು = ದೀಪ
ಸೊಣಗ = ನಾಯಿ
ಸೊಬಗು = ಅಲಂಕಾರ, ಚೆಲುವಿಕೆ
ಸೊಮ್ಮು = ಸೊತ್ತು, ಸಾಮಾನು
ಸೊಲ್ಲರಿವ = ಅಪೇಕ್ಷೆಯನ್ನು ತಿಳಿದುಕೊಳ್ಳುವ
ಸೋಪಾನ = ನಿಚ್ಚಣಿಕೆ, ಜಿಂದಿಗೆ
ಸೋಮಶಂಕರ = ಶಿವ
ಸ್ಮರ = ಕಾಮ
ಸ್ಮರಹರ = ಕಾಮನನ್ನು ಕೊಂದವ, ಶಿವ
ಸ್ಥಾನ = ದೇವಸ್ಥಾನ, ಗುಡಿ

## ಹ

ಹಗರಣ = ವಿನೋದದ ಮಾತು, ಪ್ರೀತಿಯ ನುಡಿ
ಹಂಗ = ನೀಲ ಬಣ್ಣದ ಪಕ್ಷಿ
ಹಂಗಳಿದ ಸೀರೆ = ಜೀರ್ಣವಾದ ವಸ್ತ್ರ, ಪಡಿಕ
ಹಗೆಯದ ಭತ್ತ = ಕಣಜಕ್ಕೆ ಹಾಕಿದ ಭತ್ತ, ಹಳೆಯ ಭತ್ತ
ಹಂಗಾಳು — ಸೇವಕ, ಜೀತದ ಆಳು
ಹಂಚು ಹರಿಯಾಗು = ಹಾಳಾಗು
ಹಡಪಿಗ = ದೊರೆಗಳಿಗೆ ತಾಂಬೂಲ ಕೊಡುವವ, ಸೇವಕ

ಹಡೆಗು = ಹೊಂದು, ಬೆಲೆಬಾಳು
ಹಣ = ನಾಲ್ಕಾಣೆ ಎಂಟು ಕಾಸು
ಹಣ್ಣು = ಹಬ್ಬು ವಿಸ್ತರಿಸು
ಹಣ್ಣಿದ = ಒಡ್ಡಿದ, ಪ್ರಾರಂಭಿಸಿದ, ಹೂಡಿದ
ಹತ್ತು = ಬೆನ್ನಟ್ಟು ಏರು
ಹತ್ತೆ = ಹತ್ತಿರ, ಸಮೀಪ
ಹತ್ತೆವಿಡಿ = ಜಾಗ್ರತೆಯಿಂದಿರು
ಹದದ = ಎಳೆಯ
ಹದಿರು = ರೀತಿ, ಪ್ರಕಾರ, ತರ
ಹದುಳ = ಚೆನ್ನಾಗಿರುವ, ರುಚಿಕರವಾದ, ಕ್ಷೇಮ, ಶುಭ, [ ಮಂಗಲ
ಹಂದೆ = ಹೇಡಿ, ಪುಕ್ಕ
ಹಯ = ಕುದುರೆ
ಹಯನು = ಹಿಂಡುವ ಪಶು
ಹರದ = ವ್ಯಾಪಾರಿ
ಹರದೆ = ಹೆಂಡತಿ
ಹರಣ = ಹಲ್ಲಣ, ಪ್ರಾಣ, ಜೀವ
ಹರಸು = ಹೊಗಳು, ಪೂಜಿಸು
ಹರಿ = ಆಟದಲ್ಲಿ ನೆನಸಿದಂತೆ ಬೀಳು, ಸಫಲವಾಗು
ಹರಿ = ಸಿಂಹ. ವಿಷ್ಣು
ಹರಿಗೆ = ಡಾಲು, ಗುರಾಣಿ, ಚಿಲಕತ್ತು
ಹರಿವ ಹಕ್ಕಿ = ಮನಸ್ಸು
ಹರಿವಾಣ = ತಟ್ಟೆ, ತಾಟು, ಮಣ್ಣಿನಪಾತ್ರೆ
ಹರುವಾಗು = ದೂರವಾಗು, ಮುಕ್ತಿ ಲಭಿಸು
ಹವಣ = ಮೇಳ, ರುಚಿಕಟ್ಟು, ಸ್ವಾದ
ಹಸರ = ಪಸಾರ, ಅಂಗಡಿ
ಹಸುಗೆ = ಭಾಗ
ಹಸುಳೆ = ಚಿಕ್ಕಮಗು, ಬಾಲಕ

ಹಂಸ = ಜೀವಾತ್ಮ, ಶಿವ
ಹಸ್ತಿ = ಆನೆ
ಹಳಚು = ತಿಕ್ಕು, ಮಸೆ, ತಾಗು
ಹಳು = ಹಳವು, ಅಡವಿ, ಕಾಡು, ಅರಣ್ಯ
ಹಾತೆ = ಜೆಂಡುಗನ ಹುಳ
ಹಾಸಂಗಿ = ಕವಡೆಯ ಆಟ, ಚೌಕು ಕಾಯಿ ಮುಂತಾದದ್ದು
ಹಾಸು = ಹಾಸಿದ್ದು, ಹಾಸಿಕೆ
ಹಾಳೆ = ತೆಳುವಾದ ಕಾಗದ, ಹಂಚು
ಹಿಂಗು = ಇಲ್ಲದಂತಾಗು, ಕಳೆದುಹೋಗು
ಹಿಡಿ = ಗ್ರಹಿಸು
ಹಿಡಿವಡೆ = ಬಂಧಿಸು, ಬಂಧಿಸಲ್ಪಡು
ಹುತ್ತ = ಗೆದ್ದಲಿಯ ಮನೆ, ಮೂಲ, ಆಗರ
ಹುತ್ತಿನ ಹುಳ = ಹಾವು, ಸರ್ಪ
ಹುಯ್ಯಲು = ಒದರಾಟ, ಕೂಗಾಟ
ಹುರಿಹಲ್ಲು = ಮೊನೆಯಾದ ಹಲ್ಲು
ಹುರಿಹುಗಿಲು = ಒಡಕು, ಭೇದ
ಹುಲ್ಲು ಸರವೆ = ಹುಲ್ಲು ಹಗ್ಗ
ಹುಲ್ಲೆ = ಚಿಗರಿ, ಎರಳೆ
ಹುಳಿಯಿಟ್ಟಿರ್ದ ತಿಳಿ = ಮಜ್ಜಿಗೆ
ಹೂಣು = ಹುಗಿ, ತತ್ಪರನಾಗು, ತಾದಾತ್ಮ್ಯವಾಗು
ಹೂಸು = ಹಚ್ಚು, ಲೇಪಿಸು
ಹಗ್ಗಡೆ = ಮುಖ್ಯಸ್ಥ ಹಿರಿಯ, ಗೌಡ
ಹೆಮ್ಮಿಟಲಿ = ಹೆಮ್ಮಕ್ಕಳಿಗೆ ಗಿಡ
ಹೇಮ ಹೇಮಿಗಳು = ಬ್ರಹ್ಮ, ವಿಷ್ಣು, ಶಿವ ಮೊದಲಾದವರು
ಹೇಮಾಂಗ, ವಿಷ್ಣು
ಹೇಮಗರ್ಭ, ಬ್ರಹ್ಮ
ಹೇಮನಗಧಾಮ, ಶಿವ

ಹೇಗ = ಮರುಳ, ಮೂರ್ಖ, ದಡ್ಡ
ಹೇಮ = ಅಸಹ್ಯವಾದ
ಹೇವ = ನಾಚಿಕೆ, ಸ್ವಾಭಿಮಾನ
ಹೇರಿಟ್ಟೆ = ದೊಡ್ಡ ಈಟಿ
ಹೇರೆಕ್ಕೆ = ದೊಡ್ಡ ಎಕ್ಕೆಗಿಡ
ಹೊಗೆ = ಕಟ್ಟಿಗೆಯ ಹೊಗೆ, ದುಃಖ, ಕಷ್ಟ, ಸಾವು
ಹೊದ್ದು = ಹೊಂದು, ಆಶ್ರಯಿಸು
ಹೊನ್ನಾಗರ = ಮೇರು ಪರ್ವತ
ಹೊಮ್ಮರಾಲ = ಹಂಸ, ಬ್ರಹ್ಮ
ಹೊಮ್ಮು = ರೀತಿ, ಪ್ರಕಾರ
ಹೊರಸು = ಪಾರಿವಾಳ
ಹೊರೆವ = ಹೊಟ್ಟೆಹೊರಕೊಳ್ಳುವವ, ಧರಿಸಿದ, ಉಳ್ಳ
ಹೊಲಬು=(೧)ರೀತಿ,ಮಾರ್ಗ (೨) ಗುಟ್ಟು,ರಹಸ್ಯ (೩)ಮೋಕ್ಷ
ಹೊಲ್ಲ = ಬೇಡ, ಅಯೋಗ್ಯ
ಹೊಸೆ = ಕೆಲಸಮಾಡು, ತಿಕ್ಕು
ಹೊಳಲು = ಪಟ್ಟಣ, ಊರು
ಹೊಳ್ಳು = ಜೊಳ್ಳು, ಏನಿಲ್ಲದ್ದು, ಬರಿ
ಹೋಟೆ = ಮರದ ಟೊಳ್ಳು, ತೊಗಟೆ
ಹೋರು = ಹೋರಾಡು, ಪ್ರಯತ್ನಿಸು, ಜಗಳವಾಡು

---

# ಬೆಡಗುಗಳ ಅರ್ಥ

## ೨೦೨೬–೨೧೦೦

೨೦೨೬ ಸುಣ್ಣದ ಹರಳು. ೨೦೨೭ ಮಿಂಚು, ಗುಡುಗು, ಸಿಡಿಲು. ೨೦೨೮ ಸೂರ್ಯೋದಯದ ಎಳೆ ಬಿಸಿಲು. ೨೦೨೯ ಹರಿಯುವ ಹೊಳೆ. ೨೦೩೦ ಬೆಂಕಿ, ಉರಿ. ೨೦೩೧ ವೀಣೆಯ ತಂತಿ. ೨೦೩೨ ತಲೆಯ ಕೂದಲು. ೨೦೩೩ ಮೆಣಸು. ೨೦೩೪ ನವಿಲು. ೨೦೩೫ ಹೆಗಲ ಮೇಲೆ ನೀರು ತರುವ ಅಡ್ಡಕೋಲು. ೨೦೩೬ ಕತ್ತಲೆ ನೆರಳುಗಳಿಲ್ಲದ ಸೂರ್ಯ. ೨೦೩೭ ಮೃಗದ ಬಲೆ. ೨೦೩೮ ಪಿಚಕಾರಿ, ಜೀಕಳಿ, ಇಲ್ಲವೆ ತುಬಾಕಿ, ಬಂದೂಕು. ೨೦೩೯, ಹುಂಜ ಕೋಳಿ ೨೦೪೦ ಸೀರೆ, ಕಣ, ಜವಳಿ ೨೦೪೧ ಇಕ್ಕಳ, ತಂಡಾನ. ೨೦೪೨ ಬೀಸುವ ಕಲ್ಲು. ೨೦೪೩ ಕಡಗೋಲು ೨೦೪೪ ಮೋಡ. ೨೦೪೫ ಬಾಣ. ೨೦೪೬ ಮಕ್ಕಳ ತೊಟ್ಟಿಲು, ೨೦೪೭ ಕಬ್ಬಿಣ ತಿಕ್ಕುವ ಅರಸ. ೨೦೪೮ ಯಾತ, ಕಪ್ಪಲಿ. ೨೦೪೯ ಕರ್ಪೂರದ ತೈಲ. ೨೦೫೦ ಆಡು, ಮೇಕೆ. ೨೦೫೧ ಬೆಂಕಿ ಮಾಡುವ ಒಲೆ ೨೦೫೨ ಅಡಿಗೆಯ ಹುಟ್ಟು ೨೦೫೩ ಎಡೆಯಲ್ಲಿ ಬಿದ್ದ ನೊಣ. ೨೦೫೪ ಗಿಳಿ. ೨೦೫೫ ಮುಳ್ಳು ಹಂದಿ, ಏದು. ೨೦೫೬ ಹೊಲಸಲ್ಲಿರುವ ಬೆಚ್ಚು, ಬೆದರು ೨೦೫೭ ಮೀನಿನ ಬಲೆ. ೨೦೫೮ ದೇಹ ಜನ್ಮಾಂತರ, ಮೋಕ್ಷ. ೨೦೫೯ ಸಾಣೆಯ ಕಲ್ಲು. ೨೦೬೦ ಗಂಧದ ಕೊರಡು. ೨೦೬೧ ಶಾವಿಗೆ ಮಾಡುವ ಮಣೆ, ಒತ್ತೊರಳು. ೨೦೬೨ ( ವೀಳೆ, ಸುಣ್ಣ, ಅಡಿಕೆ ) ತಾಂಬೂಲ ೨೦೬೩ ಒಂದು ವರ್ಷ ೨೦೬೪ ನೀರಾಡುವ ಕಣ್ಣು. ೨೦೬೫ ಹೊಲಿದ ಅಂಗಿ, ಕೋಟು ೨೦೬೬ ನೂಲು ಸುತ್ತಿದ ಕಂಡಿಕೆ ೨೦೬೭ ಮೀನಿನ ಬಲೆ ೨೦೬೮ ಯುಗ. ೨೦೬೯–೮೪ ? ೨೦೮೫ ಮಾವಿನ ಹಣ್ಣು ೨೦೮೬ ಗಾಳಿಯ ಪಟ. ೨೦೮೯ ಕೊಡಲಿಯ ಕಾವು, ಕೋಲು, ಇದ್ದಿಲು. ೨೦೯೦ ಬೆಳಕಿಂಡಿ, ಗವಾಕ್ಷ. ೨೦೯೧ ಗರಗಸ. ೨೦೯೨ ? ೨೦೯೩ ? ೨೦೯೪ ಉಪ್ಪು. ೨೦೯೫ ಹೊಗೆ ೨೦೯೬ ಉಗಿ, ಮೋಡ, ಮಳೆ. ೨೦೯೭ ನೀರುಳ್ಳಿ, ಉಳ್ಳೇಗಡ್ಡೆ. ೨೦೯೮ ಬಾಳೆ. ೨೦೯೯ ? ೨೧೦೦ ?

---

# ಅದೇ ಗ್ರಂಥಕರ್ತರಿಂದ ರಚಿತವಾದ ಪುಸ್ತಕಗಳು

೧. ಬನಾರಸಕ್ಕೆ ಬೆತ್ತಲೆ ಹೇಮಿನ ವಿನಂತಿ
ಕರ್ನಾಟಕ ಪ್ರಿಂಟಿಂಗ ವರ್ಕ್ಸ್, ಧಾರವಾಡ ೧೯೨೧

೨ ಹಿಂದೂ ಸಮಾಜ ಹಿತಚಿಂತಕ
ಕೊಡಿಯಾಲ್ ಬೈಲ್ ಪ್ರೆಸ್, ಮಂಗಳೂರು ೧೯೩೧

೩ ಮಕ್ಕಳ ಶಿಕ್ಷಣ ಪರ
ಬೆಂಗಳೂರು ಮುದ್ರಣಾಲಯು ೧೯೨೩

೪ ವಾಮನ ತಿಲಕರ ಜೀವನ ಚರಿತೆ
ಕನ್ನಡ ಮಿಶನ್, ಮಂಗಳೂರು ೧೯೨೨

೫ ಬಸವೇಶ್ವರನೂ ಅಸ್ಪೃಶ್ಯರ ಉದ್ಧಾರವೂ
ವಾಗ್ವಿಲಾಸ ಪ್ರಿಂಟಿಂಗ್ ಪ್ರೆಸ್, ಹುಬ್ಬಳ್ಳಿ ೧೯೩೩

೬ ಸಾಧುಸಿಂಗರ ದೃಷ್ಟಾಂತದರ್ಪಣ ( ಭಾಗ ೧ )
ಬಾಸೆಲ್ ಮಿಶನ್ ಪ್ರೆಸ್, ಮಂಗಳೂರು ೧೯೩೯

೭ ಮೋಳಿಗೆಯ ಮಾರಯ್ಯನ ವಚನಗಳು
ತೋಂಟದಾರ್ಯ ಮುದ್ರಣಾಲಯು, ಧಾರವಾಡ ೧೯೫೦

೮ ಅನುಭವ ಮಂಟಪದ ಐತಿಹಾಸಿಕತೆ
ಸರಸ್ವತಿ ಮುದ್ರಣಾಲಯು, ಧಾರವಾಡ ೧೯೫೧

೯ ಸಾಧುಸಿಂಗರ ದೃಷ್ಟಾಂತದರ್ಪಣ
ಮೃತ್ಯುಂಜಯ ಮುದ್ರಣಾಲಯು, ಧಾರವಾಡ ೧೯೫೩

೧೦ ಸಿದ್ಧರಾಮ ಸಾಹಿತ್ಯಸಂಗ್ರಹ
ಮೃತ್ಯುಂಜಯ ಮುದ್ರಣಾಲಯು, ಧಾರವಾಡ ೧೯೫೫

೧೧. ಬನಾರಸಕ್ಕೆ ಬೆತ್ತಲೆ ಹೇಮಿತ ವಿನಂತಿ
೨ನೆಯ ಮುದ್ರಣ, ಮೃತ್ಯುಂಜಯ ಪ್ರೆಸ್, ಧಾರವಾಡ ೧೯೫೬

೧೨ ಪೂಜ್ಯ ಉತ್ತಂಗಿಯವರ ಜೀವನ ಚರಿತೆ
ಮೃತ್ಯುಂಜಯ ಪ್ರೆಸ್, ಧಾರವಾಡ ೧೯೫೬

೧೩. ಆದಯ್ಯನ ವಚನಗಳು
ಲಿಂಗರಾಜ ಆರ್ಟ ಪ್ರೆಸ್, ಧಾರವಾಡ ೧೯೫೭

---

# ಸರ್ವಜ್ಞ ವಚನಗಳು

ಸರ್ವಜ್ಞ ವಚನಗಳು ( ನಾಹಿತ್ಯಾವೃತ್ತಿ )
ಕರ್ನಾಟಕ ಪ್ರಿಂಟಿಂಗ್ ವರ್ಕ್ಸ್, ಧಾರವಾಡ. ಪ್ರಥಮ ಮುದ್ರಣ ೧೯೨೪

ಸರ್ವಜ್ಞ ವಚನಗಳು ( ಸಾಹಿತ್ಯಾವೃತ್ತಿ )
ಕ. ಪ್ರಿಂ. ವ ಧಾರವಾಡ ದ್ವಿತೀಯ ಮುದ್ರಣ ೧೯೨೭

ಸರ್ವಜ್ಞ ವಚನಗಳು ( ನಾಹಿತ್ಯಾವೃತ್ತಿ )
ಕ. ಪ್ರಿಂ ವ. ಧಾರವಾಡ ತೃತೀಯ ಮುದ್ರಣ ೧೯೩೦

ಸರ್ವಜ್ಞ ವಚನಗಳು ( ಜೇಬಿನಾವೃತ್ತಿ )
ಕ ಪ್ರಿಂ. ವ. ಧಾರವಾಡ. ೪ನೆಯ ಮುದ್ರಣ ೧೯೩೫

ನರ್ವಜ್ಞ ವಚನಗಳು ( ಜೇಬಿನಾವೃತ್ತಿ )
ಕ. ಪ್ರಿಂ. ವ. ಧಾರವಾಡ ೫ನೆಯ ಮುದ್ರಣ ೧೯೩೮

ಸರ್ವಜ್ಞ ವಚನಗಳು ( ಅಗ್ಗದಾವೃತ್ತಿ )
ಮನೋಹರ ಪ್ರೆಸ್, ಧಾರವಾಡ. ೬ನೆಯ ಮುದ್ರಣ ೧೯೪೨

ಸರ್ವಜ್ಞ ವಚನಗಳು ( ಅಗ್ಗದಾವೃತ್ತಿ )
೭ನೆಯ ಮುದ್ರಣ ೧೯೪೪

ಸರ್ವಜ್ಞ ವಚನಗಳು ( ತಿದ್ದಿದ ನೂತನಾವೃತ್ತಿ )
೮ನೆಯ ಮುದ್ರಣ ೧೯೫೦

ಸರ್ವಜ್ಞ ವಚನಗಳು ( ತಿದ್ದಿದ ನೂತನಾವೃತ್ತಿ )
೯ನೆಯ ಮುದ್ರಣ ೧೯೫೩

ಸರ್ವಜ್ಞ ವಚನಗಳು ( ತಿದ್ದಿದ ನೂತನಾವೃತ್ತಿ )
೧೦ನೆಯ ಮುದ್ರಣ ೧೯೫೭

---

# ಕನ್ನಡ ಲೇಖಗಳು

" ಸರ್ವಜ್ಞ ವಚನಗಳ ಸಂಶೋಧನೆ "
ವಾಗ್ಭೂಷಣ ಪತ್ರಿಕೆ, ವಿದ್ಯಾವರ್ಧಕ ಸಂಘ, ಧಾರವಾಡ ೧೯೩೫

" ವಚನಾಂಕಿತಗಳಲ್ಲಿರುವ ಐತಿಹಾಸಿಕಾಂಶಗಳು "
ಲಿಂಗಾಯತ ಸಾಹಿತ್ಯ ಸಮಿತಿ ಪತ್ರಿಕೆ, ಸಂಪುಟ ೨.
ಜುಲೈ ೧೯೪೨, ಸಂಪುಟ ೩, ಅಕ್ಟೋಬರ ೧೯೪೩

" ಜನಪದ ಸಾಹಿತ್ಯ "
ಪ್ರಬುದ್ಧ-ಕರ್ನಾಟಕ ಬೆಳ್ಳಿಯ ಸಂಚಿಕೆ, ೧೯೪೫

---

# Books and Articles in English

PUBLISHED

" **Anubhava Mantapa** "
Basavaraj Press, Haveri 1932
Samyukta Karnatak Press, 1956 (*2nd Edition*)

" **Synopsis for the Advanced Studies in Lingayatism** "
Contribution of Christion Missionaries to the Development of Karnatak 1955
Karnataka Darsana ( *Page 377—385* )

UNPUBLISHED

" **Coneordance to Bhagavadgita** "
( *Vols, I-IV* )

Creation a Wonderful Child of God
( *A Poem of 100 verses* )

---

## *SARVAJNA*

The naked bard of Karnatak
With ever open heart
Full of love and holy anger
For cleansing human heart
Hath sung the naked truth
In wise and smiling manner
In the ***homely triplet***
Without any art
In sweet and simple Kannada
The language of the heart

— *C D Uttangi*



ಕರ್ನಾಟಕವನ್ನು ಸಮೃದ್ಧಿಪಡಿಸಿದ ಕನ್ನಡದ ಶ್ರೇಷ್ಠ ಸಾಹಿತಿಗಳಲ್ಲಿ ಪೂಜ್ಯ ಉತ್ತಂಗಿಯವರೊಬ್ಬರು. ೧೮೮೧ರಲ್ಲಿ ಇವರ ಜನನ. ಇವರು ಸ್ವಾಧ್ಯಾಯನದಿಂದ ವಿದ್ಯಾರ್ಜನ ಮಾಡಿದ ಸ್ವತಂತ್ರ ವಿಚಾರಕರು. ತತ್ವಶಾಸ್ತ್ರ, ಮನೋಭಾವಶಾಸ್ತ್ರ, ತುಲನಾತ್ಮಕ ಧರ್ಮಶಾಸ್ತ್ರ ಮೊದಲಾದ ವಿಷಯಗಳನ್ನು ಆಳವಾಗಿ ಅಭ್ಯಸಿಸಿದವರು. 'ಕನ್ನಡನಾಡಿನ ಸಂದುಗೊಂದಿಯಲ್ಲಿ ಮಣ್ಣು ಮರೆಯಾಗಿ ಬಿದ್ದ' ಸರ್ವಜ್ಞ ವಚನಗಳನ್ನು ಸಂಗ್ರಹಿಸಿ ಶುದ್ಧೀಕರಿಸಿ ೧೯೨೪ರಲ್ಲಿ ಒಂದು ಉದ್ಗ್ರಂಥವನ್ನು ನೀಡಿ ಕನ್ನಡ ಸಾಹಿತ್ಯ ನಿರ್ಮಾಪಕರಲ್ಲಿಗ ಮಹಾ ಜನಕರೆನಿಸಿಕೊಂಡರು. ಬಸವಣ್ಣನವರಿಂದ ಕಲ್ಯಾಣದಲ್ಲಿ ಸ್ಥಾಪಿತವಾದ 'ಅನುಭವಮಂಟಪ'ವನ್ನು ಶೋಧಿಸಿ ಆ ಬಗೆಗೆ ಇಂಗ್ಲಿಷಿನಲ್ಲಿ ಚಿಕ್ಕದೊಂದು ಗ್ರಂಥವನ್ನು ೧೯೩೦ರಲ್ಲಿ ಪ್ರಸಿದ್ಧಿಸಿದರು. 'ಅನುಭವ ಮಂಟಪ'ವನ್ನು ಪ್ರಥಮತಃ ಬೆಳಕಿಗೆ ತಂದ ಶ್ರೇಯಸ್ಸು ಶ್ರೀ ಉತ್ತಂಗಿಯವರಿಗೇನೇ ಸಲ್ಲುತ್ತದೆ ಇವರಿಂದ ರಚಿತವಾದ 'ಅನುಭವ ಮಂಟಪದ ಐತಿಹಾಸಿಕತೆ' 'ಸಿದ್ಧರಾಮ ಸಾಹಿತ್ಯಸಂಗ್ರಹ' ಎಂಬ ಶಿವ ಶರಣಾತ್ಮಕ ಗ್ರಂಥಗಳು ಸಂಶೋಧಕ ಸಾಹಿತಿಗಳಿಗೆ ಮಾರ್ಗದರ್ಶಕವಾಗಿವೆ. ಜಾತ್ಯತೀತ ಭಾರತವನ್ನು ರಚಿಸಲು ಹವಣಿಸುತ್ತಿರುವ ಇಂದಿನ ರಾಷ್ಟ್ರದಲ್ಲಿ ಅವರು ಸುಮಾರು ೩೫ ವರುಷಗಳ ಹಿಂದೆಯೇ ರಾಷ್ಟ್ರೋನ್ನತಿಗಾಗಿ' ಬರೆದ 'ಹಿಂದೂ ಸಮಾಜ ಹಿತಚಿಂತಕ', 'ಬಸವೇಶ್ವರನೂ ಅಸ್ಪೃಶ್ಯರ ಉದ್ಧಾರವೂ', 'ವಾಮನ ತಿಲಕರ ಚರಿತ್ರೆ', 'ದೃಷ್ಟಾಂತದರ್ಪಣ' ಮುಂತಾದ ಗ್ರಂಥಗಳು ಅವರ ಸಮಾಜಸೇವೆಗೆ ಹೆಗ್ಗುರುತುಗಳಾಗಿವೆ ಅವರು ೧೯೪೯ರಲ್ಲಿ ಕಲಬುರ್ಗಿಯಲ್ಲಿ ಜರುಗಿದ ೩೨ನೆಯ ಸಾಹಿತ್ಯಸಮ್ಮೇಳನದ ಅಧ್ಯಕ್ಷಪೀಠವನ್ನಲಂಕರಿಸಿದ್ದರು. ಈಗ ಅವರಿಗೆ ೭೫ ವರ್ಷ ಪ್ರಾಯ. ಈ ವೃದ್ಧಾಪ್ಯದಲ್ಲಿಯೂ ಅವರು ಕನ್ನಡ ಸಾಹಿತ್ಯಕ್ಕೆ ಸೇವೆ ಸಲ್ಲಿಸುತ್ತಿದ್ದಾರೆ.